ಆನಂದ ಕರ್ಣಾಟಕ ಗ್ರಂಥರತ್ನಮಾಲೆ. ನಂ. ೨.

ಶ್ರೀವ್ಯಾಸಮಹರ್ಷಿಪ್ರಣೀತ

# ಶ್ರೀಮದ್ಭಾಗವತವು

ಕರ್ಣಾಟಕ ವಚನವು

# ಚತುರ್ಥ ಸ್ಕಂಧವು.



ಶ್ರೀಮದ್ಯದುಶೈಲನಿವಾಸರಸಿಕ
ಪಂಡಿತ ಪೇವತಿಶಿಖಾಮಣಿ ಅಳಸಿಂಗರಾಚಾರ್ಯವಿರಚಿತವು.

Vol. III.

ಮ ದ್ರಾ ಸು
ಆನಂದಮುದ್ರಾಕ್ಷರಶಾಲೆಯಲ್ಲಿ ಮುದ್ರಿತವಾಗಿ,
ಆರ್. ವೆಂಕಟೇಶ್ವರ ಕಂಪೆನಿಯರಿಂದ
ಪ್ರಕಟಿಸಲ್ಪಟ್ಟಿದೆ.

1925.

# ಚತುರ್ಥಸ್ಕಂಧದ ವಿಷಯಾನುಕ್ರಮಣಿಕೆ.

---

---

## ಚತುರ್ಥಸ್ಕಂಧದೊಳಗಣ ಚಿತ್ರಪಟಗಳು.









ಶ್ರೀಕೃಷ್ಣಾಯ ಪರಬ್ರಹ್ಮಣೇನಮಃ.

# ಶ್ರೀಮದ್ಭಾಗವತವು

## ಚತುರ್ಥಸ್ಕಂಧವು.

### ಸ್ವಾಯಂಭುವಮನುವಿನಿಂದುಂಟಾದ ಪ್ರಜಾವೃದ್ಧಿ ಕ್ರಮವು.

ಮೈತ್ರೇಯಮಹರ್ಷಿಯು ತಿರುಗಿ ವಿದುರನ್ನು ಕುರಿತು “ವಿದುರಾ! ಕೇಳು? ಸ್ವಾಯಂಭುವಮನುವಿಗೆ ಶತರೂಪೆಯಲ್ಲಿ ಆಕೂತಿಯೆಂದೂ, ದೇವಹೂತಿಯೆಂದೂ, ಪ್ರಸೂತಿಯೆಂದೂ ಮೂವರು ಕನ್ಯಕೆಯರು ಹುಟ್ಟಿದರಷ್ಟೆ? ಅವರಲ್ಲಿ! ದೇವಹೂತಿಯನ್ನು ಕರ್ದಮನಿಗೆ ಕೊಟ್ಟು ವಿವಾಹಮಾಡಿದನೆಂಬ ಕಥೆಯನ್ನು ಹಿಂದೆಯೇ ತಿಳಿಸಿರುವೆನು. ಪ್ರಸೂತಿಯೆಂಬ ಮತ್ತೊಬ್ಬ ಕುಮಾರಿಯನ್ನು, ತನ್ನ ಪತ್ನಿಯಾದ ಶತರೂಪೆಯ ಅನುಮತಿಯಿಂದ ರುಚಿಯೆಂಬವನಿಗೆ ಕೊಟ್ಟು ವಿವಾಹಮಾಡಿದನು. ಸ್ವಾಯಂಭುವಮನುವು ಈ ಮೂವರು ಕುಮಾರಿಯರನ್ನಲ್ಲದೆ ಇಬ್ಬರು ಗಂಡುಮಕ್ಕಳನ್ನೂ ಪಡೆದಿದ್ದನು. ಹಾಗಿದ್ದರೂ ತನಗೆ ಇನ್ನೂ ಹೆಚ್ಚಾಗಿ ಗಂಡುಮಕ್ಕಳಿರಬೇಕೆಂದು ಬಯಸಿ, ಪ್ರಸೂತಿಯನ್ನು ರುಚಿಗೆ ಕೊಟ್ಟು ವಿವಾಹಮಾಡುವಾಗ,*ಪುತ್ರಿಕಾಧರ್ಮವನ್ನನುಸರಿಸಿ, ಅವಳಲ್ಲಿ ಹುಟ್ಟುವ ಪುರುಷಸಂತಾ

---

* ಇಲ್ಲಿ ಪುತ್ರಿಕಾಧರ್ಮವೆಂದರೆ ‘ಅಭ್ರಾತೃಕಾಂ ಪ್ರದಾಸ್ಯಾಮಿ ತುಭ್ಯಂ ಕನ್ಯಾಮಲಂಕೃತಾಮ್ । ಅಸ್ಯಾಂ ಯೋಜಾಯತೇ ಪುತ್ರಸ್ಸ ಮೇ ಪುತ್ರೋಭವಿಷ್ಯತಿ” ಎಂಬುದಾಗಿ ತನಗೆ ಪುತ್ರಸಂತಾನವಿಲ್ಲದವನು,ಕನ್ಯಾದಾನವನ್ನು ಮಾಡುವಾಗ, ಮುಂದೆ ಅವ

ನವನ್ನು ತನಗೇ ಕೊಟ್ಟುಬಿಡಬೇಕೆಂಬ ನಿರ್ಣಯದಿಂದ ಮದುವೆಮಾಡಿ ಕೊಟ್ಟನು. ಹೀಗೆ ವಿವಾಹಿತನಾದ ರುಚಿಯು, ಪತ್ನೀಸಮೇತನಾಗಿ ತನ್ನ ಬ್ರಾಹ್ಮಣಧರ್ಮಗಳನ್ನು ತಪ್ಪದೆ ನಡೆಸುತ್ತ, ಅದರಿಂದ ದಿವ್ಯತೇಜಸ್ವಿಯಾಗಿ, ದೊಡ್ಡತಪಸ್ಸನ್ನು ಹಿಡಿದು, ಶ್ರೀಮನ್ನಾರಾಯಣನನ್ನು ಆರಾಧಿಸುತಿದ್ದು, ಆ ಭಗವದನುಗ್ರಹದಿಂದ, ಒಬ್ಬ ಕುಮಾರನನ್ನೂ, ಒಬ್ಬ ಕುಮಾರಿಯನ್ನೂ ಪಡೆದನು. ವಿದುರಾ! ಈ ಮಕ್ಕಳಿಬ್ಬರೂ ಸಾಮಾನ್ಯಶಿಶುಗಳೆಂದೆಣಿಸಬೇಡ! ಯಜ್ಞರೂಪಿಯಾದ ಶ್ರೀಮನ್ನಾರಾಯಣನೇ ಪುತ್ರರೂಪದಿಂದ ಹುಟ್ಟಿ ಯಜ್ಞನೆಂಬ ಹೆಸರಿನಿಂದ ಪ್ರಖ್ಯಾತನಾದನು. ಆ ಭಗವಂತನಿಗೆ ನಿತ್ಯಾನಪಾಯಿನಿಯಾದ ಶ್ರೀಮಹಾಲಕ್ಷ್ಮಿಯು ಕನ್ಯಾರೂಪದಿಂದ ಹುಟ್ಟಿ, ದಕ್ಷಿಣೆಯೆಂಬ ಹೆಸರಿನಿಂದ ಪ್ರಖ್ಯಾತಳಾದಳು. ಈ ಮಕ್ಕಳು ಜನಿಸಿದೊಡನೆ ಸ್ವಾಯಂಭುವಮನುವು ಪರಮಸಂತೋಷಭರಿತನಾಗಿ, ತಾನು ಮೊದಲು ಮಾಡಿದ್ದ ನಿಬಂಧನೆಯಂತೆ, ಭಗವದಂಶದಿಂದ ಹುಟ್ಟಿ ದಿವ್ಯತೇಜಸ್ಸಿನಿಂದ ಬೆಳಗುತಿದ್ದ ಆ ಗಂಡುಶಿಶುವನ್ನು ತನಗೆ ಪುತ್ರನನ್ನಾಗಿ ಸ್ವೀಕರಿಸಿ, ಮನೆಗೆ ಕರೆತಂದು ಪೋಷಿಸುತ್ತಬಂದನು. ಅತ್ತಲಾಗಿ ರುಚಿಯೂ ತನ್ನ ಕುಮಾರಿಯಾದ ದಕ್ಷಿಣೆಯನ್ನು ಬಹಳಮೋಹದಿಂದ ಬೆಳೆಸುತ್ತ ಬಂದನು. ಇವಳಿಗೆ ವಿವಾಹಯೋಗ್ಯವಾದ ಯೌವನವು ಬಂದಕೂಡಲೆ, ಲಕ್ಷ್ಮ್ಯಂಶಸಂಭೂತೆಯಾದ ಇವಳಿಗೂ, ನಾರಾಯಣಾಂಶದಿಂದ ಹುಟ್ಟಿದ ಆ ಯಜ್ಞನಿಗೂ ಪರಸ್ಪರಾನುರಾಗವು ಬೆಳೆದು, ಕೊನೆಗೆ*ಅವರಿಬ್ಬರಿಗೂ ವಿವಾಹವು ನಡೆಯಿತು. ಈ ದಂಪತಿಗಳಿಬ್ಬರೂ ಸಮಾನ ಪ್ರೀತಿಯುಳ್ಳವರಾಗಿಯೂ, ನಿತ್ಯಸಂತೋಷಿಗಳಾಗಿಯೂ ಇದ್ದುದರಿಂದ, ಇವರ ಮನೋಭಾವಕ್ಕೆ ತಕ್ಕಂತೆ ಇವರಿಗೆ, ತೋಷನೆಂದೂ, ಪ್ರತೋಷನೆಂದೂ ಸಂತೋಷನೆಂದೂ ಭದ್ರನೆಂದೂ, ಶಾಂತಿಯೆಂದೂ, ಇಡಸ್ಪತಿಯೆಂದೂ, ಇಧ್ಮನೆಂದೂ ಕವಿಯೆಂದೂ,

---

ಳಲ್ಲಿ ಹುಟ್ಟಬಹುದಾದ ಗಂಡುಮಗುವನ್ನು ತನಗೆ ಸ್ವೀಕಾರಕೊಡಬೇಕೆಂದು ಅಳಿಯನೊಡನೆ ನಿರ್ಣಯಮಾಡಿಕೊಂಡು ಅವನಿಗೆ ವಿವಾಹಮಾಡಿಕೊಡುವುದು.

* ಇವರಿಬ್ಬರೂ ಏಕೋದರರಾಗಿದ್ದರೂ ಲಕ್ಷ್ಮೀನಾರಾಯಣಾಂಶಸಂಭೂತರಾದುದರಿಂದ, ಇವರಿಗೆ ವಿವಾಹವು ನಡೆದುದು ದೋಷವಿಲ್ಲವೆಂದು ಗ್ರಾಹ್ಯವು.

ವಿಭುವೆಂದೂ, ವಹ್ನಿಯೆಂದೂ, ಸುದೇವನೆಂದೂ, ರೋಚನನೆಂದೂ, ಹೆಸರುಗೊಂಡ ಹನ್ನೆರಡುಮಂದಿ ಮಕ್ಕಳಾದರು. ಇವರೆಲ್ಲರೂ ಹೆಸರಿಗೆ ತಕ್ಕಂತೆ ತುಷಿತರೆಂದೇ ಕರೆಯಲ್ಪಡುತ್ತಿದ್ದರು ಈ ತುಷಿತರೆಂಬ ದೇವತೆಗಳೂ, ಮರೀಚ್ಯಾದಿಮಹರ್ಷಿಗಳೂ, ನಾರಾಯಣಾಂಶಸಂಭೂತನಾದ ಯಜ್ಞನೂ, ಪ್ರಿಯವ್ರತನೆಂದೂ, ಉತ್ತಾನಪಾದನೆಂದೂ ಪ್ರಸಿದ್ಧರಾಗಿಮಹಾಬಲಾಢ್ಯರೆನಿಸಿದ ಸ್ವಾಯಂಭುವಮನುವಿನ ಪುತ್ರರೂ, ಅವರ ಮಕ್ಕಳು, ಮೊಮ್ಮಕ್ಕಳು ಮೊದಲಾಗಿ ಮುಂದಿನಸಂತತಿಯುವರೂ ಪರಂಪರೆಯಾಗಿ ಧರ್ಮದಿಂದ ರಾಜ್ಯಪರಿಪಾಲನವನ್ನು ಮಾಡುತ್ತಬಂದರು. ಸ್ವಾಯಂಭುವಮನ್ವಂತರಕಾಲವೆಲ್ಲಾ ಈ ಸಂತತಿಯುವರೇ ಆಳುತ್ತಬಂದರು. ವಿದುರಾ! ಮನುಚಕ್ರವರ್ತಿಯು ತನ್ನ ಮತ್ತೊಬ್ಬ ಮಗಳಾದ ದೇವಹೂತಿಯನ್ನು ಕರ್ದಮನಿಗೆ ಕೊಟ್ಟು ವಿವಾಹಮಾಡಿದುದನ್ನೂ, ಅವರ ಸಂತತಿಯನ್ನೂ, ಅವರಲ್ಲಿ ಭಗವಂತನು ಕಪಿಲರೂಪದಿಂದವತರಿಸಿದ ವಿಷಯವನ್ನೂ ಇದಕ್ಕೆ ಮೊದಲೇ ನಾನು ನಿನಗೆ ತಿಳಿಸಿರುವೆನಷ್ಟೆ? ಆಮೇಲೆ ಸ್ವಾಯಂಭುವನು ತನ್ನ ಮೂರನೆಯ ಮಗಳಾದ ಪ್ರಸೂತಿಯನ್ನು ಬ್ರಹ್ಮಪುತ್ರನಾದ ದಕ್ಷಪ್ರಜಾಪತಿಗೆ ಕೊಟ್ಟು ಮದಿವೆಮಾಡಿದನು. ಈ ದಕ್ಷಬ್ರಹ್ಮನಿಗೆ ಹುಟ್ಟಿದ ಮಕ್ಕಳು, ಮೊಮ್ಮಕ್ಕಳು ಮುಂತಾದ ಸಂತಾನಪರಂಪರೆಯು ತ್ರೈಲೋಕ್ಯವನ್ನೂ ವ್ಯಾಪಿಸುವಂತೆ ಬಹಳವಾಗಿ ವಿಸ್ತರಿಸಿತು. ಹಿಂದೆ ಕರ್ದಮನಿಗೆ ದೇವಹೂತಿಯಲ್ಲಿ ಒಂಬತ್ತುಮಂದಿ ಕನ್ಯೆಯರು ಹುಟ್ಟಿದರೆಂದೂ, ಅವರೆಲ್ಲರೂ ಮರೀಚಿ ಮೊದಲಾದ ಬ್ರಹ್ಮರ್ಷಿಗಳಿಗೆ ವಿವಾಹಿತರಾದರೆಂದೂ ತಿಳಿಸಿದ್ದೆನಷ್ಟೆ? ಅವರಿಂದ ಹುಟ್ಟಿದ ಸಂತತಿಕ್ರಮವನ್ನು ತಿಳಿಸುವೆನು ಕೇಳು! ಆ ಒಂಬತ್ತುಮಂದಿ ಕನ್ಯೆಯರಲ್ಲಿ ಮೊದಲನೆಯವಳಾದ ಕಲೆಯೆಂಬವಳು .ಮರೀಚಿಯನ್ನು ವರಿಸಿದಮೇಲೆ, ಕಶ್ಯಪನೆಂದೂ, ಪೂರ್ಣಿಮನೆಂದೂ ಇಬ್ಬರು ಮಕ್ಕಳನ್ನು ಹಡೆದಳು. ಇವರಿಂದುಂಟಾದ ಸಂತಾನವೂ ಲೋಕವೆಲ್ಲವನ್ನೂ ಹರಡಿಕೊಂಡಿತು. ಈ ಪೂರ್ಣಿಮನಲ್ಲಿ ವಿರಜನೆಂದೂ, ವಿಶ್ವಗನೆಂದೂ ಇಬ್ಬರು ಗಂಡುಮಕ್ಕಳೂ, ದೇವಕುಲ್ಯೆಯೆಂಬ ಕನ್ಯೆಯೊಬ್ಬಳೂ ಹುಟ್ಟಿದರು. ಪೂರ್ವದಲ್ಲಿ ಹರಿಪಾದೋದ್ಭವೆಯಾದ ಗಂಗೆಯೇ ಈ ದೇವಕುಲ್ಯೆಯೆಂದು ತಿಳಿ!

ಕರ್ದಮನ ಎರಡನೆಯ ಮಗಳಾದ ಅನಸೂಯೆಯೆಂಬವಳು ದತ್ತನೆಂದೂ, ದೂರ್ವಾಸನೆಂದೂ, ಚಂದ್ರನೆಂದೂ.ಹೆಸರುಗೊಂಡ ಮೂರು ಮಕ್ಕಳನು ಪಡೆದಳು. ಈ ಮೂವರೂ ಕ್ರಮವಾಗಿ ವಿಷ್ಣು ಬ್ರಹ್ಮ ರುದ್ರರೆಂಬ ತ್ರಿಮೂರ್ತಿಗಳ ಅಂಶದಿಂದ ಹುಟ್ಟಿದವರು." ಎಂದನು.

ದತ್ತಾತ್ರೇಯಾವತಾರವು.

ಈ ನಡುವೆ ವಿದುರನು "ಓ ಮಹಾತ್ಮಾ! ಅತ್ರಿಮುನಿಯ ಗೃಹದಲ್ಲಿ ಹೀಗೆ ತ್ರಿಮೂರ್ತಿಗಳೂ ಅವತರಿಸಿದುದಕ್ಕೆ ಕಾರಣವೇನು? ಯಾವ ಕಾರ್ಯ್ಯೋದ್ದೇಶದಿಂದ ಈ ಮೂವರೂ ಹೀಗೆ ಅತ್ರಿಕುಮಾರರಾಗಿ ಜನಿಸಿದರು? ಆ ವಿಚಾರವನ್ನು ನನಗೆ ತಿಳಿಸಬೇಕು." ಎಂದನು. ಅದಕ್ಕಾ ಮೈತ್ರೇಯನು, "ವಿದುರಾ ಕೇಳು! ಅತ್ರಿಮಹರ್ಷಿಯು, ತನ್ನ ಜನಕನಾದ ಚತುರ್ಮುಖಬ್ರಹ್ಮನಿಂದ, ಪ್ರಜಾವೃದ್ಧಿಕಾರ್ಯದಲ್ಲಿ ಪ್ರೇರಿಸಲ್ಪಟ್ಟವನಾಗಿ, ತನ್ನ ಪತ್ನಿಯಾದ ಅನಸೂಯೆಯೊಡಗೂಡಿ ಋಕ್ಷವೆಂಬ ಕುಲಪರ್ವತಕ್ಕೆ ಬಂದನು. ಆ ಪರ್ವತದಮೇಲೆ ನಿರ್ವಿಂಧ್ಯೆಯೆಂಬ ಒಂದಾನೊಂದು ನದಿಯು ಪ್ರವಹಿಸುತ್ತಿರುವುದು. ಆ ನದೀತೀರದಲ್ಲಿ ಹೂಗೊಂಚಲುಗಳಿಂದ ತುಂಬಿದ ಮುತ್ತುಗ, ಅಸುಗೆ, ಮುಂತಾದ ವೃಕ್ಷಗಳಿಂದ ನಿಬಿಡವಾದ ಒಂದಾನೊಂದು ವನವುಂಟು. ಈ ಅತ್ರಿಮುನಿಯು ಪತ್ನೀಸಮೇತನಾಗಿ ಆ ವನಕ್ಕೆ ಬಂದು, ಅಲ್ಲಿ ಒಂದೇ ಕಾಲಿನಿಂದ ನಿಂತು ಘೋರವಾದ ತಪಸ್ಸನ್ನು ಮಾಡಲಾರಂಭಿಸಿದನು. ಸುತ್ತಲೂ ನಿರ್ವಿಂಧ್ಯಾನದಿಯ ಪ್ರವಾಹದ ಮೊರೆತದಿಂದ ಶಬ್ದಿತವಾದ ಆ ತಪೋವನದಲ್ಲಿ, ಅತ್ರಿಮುನಿಯು, ನೂರುವರ್ಷಗಳವರೆಗೆ ಕೇವಲ ವಾಯುಭಕ್ಷಣವನ್ನು ಮಾಡುತ್ತ, ಪ್ರಾಣಾಯಾಮದಿಂದ ಮನಸ್ಸನ್ನು ನಿಗ್ರಹಿಸಿ, ಶೀತೋಷ್ಣಾದಿಬಾಧೆಗಳನ್ನೆಣಿಸದೆ, ಸುಖದುಃಖಗಳೊಂದನ್ನೂ ಗಮನಿಸದೆ,ಕ್ರೂರವಾದತಪಸ್ಸನ್ನು ಹಿಡಿದು,ಏಕಪಾದದಿಂದ ನಿಂತು ಭಗವಂತನನ್ನು ಹೀಗೆ ಪ್ರಾರ್ಥಿಸಿದನು- ಸಮಸ್ತಲೋಕಗಳ ಸೃಷ್ಟಿಸ್ಥಿತಿಲಯಕರ್ತನಾದ ಭಗವಂತನನ್ನು ನಾನುಶರಣುಹೊಂದಿರುವೆನು.ಆಭಗವಂತನು ತನಗೆ ಸಮಾನನಾದ ಪುತ್ರನನ್ನೇ ನನಗೆ ಕರುಣಿಸಬೇಕು!" ಎಂದು ಆ ವಿಷಯವನ್ನೇ ಮನಸ್ಸಿನಲ್ಲಿ ಚಿಂತಿಸುತಿದ್ದನು. ಹೀಗೆ ಅತ್ರಿಮುನಿಯು ಪ್ರಾಣಾಯಾಮವನ್ನು ಹಿಡಿದು, ಘೋರತಪಸ್ಸನ್ನು ಮಾಡುವಾಗ,ಅವನ



648. ಶ್ರೀಮಹಾವಿಷ್ಣುವೂ ಬ್ರಹ್ಮರುದ್ರರೂ ಅತ್ರಿಮಹರ್ಷಿಗೆ ಪ್ರತ್ಯಕ್ಷವಾದುದು.

ತಪೋಜ್ವಾಲೆಯು, ಅವನ ನಡುನೆತ್ತಿಯಿಂದ ಮೇಲೆ ಹೊರಟು,ತ್ರೈಲೋಕ್ಯವನ್ನೂ ದಹಿಸುವಂತೆ ವ್ಯಾಪಿಸಿತು. ಇದನ್ನು ಕಂಡು, ಸಿದ್ಧರು, ಗಂಧರ್ವರು,ವಿದ್ಯಾಧರರು,ಪನ್ನಗರು, ಅಪ್ಸರಸ್ಸುಗಳು, ಮಹರ್ಷಿಗಳು,ಮುಂತಾಗಿ ದೇವವರ್ಗದವರೆಲ್ಲರೂ ಭಯಪಟ್ಟು, ಬ್ರಹ್ಮ ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳಲ್ಲಿ ಮೊರೆಯಿಟ್ಟು ಪ್ರಾರ್ಥಿಸಲು, ಆ ತ್ರಿಮೂರ್ತಿಗಳೂ ಒಂದಾಗಿ ಕಲೆತು ಅತ್ರಿಮಹರ್ಷಿಯ ತಪೋವನಕ್ಕೆ ಬಂದರು.*ಇವರಲ್ಲಿರುದ್ರನು ವೃಷಭವನ್ನೂ, ಬ್ರಹ್ಮನು ಹಂಸವನ್ನೂ, ಶ್ರೀಮಹಾವಿಷ್ಣುವು ಗರುಡನನ್ನೂ ಏರಿ ತಮ್ಮತಮ್ಮ ತ್ರಿಶೂಲ, ಕಮಂಡಲು, ಚಕ್ರಾದಿ ಚಿಹ್ನಗಳೊಡನೆ, ಈ ಅತ್ರಿಮಹರ್ಷಿಯ ಮುಂದೆ ಬಂದು ನಿಂತರು. ಇತ್ತಲಾಗಿ ಒಂದೇ ಕಾಲಿನಿಂದ ನಿಂತು ತಪಸ್ಸುಮಾಡುತಿದ್ದ ಆ ಅತ್ರಿಮುನಿಯು, ಅವರನ್ನು ಕಂಡೊಡನೆ ಪರಮ ಸಂತೋಷಗೊಂಡವನಾಗಿ, ನೆಲದಮೇಲೆ ಬಿದ್ದು ಸಾಷ್ಟಾಂಗಪ್ರಣಾಮವನ್ನು ಮಾಡಿದನು. ಮತ್ತು ಕೃಪಾಪೂರ್ವಕವಾದ ಪ್ರಸನ್ನದೃಷ್ಟಿಯಿಂದಲೂ, ಮಂದಹಾಸಸುಂದರವಾದ ಮುಖಬಿಂಬದಿಂದಲೂ ಬಂದು ನಿಂತ ಆ ತ್ರಿಮೂರ್ತಿಗಳನ್ನು ನೋಡಿ, ಇವನ ಮನಸ್ಸಿಗೆ ಮೇಲೆ ಮೇಲೆ ಉತ್ಸಾಹವು ಹೆಚ್ಚಿದ್ದರೂ, ಅವರ ದಿವ್ಯತೇಜಸ್ಸಿನಿಂದ ಇವನ ಕಣ್ಣುಗಳು ಕೋರೈಸಿದಂತಾಗಿ, ತಟ್ಟನೆ ಮುಚ್ಚಿಹೋದುವು ಆದರೂ ಅವನು ಆ ರೂಪವನ್ನು ತನ್ನ ಮನಸ್ಸಿನಲ್ಲಿ ಧ್ಯಾನವಿಷಯವಾಗಿ ಮಾಡಿಕೊಂಡು, ಅಂಜಲಿಹಸ್ತನಾಗಿ ನಿಂತು ಅವರನ್ನು ಮಧುರಗಂಭೀರವಾಕ್ಯದಿಂದ ಸ್ತುತಿಸುವನು. “ಎಲೈ ಮಹಾತ್ಮರೆ! ನೀವು ಮೂವರೂ ಪ್ರಪಂಚದ ಸೃಷ್ಟಿಸ್ಥಿತಿ ಸಂಹಾರಗಳನ್ನು ನಡೆಸುವುದಕ್ಕಾಗಿ, ಪ್ರಕೃತಿಗೆ ಸಂಬಂಧಪಟ್ಟ ಸತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳನ್ನವಲಂಬಿಸಿ, ವಿಷ್ಣು ಬ್ರಹ್ಮ ಮಹೇಶ್ವರರೆಂಬ ಬೇರೆಬೇರೆ ಮೂರು ಹೆಸರಿನಿಂದ ಕರೆಯಲ್ಪಡತಕ್ಕವರು! ಇಂತಹ ಮಹಾಪ್ರಭಾವವುಳ್ಳ ನಿಮ್ಮ ಪಾದಕಮಲಗಳಿಗೆ ವಂದಿಸು

---

* ಅತ್ರಿಮುನಿಯು ಜಗತ್ಕರ್ತನಾದ ಶ್ರೀಮನ್ನಾರಾಯಣನೊಬ್ಬನನ್ನು ಮಾತ್ರ ಪ್ರಾರ್ಥಿಸಿದರೂ, ಅವನು ಪ್ರಾರ್ಥಿಸುವಾಗ ಸೃಷ್ಟಿ, ಸ್ಥಿತಿ, ಲಯ, ಕರ್ತನೆಂದು ಹೇಳಿದುದರಿಂದ ಇಲ್ಲಿ ತ್ರಿಮೂರ್ತಿಗಳೂ ಬಂದುದಾಗಿ ಗ್ರಾಹ್ಯವು.

ವೆನು. ಆದರೆ,ನಿಮ್ಮ ಮೂವರ ತೇಜಸ್ಸೂ ನನಗೆ ಒಂದೇವಿಧವಾಗಿ ತೋರಿ, ಕಣ್ಣುಗಳಿಂದ ನೋಡುವುದಕ್ಕೂ ದುಸ್ಸಹವಾಗಿರುವುದು.ನಿಮ್ಮ ದಿವ್ಯತೇಜ ಸ್ಸಿನಿಂದ ನನ್ನ ಕಣ್ಣುಗಳು ಮುಚ್ಚಿ ಹೋಗಿರುವುವು. ನೀವು ಮೂವರಲ್ಲಿ ಇದುವರೆಗೆ ನಾನು ತಪಸ್ಸಿನಿಂದ ಉಪಾಸನೆಮಾಡಿ ಪ್ರಾರ್ಥಿಸಿದ ಪರ ಮಾತ್ಮನಾರು? ನೀವೇ ಅದನ್ನು ಅನುಗ್ರಹಪೂರ್ವಕವಾಗಿ ನನಗೆ ತಿಳಿಸಬೇ ಕು. ಇದಲ್ಲದೆ ನಾನು ಜಗತ್ಕಾರಣನಾದ ಶ್ರೀಮಹಾವಿಷ್ಣುವನ್ನು ನನಗೆ ಪುತ್ರನಾಗಬೇಕೆಂದು ಪ್ರಾರ್ಥಿಸಿ, ಅವನೊಬ್ಬನನ್ನು ಮಾತ್ರ ಕರೆಯು ತ್ತಿರುವಾಗ, ನೀವು ಮೂವರೂ ನನ್ನ ಮುಂದೆ ಬಂದು ನಿಲ್ಲಲು ಕಾರಣವೇ ನು? ನಮ್ಮಂತಹ ಮನುಷ್ಯರ ಮನಸ್ಸಿಗೆ ಅಗೋಚರರಾದ ನೀವು ಹೀಗೆ ನನಗೆ ಪ್ರತ್ಯಕ್ಷವಾಗಿ ಗೋಚರಿಸಿದುದೇಕೆ?" ಎಂದು ಭಕ್ತಿವಿನಯಗಳಿಂದ ನ ಮ್ರನಾಗಿ ಕೈಜೋಡಿಸಿ ಪ್ರಾರ್ಥಿಸಿದನು. ಆಗ ಆ ತ್ರಿಮೂರ್ತಿಗಳೂ ಆ ಮಹರ್ಷಿಯನ್ನು ಕುರಿತು "ಓ ಮುನೀಂದ್ರಾ! ನೀನು ಮನಸ್ಸಿನಲ್ಲಿ ಯಾವ ಉದ್ದೇಶವನ್ನು ಸಂಕಲ್ಪಿಸಿದೆಯೋ, ಆ ನಿನ್ನ ಕೋರಿಕೆಯನ್ನು ನೆರವೇರಿಸು ವುದಕ್ಕಾಗಿಯೇ ನಾವು ಬಂದಿರುವೆವು ನೀನು ಸತ್ಯಸಂಕಲ್ಪನಾದುದರಿಂದ ನಿನ್ನ ಕೋರಿಕೆಗೆ ಎಂದಿಗೂ ಭಂಗವಿರದು. ಇದುವರೆಗೆ ನೀನು ಯಾವ ಜ ಗದೀಶ್ವರತತ್ವವನ್ನು ಧ್ಯಾನಿಸುತಿದ್ದೆಯೋ, ಆ ತತ್ವವೇ ನಾವು ಮೂವರೆಂ ದು ತಿಳಿ! ಹೀಗೆ ನಾವು ಬೇರೆಬೇರೆ ಮೂರು ವ್ಯಕ್ತಿಗಳಂತೆ ತೋ ರಿದರೂ, ತತ್ವವನ್ನು ವಿಚಾರಿಸಿದರೆ, ನಾವು ಮೂವರೂ ಒಂದೇ ವಸ್ತು ವಾಗಿರುವೆವು. ಆದುದರಿಂದಲೇ ಹಿಂದೆ ನೀನು ಒಬ್ಬನನ್ನು ಕರೆದರೂ ನಾವು ಮೂವರೂ ಬರಬೇಕಾಯಿತು. ಓ ಮಹರ್ಷೀ! ಮುಂದೆ ನಮ್ಮ ನಮ್ಮ ಅಂಶದಿಂದ ನಿನಗೆ ಮೂವರು ಪುತ್ರರೇ ಹುಟ್ಟುವರು. ಆ ಮೂವರು ಪುತ್ರರೂ ಲೋಕವಿಖ್ಯಾತವಾದ ಕೀರ್ತಿಯನ್ನು ಹೊಂ ದುವರಲ್ಲದೆ, ಅವರಿಂದ ನಿನಗೂ ಅನೇಕವಿಧವಾದ ಶ್ರೇಯಸ್ಸುಂಟು. ಅವರಿಂದ ನಿನ್ನ ಕೀರ್ತಿಯು ಲೋಕಪ್ರಸಿದ್ಧವಾಗುವುದು." ಎಂದು ಹೇಳಿ, ತ್ರಿಮೂರ್ತಿಗಳೂ ಆ ದಂಪತಿಗಳಿಂದ ಸತ್ಕೃತರಾಗಿ, ತಮ್ಮತಮ್ಮ ಸ್ಥಾನಗ ಳಿಗೆ ಹಿಂತಿರುಗಿದರು. ಆಮೇಲೆ ಇತ್ತಲಾಗಿ ಅತ್ರಿಮುನಿಗೆ ಅನಸೂಯೆಯು

ಲ್ಲಿ ಬ್ರಹ್ಮವಿಷ್ಣುರುದ್ರಾಂಶದಿಂದ ಕ್ರಮವಾಗಿ ಸೋಮನೆಂದೂ, ದತ್ತನೆಂದೂ, ದೂರ್ವಾಸನೆಂದೂ ಮೂವರು ಪುತ್ರರು ಜನಿಸಿದರು. ವಿದುರಾ ! ಕರ್ದಮಪುತ್ರಿಯಾದ ಶ್ರದ್ಧೆಯೆನ್ನು ಅಂಗಿರಸ್ಸೆಂಬ ಮಹರ್ಷಿಯು ವರಿಸಿದನೆಂದು ಹೇಳಿದ್ದೆನಷ್ಟೆ? ಅವರ ಸಂತತಿಕ್ರಮವನ್ನು ತಿಳಿಸುವೆನು ಕೇಳು! ಈ ಶ್ರದ್ಧೆಯೆಂಬವಳಲ್ಲಿ ಸಿನೀವಾಲಿ, ಕುಹು, ರಾಕೆ,ಅನುಮತಿಯೆಂಬ ನಾಲ್ವರು ಕನ್ಯೆಯರು ಹುಟ್ಟಿದರು. ಮತ್ತು ಇವಳಲ್ಲಿ ಅಂಗಿರಸ್ಸಿಗೆ ಉತಥ್ಯನೆಂದೂ, ಬೃಹಸ್ಪತಿಯೆಂದೂ ಇಬ್ಬರು ಗಂಡುಮಕ್ಕಳೂ ಜನಿಸಿದರು.ಇವರ ಸಂತಾನದವರೇ ಕ್ರಮಕ್ರಮವಾಗಿ ಹೆಚ್ಚುತ್ತ ಬಂದು, ಸ್ವಾರೋಚಿಷಮನ್ವಂತರಕಾಲವೆಲ್ಲಾ ಆಳುತ್ತಬಂದರು. ಬ್ರಹ್ಮನ ನಾಲ್ಕನೆಯಪುತ್ರನಾದ ಪುಲಸ್ತ್ಯನು, ಕರ್ದಮನ ನಾಲ್ಕನೆಯ ಮಗಳಾದ ಹವಿರ್ಭುವೆಂಬವಳನ್ನು ವರಿಸಿದಮೇಲೆ, ಆ ದಂಪತಿಗಳಿಗೆ ಅಗಸ್ತ್ಯನೆಂದೂ, ವಿಶ್ರವಸ್ಸೆಂದೂ ಇಬ್ಬರು ಮಕ್ಕಳು ಹುಟ್ಟಿದರು. ಇವರಲ್ಲಿ ಅಗಸ್ತ್ಯನು ಜನ್ಮಾಂತರದಲ್ಲಿ ಜಾಠರಾಗ್ನಿಯಾಗಿದ್ದವನೆಂದು ಹೇಳುವರು. ವಿಶ್ರವಸ್ಸೆಂಬವನಿಗೆ ಇಲಬಿಲೆಯೆಂದೂ, ಕೇಶಿನಿ(ಕೇಕಸಿ) ಯೆಂದೂ ಇಬ್ಬರು ಪತ್ನಿಯರಿದ್ದರು.ಇಲಬಿಲೆಯಲ್ಲಿಕುಬೇರನೆಂಬ ಪುತ್ರನು ಹುಟ್ಟಿ ಯಕ್ಷಾಧಿಪತಿಯೆನಿಸಿಕೊಂಡನು. ಕೇಶಿನಿಯೆಂಬವಳಲ್ಲಿ ರಾವಣ ಕುಂಭಕರ್ಣ ವಿಭೀಷಣರೆಂಬ ಮೂವರು ಮಕ್ಕಳು ಜನಿಸಿದರು. ಕರ್ದಮನ ಐದನೆಯ ಪುತ್ರಿಯಾದ ರತಿಯೆಂಬವಳು,ಬ್ರಹ್ಮಪುತ್ರರಲ್ಲಿ ಐದನೆಯವನೆನಿಸಿದ ಪುಲಹನನ್ನು ಮಹಿಷಿಯಾದಮೇಲೆ,ಅವಳಲ್ಲಿ ಕರ್ಮಶ್ರೇಷ್ಠನೆಂದೂ, ವರೀಯಸ್ಸೆಂದೂ, ಸಹಿಷ್ಣುವೆಂದೂ ಪ್ರಸಿದ್ಧರಾದ ಮೂರು ಮಕ್ಕಳನ್ನು ಹಡೆದಳು. ಬ್ರಹ್ಮನ ಆರನೆಯ ಮಗನಾದ ಕ್ರತುವೆಂಬವನು,ಕರ್ದಮಪುತ್ರಿಯಾದಕ್ರಿಯೆಯೆಂಬವಳನ್ನು ವರಿಸಿದಮೇಲೆ,ಇವರಲ್ಲಿವಾಲಖಿಲ್ಯರೆಂದು ಕರಯಲ್ಪಡುವ ಅರುವತ್ತು ಮಂದಿ ಮಹರ್ಷಿಗಳು ಹುಟ್ಟಿದರು.ಈಮಹರ್ಷಿಗಳಲ್ಲಿಒಬ್ಬೊಬ್ಬರೂ ಎಣೆಯಿಲ್ಲದಬ್ರಹ್ಮತೇಜಸ್ಸಿನಿಂದಬೆಳಗುತ್ತಿದ್ದರು. ವಸಿಷ್ಠನು ಕರ್ದಮನ ಒಂಬತ್ತನೆಯ ಮಗಳಾದ ಅರುಂಧತಿಯನ್ನು ವರಿಸಿ, ಅವಳಲ್ಲಿ ಚಿತ್ರಕೇತು, ಸುರೋಚಿ, ವಿರಜಸ್ಸು, ಮಿತ್ರನು, ಉಲ್ಬಣನು, ವಸುಭೃದ್ಯಾನನು,ದ್ಯುಮಂತನು, ಎಂಬ ಏಳುಮಂದಿ ಪುತ್ರರನ್ನು ಪಡೆದನು.

ಮತ್ತು ವಸಿಷ್ಠನಿಗೆ ಎರಡನೆಯ ಭಾರ್ಯೆಯಲ್ಲಿ ಶಕ್ತ್ರಿ ಮೊದಲಾದ ಪುತ್ರರು ಜನಿಸಿದರು. ಕರ್ದಮನ ಎಂಟನೆಯ ಮಗಳಾದ ಶಾಂತಿಯೆಂಬವಳು ಅಥರ್ವನನ್ನು ವರಿಸಿ. ಧೃತವ್ರತನೆಂದೂ, ದಧ್ಯಂಚನೆಂದೂ, ಅಶ್ವಶಿರಸ್ಸೆಂದೂ ಮೂವರು ಪುತ್ರರನ್ನು ಪಡೆದಳು.ಕರ್ದಮಪುತ್ರಿಯಾದ ಖ್ಯಾತಿಯೆಂಬವಳು ಭೃಗುವನ್ನು ವರಿಸಿದಮೇಲೆ, ಅವಳಲ್ಲಿ ಧಾತೃ ವಿಧಾತೃಗಳೆಂಬ ಇಬ್ಬರು ಕುಮಾರರೂ, ಭಗವದ್ಭಕ್ತಿಯಲ್ಲಿ ಪ್ರಸಿದ್ಧಿಗೊಂಡ ಶ್ರೀಯೆಂಬ ಕನ್ಯೆಯೊಬ್ಬಳೂ ಉದ್ಭವಿಸಿದರು ಆ ಧಾತೃವಿಧಾತೃಗಳೆಂಬ ಭೃಗುಪುತ್ರರಿಬ್ಬರೂ, ಕ್ರಮವಾಗಿ, ಮೇರುಮಹರ್ಷಿಯ ಕುಮಾರಿಯರಾದ ಆಯತಿ, ನಿಯತಿ, ಎಂಬ ಕನ್ಯೆಯರನ್ನು ವರಿಸಿದರು. ಅವರಲ್ಲಿ ಆಯತಿಗೆ ಮೃಕಂಡುವೆಂಬ ಪುತ್ರನೊಬ್ಬನು ಹುಟ್ಟಿದನು ನಿಯತಿಗೆ ಪ್ರಾಣನೆಂಬ ಪುತ್ರನು ಹುಟ್ಟಿದನು. ಇವರಿಬ್ಬರಲ್ಲಿ ಮೃಕಂಡುವು ಮಾರ್ಕಂಡೇಯನೆಂದೂ, ಪ್ರಾಣನು ವೇದಶಿರಸ್ಸೆಂದೂ ಪ್ರಸಿದ್ಧವಾದ ಕುಮಾರರನ್ನು ಪಡೆದರು. ಆ ವೇದಶಿರಸ್ಸಿಗೆ ಶುಕ್ರನೆಂಬ ಪುತ್ರನು ಜನಿಸಿದನು. ವಿದುರಾ! ಹೀಗೆ ಕರ್ದಮನ ಒಂಬತ್ತುಮಂದಿಪುತ್ರಿಯರಿಂದ ಹುಟ್ಟಿದ ಸಂತಾನವು ಮೇಲೆಮೇಲೆ ಹೆಚ್ಚಿ, ಸಮಸ್ತಲೋಕಗಳನ್ನೂ ವ್ಯಾಪಿಸಿತು. ಈ ಕರ್ದಮಸಂತತಿಯ ವಿಸ್ತಾರಕ್ರಮವನ್ನು ಕಿವಿಯಿಂದ ಕೇಳಿದಮಾತ್ರದಲ್ಲಿಯೇ ಮನುಷ್ಯನುಪಾಪವಿಮುಕ್ತನಾಗುವನು. ಇದು ಹಾಗಿರಲಿ! ಇನ್ನು ದಕ್ಷನ ವಂಶಾನುಕ್ರಮವನ್ನು ತಿಳಿಸುವೆನು ಕೇಳು.

## ನರನಾರಾಯಣಾವತಾರವು.

ಮನುವು ತನ್ನ ಮಗಳಾದ ಪ್ರಸೂತಿಯನ್ನು ದಕ್ಷನಿಗೆ ವಿವಾಹಮಾಡಿಕೊಟ್ಟನಲ್ಲವೆ? ಆ ದಕ್ಷನಿಗೆ ಪ್ರಸೂತಿಯಲ್ಲಿ ಹದಿನಾರುಮಂದಿ ಕನ್ಯೆಯರು ಹುಟ್ಟಿದರು. ಈ ಕುಮಾರಿಯರಲ್ಲಿ ಶ್ರದ್ಧೆ, ಮೈತ್ರಿ, ದಯೆ, ಶಾಂತಿ, ತುಷ್ಟಿ, ಪುಷ್ಟಿ, ಕ್ರಿಯೆ, ಉನ್ನತಿ, ಬುದ್ಧಿ, ಮೇಧೆ, ತಿತಿಕ್ಷೆ, ಹ್ರೀ, ಮೂರ್ತಿಯೆಂಬ ಹೆಸರುಳ್ಳ ಹದಿಮೂರುಮಂದಿ ಕನ್ಯಕೆಯರನ್ನು ದಕ್ಷಪ್ರಜಾಪತಿಯು ಧರ್ಮನೆಂಬವನಿಗೆ ಕೊಟ್ಟು ವಿವಾಹಮಾಡಿದನು. ಹದಿನಾಲ್ಕನೆಯ ಕನ್ಯೆಯನ್ನು ಅಗ್ನಿಗೆ ಕೊಟ್ಟನು.ಹದಿನೈದನೆಯ ಕನ್ಯೆಯನ್ನು ಪಿತೃಗಳಿಗೂ,ಕಿರಿಯ ಮಗಳನ್ನು (ಹದಿನಾರನೆಯವಳನ್ನು )ಸಂಸಾರನಿವರ್ತಕನಾದ ಈಶ್ವರನಿಗೂ ಕೊಟ್ಟು ವಿವಾಹಮಾಡಿದನು. ಧರ್ಮನಿಗೆ ವಿವಾಹಮಾ

ಡಿಕೊಟ್ಟ ಹದಿಮೂರುಮಂದಿ ಕನ್ಯಕೆಯರಲ್ಲಿ, ಶ್ರದ್ಧೆಯಿಂದ ಶ್ರುತವೂ,ಮೈತ್ರಿಯಿಂದ ಪ್ರಸಾದವೂ, ದಯೆಯಿಂದ ಭಯವೂ, ಶಾಂತಿಯಿಂದ ಸುಖವೂ, ತುಷ್ಟಿಯಿಂದ ಮದವೂ, ಪುಷ್ಟಿಯಿಂದ ಸ್ಮಯವೂ, ಕ್ರಿಯೆಯಿಂದ ಯೋಗವೂ, ಉನ್ನತಿಯಿಂದ ದರ್ಪವೂ, ಬುದ್ಧಿಯಿಂದ ಅರ್ಥವೂ, ಮೇಧೆಯಿಂದ ಸ್ಮೃತಿಯೂ, ತಿತಿಕ್ಷೆಯಿಂದ ಕ್ಷೇಮವೂ, ಹ್ರೀಯಿಂದ ಪ್ರಳಯವೂ ಉದ್ಭವಿಸಿದುವು. (ಎಂದರೆ, ಮೇಲೆ ಹೇಳಿದ ಶ್ರುತ, ಪ್ರಸಾದ, ಮುಂತಾದುವುಗಳ ಅಭಿಮಾನಿದೇವತೆಗಳು ಹುಟ್ಟಿದರು.) ಮತ್ತು ಈ ಧರ್ಮನ ಹದಿಮೂರನೆಯ ಭಾರ್ಯೆಯಾದ ಮೂರ್ತಿಯೆಂಬವಳಲ್ಲಿ, ನರನೆಂದೂ ನಾರಾಯಣನೆಂದೂ ಇಬ್ಬರು ಪುತ್ರರು ಜನಿಸಿದರು. ವಿದುರಾ! ಇವರ ಮಹಾಮಹಿಮೆಯನ್ನೇನೆಂದು ಬಲ್ಲೆ! ಇವರ ಜನನಕಾಲದಲ್ಲಿಯೇ ಅನುಕೂಲವಾದ ಮಂದಮಾರುತವು ಬೀಸಲಾರಂಭಿಸಿತು. ದಿಕ್ಕುಗಳೆಲ್ಲವೂ ನಿರ್ಮಲವಾದುವು. ಸಮಸ್ತಲೋಕಗಳ ಮನಸ್ಸಿಗೂ ಅಕಸ್ಮಿಕವಾದ ಆನಂದವು ತೋರಿತು. ನದನದೀಸಮುದ್ರಗಳೆಲ್ಲವೂ ಪ್ರಸನ್ನತೆಯನ್ನುಹೊಂದಿದುವು. ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದುವು. ಗಂಧರ್ವರು ಗಾನಮಾಡಿದರು. ಅಪ್ಸರಸ್ತ್ರೀಯರು ಗುಂಪುಗುಂಪಾಗಿ ನಾಟ್ಯವಾಡುತಿದ್ದರು. ದೇವತೆಗಳು ಆಕಾಶದಿಂದ ಹೂಮಳೆಯನ್ನು ಕರೆದರು. ಸಮಸ್ತಮುನೀಂದ್ರರೂ ಪರಮಾನಂದಭರಿತರಾಗಿದ್ದರು.ಹೀಗೆ ಈ ನರನಾರಾಯಣರ ಜನನದಿನವು ಪರಮಮಂಗಳಸೂಚಕವಾಗಿದ್ದಿತು. ಈ ನರನಾರಾಯಣರು ಜನಿಸಿದೊಡನೆ ಬ್ರಹ್ಮಾದಿದೇವತೆಗಳೆಲ್ಲರೂ ಬಂದು ಅವರನ್ನು ಹೀಗೆಂದು ಸ್ತೋತ್ರಮಾಡುವರು.“ಎಲೈ ಮಹಾತ್ಮರೆ! ಭಗವದಂಶಭೂತರಾದ ನಿಮ್ಮ ಪಾದಗಳನ್ನು ಮರೆಹುಗುವೆವು. ಆಕಾಶದಲ್ಲಿ ಮೇಘಸಂಬಂಧದಿಂದ ಕಪ್ಪು, ಬಿಳುಪು,ಮುಂತಾದ ವರ್ಣಭೇದಗಳು ಕಾಣುವಂತೆ,ಯಾವ ಭಗವಂತನು ಮಾಯಾಸಂಬಂಧದಿಂದ ತನ್ನ ಶರೀರದಲ್ಲಿಯೇ ದೇವಮನುಷ್ಯಾದಿಭೇದಗಳುಳ್ಳ ಈ ವಿಶ್ವವೆಲ್ಲವನ್ನೂ ವಿಧವಿಧವಾಗಿ ತೋರಿಸುವನೋ,ಅಂತಹ ಪರಮಪುರುಷನೇ ನೀವಲ್ಲದೆ ಬೇರೆಯಲ್ಲ.ಹೀಗೆ ಮಾಯೆಯಿಂದ ವಿಸ್ತರಿಸಿರುವ ಪ್ರಕೃತಿಸ್ವರೂಪವನ್ನೂ, ಆ ಪ್ರಕೃತಿಗಿಂತಲೂ ವಿಲಕ್ಷಣವಾದ ಜೀವಾತ್ಮಸ್ವರೂಪವನ್ನೂ,ಆ ಪ್ರಕೃತಿ

ಜೀವಗಳಿಗಿಂತಲೂ ವಿಲಕ್ಷಣವಾದ ಪರಬ್ರಹ್ಮಸ್ವರೂಪವನ್ನೂ ಲೋಕಕ್ಕೆ ತಿಳಿಸುವುದಕ್ಕಾಗಿಯೇ ನೀವು ಈ ಭೂಮಿಯಲ್ಲಿ ಈ ಎರಡು ರೂಪದಿಂದವ ತರಿಸಿರುವಿರಿ! ಪರಮಪುರುಷಾಂಶಭೂತರಾದ ನಿಮ್ಮ ಪಾದಪದ್ಮಗಳಿಗೆ ವಂ ದಿಸುವೆವು. ಮತ್ತು ಎಲೈ ದೇವದೇವನೆ ಲೋಕಕ್ಕೆ ಸಂಸಾರಬಂಧವಾಗಲಿ, ಮೋಕ್ಷವಾಗಲಿ ನಿನ್ನ ಸಂಕಲ್ಪದಿಂದಲೇ ಉಂಟಾಗುವುವು. ನೀನು ಜ್ಞಾನೈ ಕವೇದ್ಯನು. ವಿವಿಧ ವಿಚಿತ್ರಶಕ್ತಿಯುಳ್ಳವನು. ಈ ಪ್ರಪಂಚದ ಸೃಷ್ಟಿ ಸ್ಥಿತಿ (ಪರಿಪಾಲನ)ಲಯ ಮೊದಲಾದ ವ್ಯಾಪಾರಗಳನ್ನು ನಡೆಸುವುದಕ್ಕಾ ಗಿ ನಾವೂ ನಿನ್ನಿಂದಲೇ ಸೃಷ್ಟಿಸಲ್ಪಟ್ಟಿರುವೆವು. ನಿನ್ನ ನಿಯಮಕ್ಕೊಳಪಟ್ಟು ಆಯಾ ಕಾರ್ಯಗಳನ್ನು ನಡೆಸುತ್ತಿರುವ ನಮ್ಮನ್ನು, ನೀನು ನಿನ್ನ ಕೃಪಾವ ಲೋಕನದಿಂದ ಅನುಗ್ರಹಿಸಬೇಕು" ಎಂದರು. ಹೀಗೆ ನರನಾರಾಯಣರಿ ಬ್ಬರೂ ದೇವಸಮೂಹದಿಂದ ಸ್ತುತಿಸಲ್ಪಟ್ಟವರಾಗಿ, ಅವರನ್ನು ಮನ್ನಿಸಿ, ಆ ಸ್ಥಳವನ್ನು ಬಿಟ್ಟು ಗಂಧಮಾದನಪರ್ವತಕ್ಕೆ ಹೋಗಿ ಸೇರಿದರು, ಓ ವಿದು ರಾ! ಆ ನರನಾರಾಯಣರೇ ಈ ದ್ವಾಪರಯುಗದಲ್ಲಿ ಭೂಭಾರವನ್ನು ಪರಿಹರಿ ಸುವುದಕ್ಕಾಗಿ, ಕೃಷ್ಣಾರ್ಜುನರಾಗಿ ಅವತರಿಸಿದರೆಂದು ತಿಳಿ! ಮತ್ತು ದಕ್ಷ ನು ತನ್ನ ಕುಮಾರಿಯಾದ ಸ್ವಾಹಾದೇವಿಯನ್ನು ಅಗ್ನಿಗೆ ಕೊಟ್ಟು ವಿವಾಹ ಮಾಡಿದುದಾಗಿ ಹೇಳಿದೆನಷ್ಟೆ? ಆ ಅಗ್ನಿಗೆ ಸ್ವಾಹಾದೇವಿಯಲ್ಲಿ ಭಾವಕನೆಂ ದೂ, ಪವಮಾನನೆಂದೂ, ಶುಚಿಯೆಂದೂ ಮೂವರು ಪುತ್ರರು ಜನಿಸಿದರು. ಈ ಮೂವರೂ ಹುತಭೋಜಿಗಳಾಗಿ, ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವ ನೀಯವೆಂಬ ತ್ರೇತಾಗ್ನಿಗಳಿಗೆ ಅಭಿಮಾನಿದೇವತೆಗಳೆನಿಸಿರುವರು. ಇವರಿಂದ ನಲವತ್ತೈದು ಬಗೆಯ ಅಗ್ನಿಗಳು ಹುಟ್ಟಿದುವು. ಈ ನಾಲ್ವತ್ತೈದು ಅಗ್ನಿ ಗಳು, ಮೂವರು ಪಿತೃಗಳೊಡನೆಯೂ, ಒಬ್ಬ ಪಿತಾಮಹನೊಡನೆಯೂ ಸೇರಿ ನಾಲ್ವತ್ತೊಂಬತ್ತುಬಗೆಯೆನಿಸಿರುವುವು. ಬ್ರಹ್ಮವಾದಿಗಳು ವೈದಿಕಕ ರ್ಮಗಳಲ್ಲಿಯೂ, ಯಜ್ಞಕಾರ್ಯದಲ್ಲಿಯೂ, ಈ ಅಗ್ನಿಗಳ ಹೆಸರಿನಿಂದಲೇ ಅಗ್ನಿದೇವತಾತ್ಮಕಗಳಾದ ಇಷ್ಟಿಗಳನ್ನು ನಡೆಸುವರು. ದಕ್ಷನು ತನ್ನ ಹದಿ ನೈದನೆಯ ಮಗಳಾದ ಸ್ವಧಾದೇವಿಯನ್ನು ಪಿತೃಗಳಿಗೆ ಕೊಟ್ಟು ವಿವಾಹ ಮಾಡಿದುದಾಗಿ ಹೇಳಿದೆನಷ್ಟೆ? ಈ ಪಿತೃಗಳಲ್ಲಿ ಅಗ್ನಿಷ್ವಾತ್ತರೆಂದೂ, ಬರ್ಹಿ

ಷದರೆಂದೂ ಎರಡು ಬಗೆಯವರುಂಟು., ಅಗ್ನಿಷ್ವಾತ್ತರೆಂಬ ಮೊದಲನೆಯ ವರ್ಗದವರಿಗಾಗಿ ಅಗ್ನಿಯಲ್ಲಿ ಹೋಮವಿಲ್ಲವಾದುದರಿಂದ ಅನಗ್ನಿಗಳೆನಿಸುವ ರು.ಮತ್ತು ಇವರು ಆಜ್ಯಪಾನಮಾಡತಕ್ಕವರು.ಬರ್ಹಿಷದರೆಂಬಎರಡನೆಯ ವರ್ಗದವರಿಗಾಗಿ ಅಗ್ನಿಕಾರ್ಯವನ್ನು ಮಾಡಬೇಕಾದುದರಿಂದ ಸಾಗ್ನಿಗಳೆನಿಸುವರು. ಇವರು ಸೋಮಪಾನಮಾಡತಕ್ಕವರು ಈ ಎರಡು ಬಗೆಯ ಪಿತೃಗಳಿಗೆ ಪತ್ನಿಯಾದ ಸ್ವಧಾದೇವಿಯು, ವಯುನೆ (ಮೇಧೆ) ಯೆಂದೂ ವೈತರಣಿಯೆಂದೂ ಇಬ್ಬರು ಕನ್ಯೆಯರನ್ನು ಹಡೆದಳು. ಈ ಕನ್ಯೆಯರಿಬ್ಬರೂ ಕೇವಲಜ್ಞಾನನಿಷ್ಠರಾಗಿ, ಬ್ರಹ್ಮತತ್ವವನ್ನುಪದೇಶಿಸುವುದರಲ್ಲಿಯೇ ತಮ್ಮ ಜೀವಮಾನವನ್ನು ಕಳೆಯುತ್ತ, ಬ್ರಹ್ಮಚರ್ಯೆಯಲ್ಲಿಯೇ ಇದ್ದುಬಿಟ್ಟರು. ದಕ್ಷಕುಮಾರಿಯರಲ್ಲಿ ಹದಿನಾರನೆಯವಳಾದ ಸತಿಯೆಂಬವಳು ರುದ್ರನನ್ನು ವರಿಸಿದಮೇಲೆ, ಅವಳು ಪತಿಭಕ್ತಿಪರಾಯಣೆಯಾಗಿ, ಯಾವಾಗಲೂ ಪತಿಶುಶ್ರೂಷೆಯಲ್ಲಿದ್ದರೂ, ಶೀಲಸ್ವಭಾಗಳಲ್ಲಿ ತನಗೆ ಅನುರೂಪನಾದ ಒಬ್ಬ ಪುತ್ರನನ್ನಾದರೂ ಪಡೆಯಲಿಲ್ಲ. ಮತ್ತು ಇವಳು ಸಂತಾನವನ್ನು ಪಡೆಯುವುದಕ್ಕೆ ಮೊದಲು. ಕೌಮಾರಾವಸ್ಥೆಯಲ್ಲಿರುವಾಗಲೇ, ತಂದೆಯಾದ ದಕ್ಷನು, ನಿಷ್ಕಾರಣವಾಗಿ ತನ್ನ ಪತಿಯಾದ ರುದ್ರನಲ್ಲಿ ಕೋಪಿಸಿ, ಅವಮಾನಪಡಿಸಿದುದನ್ನು ನೋಡಿ ಸಹಿಸಲಾರದೆ,ಯೋಗಾಗ್ನಿಯಲ್ಲಿ ತನ್ನ ಶರೀರವನ್ನು ಪೂರ್ಣಾಹುತಿಯಾಗಿ ಸಮರ್ಪಿಸಿ, ದೇಹವನ್ನೂ ನೀಗಿಬಿಟ್ಟಳು” ಎಂದನು. ಇಲ್ಲಿಗೆ ಮೊದಲನೆಯ ಅಧ್ಯಾಯವು.

---

### ದಕ್ಷನು ತನ್ನಳಿಯನಾದ ರುದ್ರನನ್ನು ನಿಂದಿಸಿ ಅವನೊಡನೆ ವಿರೋಧಗೊಂಡುದು.

ಈನಡುವೆ ವಿದುರನು ಮೈತ್ರೇಯನನ್ನು ಕುರಿತು “ಓ ಮಹಾತ್ಮಾ! ರುದ್ರನಾದರೋ ಸಾಧುಗಳಲ್ಲಿ ತಾನೇ ಮೇಲೆನಿಸಿಕೊಂಡವನು. ಯಾರಲ್ಲಿಯೂ ವೈರಬುದ್ಧಿಯಿಲ್ಲದೆ ಎಲ್ಲವನ್ನೂ ಸಮದೃಷ್ಟಿಯಿಂದ ನೋಡತಕ್ಕವನು. ಕಾಮಕ್ರೋಧಾದಿಗಳೆಲ್ಲವನ್ನೂ ಜಯಿಸಿ ಕೇವಲ ಶಾಂತಮೂರ್ತಿಯೆನಿಸಿಕೊಂಡವನು. ಅಚರವಸ್ತುಗಳಿಗೂ ಜ್ಞಾನಪ್ರದಾನವನ್ನು ಮಾಡ

ತಕ್ಕ ಮಹಾಮಹಿಮೆಯುಳ್ಳವನು. ಜ್ಞಾನವನ್ನಪೇಕ್ಷಿಸತಕ್ಕ ಸಮಸ್ತ ಲೋಕಕ್ಕೂ ತಾನೇಪರದೇವತೆಯೆನಿಸಿಕೊಂಡವನು.ಪ್ರಪಂಚವ್ಯಾಪಾರಗಳಲ್ಲಿಯೇ ದೃಷ್ಟಿಯಿಲ್ಲದೆ, ಯಾವಾಗಲೂ ಆತ್ಮಾನಂದದಲ್ಲಿ ನೆಲೆಗೊಂಡವನು. ಇಂತಹ ಶಂಕರನೊಡನೆ ದಕ್ಷನು ವಿರೋಧಿಸಿಕೊಂಡುದೇಕೆ? ಇದಲ್ಲದೆ ದಕ್ಷನು, ತನ್ನ ಮಗಳಾದ ಸತೀದೇವಿಯನ್ನು ಎಣೆಯಿಲ್ಲದ ವಾತ್ಸಲ್ಯದಿಂದ ಪೋಷಿಸುತಿದ್ದವನಲ್ಲವೆ? ಅಂತಹ ಮಗಳ ಕ್ಷೇಮವನ್ನೂ ನೋಡದೆ ಅಳಿಯನಾದ ರುದ್ರನೊಡನೆ ಅಷ್ಟೊಂದು ವೈರವನ್ನೇಕೆ ಬೆಳೆಸಿದನು? ಸತೀದೇವಿಯು ತನ್ನ ಮನೋವ್ಯಥೆಯನ್ನು ಸಹಿಸಲಾರದೆ ಅಗ್ನಿಯಲ್ಲಿ ಬಿದ್ದು ಪ್ರಾಣವನ್ನು ಬಿಡಬೇಕಾದರೆ,ಆ ಅಳಿಯನಿಗೂ ಮಾವನಿಗೂ ಉಂಟಾದ ದ್ವೇಷವು ಬಹಳ ಪ್ರಬಲತರವಾಗಿರಬೇಕಲ್ಲವೆ?" ಅವರಿಬ್ಬರಿಗೂ ದ್ವೇಷಕಾರಣವೇನೆಂಬುದನ್ನು ನನಗೆ ತಿಳಿಸಬೇಕು." ಎಂದನು. ಅದಕ್ಕಾ ಮೈತ್ರೇಯನು ‘‘ವಿದುರಾ ಕೇಳು! ಮೊದಲು ಒಂದಾನೊಂದುಕಾಲದಲ್ಲಿ, ಮರೀಚಿ ಮೊದಲಾದ ಪ್ರಜಾಧಿಪತಿಗಳೆಲ್ಲರೂ ಸೇರಿ, ಸತ್ರಯಾಗವೆಂಬ ಒಂದಾನೊಂದು ಯಾಗವನ್ನಾರಂಭಿಸಿದರು. ಈ ಯಾಗಕ್ಕಾಗಿ ಅನೇಕಮಹರ್ಷಿಗಳೂ, ಇಂದ್ರಾದಿದೇವತೆಗಳೂ,ದೇವರ್ಷಿಗಳೂ, ಅಗ್ನ್ಯಭಿಮಾನಿದೇವತೆಗಳೂ,ತಮ್ಮತಮ್ಮ ಪರಿವಾರಗಳೊಡನೆ ನಾನಾಕಡೆಯಿಂದ ಬಂದು ಸೇರಿದ್ದರು. ಇವರೆಲ್ಲರೂ ಯಾಗಶಾಲೆಯಲ್ಲಿ ಸಭೆಸೇರಿದ್ದ ಕಾಲದಲ್ಲಿ, ಪೂಜ್ಯನಾದ ದಕ್ಷಪ್ರಜಾಪತಿಯೂ ಆ ಸಭಾಸ್ಥಾನಕ್ಕೆ ಬಂದನು. ಆ ಸಭಾಸ್ಥಾನವೆಲ್ಲವನ್ನೂ ಬೆಳಗುವಂತೆ ಸೂರ್ಯತೇಜಸ್ಸಿನಿಂದ ಜ್ವಲಿಸುತಿದ್ದ ದಕ್ಷಪ್ರಜಾಪತಿಯು, ಆ ಯಾಗಶಾಲೆಯನ್ನು ಪ್ರವೇಶಿಸಿದೊಡನೆ, ದೇವತೆಗಳು, ಮಹರ್ಷಿಗಳು, ಮುಂತಾಗಿ ಆ ಸಭೆಯಲ್ಲಿದ್ದವರೆಲ್ಲರೂ, ಮಹಾದ್ಭುತವಾದ ಆ ದಕ್ಷಬ್ರಹ್ಮನ ತೇಜೋವಿಶೇಷವನ್ನು .ನೋಡಿ ಬೆಜ್ಜರಗೊಂಡು, ಥಿಗ್ಗನೆ ತಮ್ಮತಮ್ಮ ಪೀಠದಿಂದ ಮೇಲಕ್ಕೆದ್ದು, ಅಂಜಲಿಹಸ್ತರಾಗಿ ಬಂದು ಅವನನ್ನು ಗೌರವದಿಂದ ಬರಮಾಡಿಕೊಂಡರು. ಲೋಕಪಿತಾಮಹನಾದ ಚತುರ್ಮುಖನೊಬ್ಬನು,ರುದ್ರನೊಬ್ಬನು, ಇವರಿಬ್ಬರುಹೊರತು ಆ ಸಭೆಯಲ್ಲಿದ್ದ ಬೇರೆ ಸಭಾಸದರೆಲ್ಲರೂ ಎಷ್ಟೋ ಗೌರವದಿಂದ ಸತ್ಕರಿಸಿದರು.ಹೀಗೆ




657. ಸತ್ರಯಾಗದಲ್ಲಿ ದೇವತೆಗಳು ದಕ್ಷನನ್ನು ಗೌರವದಿಂದ ಬರಮಾಡಿಕೊಂಡು ನಮಸ್ಕರಿಸಿದಾಗಲೂ, ಶಿವನುಮಾತ್ರ ತನ್ನನ್ನು ಗೌರವಿಸದಿದ್ದುದಕ್ಕಾಗಿ ದಕ್ಷನು ಅವನನ್ನು ಧಿಕ್ಕರಿಸಿದುದು.

ದಕ್ಷನು ಸಕಲಸಭಾಸದರಿಂದಲೂ ಸತ್ಕರಿಸಲ್ಪಟ್ಟವನಾಗಿ,ಮುಂದೆ ಹೋಗಿ ಆ ಸಭೆಯ ಅಗ್ರಸ್ಥಾನದಲ್ಲಿದ್ದ ಲೋಕಗುರುವಾದ ಚತುರ್ಮುಖನಿಗೆ ತಾ ನಾಗಿಯೇ ನಮಸ್ಕರಿಸಿ, ಅವನ ಅನುಜ್ಞೆಯನ್ನು ಪಡೆದು, ಉಚಿತಾಸನದಲ್ಲಿ ಕುಳಿತುಕೊಂಡನು. ಎಲ್ಲರಿಗಿಂತಲೂ ವಯೋವೃದ್ಧನಾಗಿ,ಲೋಕಪಿತಾಮ ಹನೆನಿಸಿಕೊಂಡ,ಚತುರ್ಮುಖನು, ತನಗೆ ಇದಿರೆದ್ದು ಗೌರವಿಸದಿರುವುದೇ ನೋ ಯುಕ್ತವಾಗಿದ್ದರೂ,ಅವನಂತೆಯೇ ರುದ್ರನೂ ತನ್ನನ್ನು ಲಕ್ಷ್ಯಮಾ ಡದೆ, ಕಾಲುನೀಡಿ ಕುಳಿತಿದ್ದುದನ್ನು ಕಂಡು, ದಕ್ಷನ ಮನಸ್ಸಿಗೆ ಸಹಿಸ ಲಾರದ ಕೋಪವುಂಟಾಯಿತು. ಆಗ ದಕ್ಷನು ಕಣ್ಣುಗಳಿಂದಲೇ ದಹಿಸಿ ಬಿಡುವಂತೆ ಕ್ರೂರದೃಷ್ಟಿಯಿಂದ ರುದ್ರನನ್ನು ನೋಡಿ, ಅಲ್ಲಿ ನೆರೆ ದಿದ್ದ ಸಭಾಸದರೆಲ್ಲರನ್ನೂ ಕುರಿತು “ಎಲೈ ಬ್ರಹ್ಮರ್ಷಿಗಳಿರಾ ! ಎಲೈ ದೇವತೆಗಳಿರಾ ! ಓ ಅಗ್ನಿದೇವತೆಗಳಿರಾ ! ನಿಮ್ಮಲ್ಲಿ ನಾನೊಂದು ನ್ಯಾ ಯವನ್ನು ತಿಳಿಸಬೇಕಾಗಿರುವುದು ! ಲೋಕದಲ್ಲಿ ಸಾಧುಗಳ ನಡೆವಳಿ ಕೆಯು ಹೇಗಿರಬೇಕೆಂಬುದನ್ನು ತೋರಿಸುವುದಕ್ಕಾಗಿ ನಾನು ಈ ವಿಚಾರ ವನ್ನೆತ್ತುವೆನೇಹೊರತು, ಅವಿವೇಕದಿಂದಾಗಲಿ, ಅಸೂಯೆಯಿಂದಾಗಲಿ ಕ ಲಹವನ್ನು ತೆಗೆಯುವೆನೆಂದೆಣಿಸಬೇಡಿರಿ ! ಇತರದಿಕ್ಪಾಲಕರ ಹೆಸರನ್ನು ಕೆಡಿಸುವುದಕ್ಕಾಗಿ ತಾನೂ ಲೋಕಪಾಲಕನೆನಿಸಿಕೊಂಡು, ಈ ಸಭಾಮ ಧ್ಯದಲ್ಲಿ ಬಂದು ಕುಳಿತಿರುವ, ಇದೋ! ಈತನು ನಾಚಿಕೆಯಿಲ್ಲದವನು ! ಈ ಮೂರ್ಖನು ಸತ್ಪುರುಷರಲ್ಲಿ ಪರಂಪರೆಯಾಗಿ ನಡೆದುಬಂದ ವೈದಿ ಕಾಚಾರಗಳನ್ನು ಕೆಡಿಸಿ ಹಾಳುಮಾಡುತ್ತಿರುವುದನ್ನು ನೋಡಿದಿರಲ್ಲವೆ ! ಈತನಿಗೆ ನಾನು ನನ್ನ ಮಗಳನ್ನು ಕೊಟ್ಟು ವಿವಾಹಮಾಡಿರುವೆನು. ಇವ ನು ನನಗೆ ಶಿಷ್ಯಪ್ರಾಯನು. ಮೊದಲು ಇವನು ಬಹಳಸಾಧುವಂತೆ ನಟಿ ಸುತ್ತ ನನ್ನಲ್ಲಿಗೆ ಬಂದು, ಅಗ್ನಿಸಾಕ್ಷಿಕವಾಗಿ ತನ್ನ ಮಗಳ ಪಾಣಿಗ್ರಹಣವ ನ್ನು ಮಾಡಿದನು. ಆಃ ! ಮುಖ್ಯವಾಗಿ ನಾನು ಮೋಸಹೋದೆನು! ಇವನು ಇಷ್ಟು ಗರ್ವಿಯೆಂಬುದನ್ನು ತಿಳಿದಿದ್ದರೆ, ನಾನು ಎಂದಿಗೂ ಇವನಿಗೆ ಆ ನನ್ನ ಮುದ್ದುಮಗಳನ್ನು ಕೊಟ್ಟು ವಿವಾಹಮಾಡುತ್ತಿರಲಿಲ್ಲ. ಕೋತಿಯ ಕ ಣ್ಣುಳ್ಳ ಈ ಕುರೂಪಿಗೆ, ಮೃಗಶಾಬನೇತ್ರಿಯಾಗಿ ಲೋಕಸುಂದರಿಯೆನಿಸಿ

ಕೊಂಡ ನನ್ನ ಮಗಳನ್ನು ಕೊಟ್ಟೆನಲ್ಲಾ ! ಇವನು ಮಾವನಾದ ನನ್ನನ್ನು ಇತರರಿಗಿಂತಲೂ ಹೆಚ್ಚಾಗಿ ಗೌರವದಿಂದ ತಲೆಬಗ್ಗಿ ನಮಸ್ಕರಿಸಬೇಕಾಗಿರುವಾಗಲೂ, ವಾಙ್ಮಾತ್ರದಿಂದಲಾದರೂ ಗೌರವಿಸದೆ ಹೋದನಲ್ಲವೆ! ಹಿರಿಯರಲ್ಲಿ ನಡೆಸಬೇಕಾದ ಮರ್ಯಾದೆಯನ್ನೂ ತಿಳಿಯದೆ, ದುರಹಂಕಾರಿಯಾಗಿ, ಅಶುಚಿಯಾಗಿ, ದುರಾಚಾರಿಯಾದ ಈ ಅವಲಕ್ಷಣನಿಗೆ ನಾನು ನನ್ನ ಮಗಳನ್ನು ಕೊಟ್ಟುದು, ಶೂದ್ರನಿಗೆ ಶ್ರುತಿಯನ್ನುಪದೇಶಿಸಿದಂತಾಯಿತು. ಆಹಾ! ಎಂತಹ ಬುದ್ಧಿಯಿಲ್ಲದ ಕಾರ್ಯವನ್ನು ಮಾಡಿಬಿಟ್ಟೆನು! ಇದಲ್ಲದೆ ಇವನು ಯಾವಾಗಲೂ ಘೋರರೂಪವುಳ್ಳ ಭೂತಪ್ರೇತಪಿಶಾಚಗಳನ್ನು ಕಟ್ಟಿಕೊಂಡು ಶ್ಮಶಾನಭೂಮಿಯಲ್ಲಿ ವಾಸಮಾಡತಕ್ಕವನು! ಚಿತೆಯ ಬೂದಿಯೇ ಇವನಿಗೆ ಸುಗಂಧಾನುಲೇಪನವು! ರುಂಡಮಾಲೆಗಳೇ ಇವನಿಗೆ ಕಂಠಾಭರಣಗಳು!ಎಲುಬುಗಳೇ ಇವನ ಅಲಂಕಾರಗಳು! ಹುಚ್ಚನಂತೆ ತಲೆಯನ್ನು ಕೆದರಿ,ಯಾವಾಗ ನೋಡಿದರೂ ಮೈಮೇಲೆ ಬಟ್ಟೆಯಿಲ್ಲದೆ ಆಗಾಗ ನಗುತ್ತ, ಆಗಾಗ ಭಯಂಕರಧ್ವನಿಯಿಂದ ಕೂಗುತ್ತ,ಅಲ್ಲಲ್ಲಿ ಸುತ್ತುತ್ತಿರುವನು.ಹೀಗೆ ದಿಗಂಬರನಾಗಿ ತಿರುಗುತ್ತಿದ್ದರೂ,ಮನಸ್ಸಿನಲ್ಲಿ ಸ್ವಲ್ಪವಾದರೂ ನಾಚಿಕೆಯಿಲ್ಲದೆ,ಹಿಂದುಮುಂದುತಿಳಿಯದೆ, ಮಹಾಗರ್ವದಿಂದಬೀಗಿಬೆರೆಯುತ್ತಿರುವನು. ಎಲೈ ಸಭಿಕರೆ! ಇವನು ಹೆಸರಿಗೆ ಶಿವನೇಹೊರತು ಯಾವಾಗಲೂ ಅಮಂಗಳಸ್ವರೂಪನಾಗಿಯೇ ಇರುವನು. ಮರುಳುಗಳಗುಂಪನ್ನು ಕಟ್ಟಿಕೊಂಡು ತಾನೂ ದೊಡ್ಡಮರುಳಾಗಿ ತಿರುಗುತ್ತಿರುವನು.ಕೇವಲ ತಮಸ್ಸ್ವಭಾವವುಳ್ಳ ಪ್ರಮಥಗಣಗಳಿಗೆ ತಾನೇ ಮುಂದಾಳಾಗಿರುವನು. ಹೀಗೆ ಹುಚ್ಚರಗುಂಪಿಗೆಪ್ರಮುಖನಾಗಿ,ಕರ್ಮಗಳೆಲ್ಲವನ್ನೂ ಬಿಟ್ಟು ಆಚಾರಹೀನನಾಗಿ,ಕೇವಲ ಕ್ರೂರಹೃದಯನಾದ ಈ ದುರಾತ್ಮನಿಗೆ, ಪರಮಸಾಧ್ವಿಯಾದ ನನ್ನ ಮುದ್ದುಮಗಳನ್ನು ಕೊಟ್ಟೆನಲ್ಲಾ !ಮುಖ್ಯವಾಗಿ ಹೊಟ್ಟೆಯಲ್ಲಿ ಹುಟ್ಟಿದಮಗಳನ್ನು ಹುಚ್ಚನಕೈಗೆ ಕೊಟ್ಟು,ಕೊರಲನ್ನು ಕುಯ್ದಂತಾಯಿತು.ಇನ್ನು ಚಿಂತಿಸಿ ಫಲವೇನು" ಎಂದು ಹೇಳಿ ಮನಸ್ಸಿನ ಕೋಪವನ್ನು ತಡೆಯಲಾರದೆ, ತನ್ನ ಈ ಮಾತುಗಳೆಲ್ಲವನ್ನೂ ಕಿವಿಯಿಂದ ಕೇಳಿಯೂ ನಿರ್ಲಕ್ಷ್ಯವಾಗಿ ಕುಳಿತಿದ್ದ ಆ ಶಿವನನ್ನು ಕ್ರೂರದೃಷ್ಟಿಯಿಂದ ನೋಡಿ,ಅವನನ್ನು ಶಪಿಸಬೇಕೆಂದುನಿಶ್ಚ

ಯಿಸಿ, ಶುದ್ಧಾಚಮನವನ್ನು ಮಾಡಿ ಬಂದು ಆ ಸಭೆಯನ್ನು ಸಂಬೋಧಿಸಿ ಹೀಗೆಂದು ಹೇಳುವನು “ಎಲೈ ಸಭಾಸದರೆ ! ಈ ರುದ್ರನು ಪರಮದುರಾತ್ಮನು?ಇವನ ನಡತೆಯನ್ನು ನೋಡಿದರೆ ನಿಮ್ಮಂತಹ ದೇವತೆಗಳ ಗೋಷ್ಠಿಯಲ್ಲಿ ಸೇರುವುದಕ್ಕೇ ಇವನು ಎಷ್ಟುಮಾತ್ರವೂ ಅರ್ಹನಲ್ಲ. ಆದುದರಿಂದ, ಇದು ಮೊದಲುಗೊಂಡು, ದೇವತೆಗಳಿಗಾಗಿ ಕೊಡತಕ್ಕ ಹವಿಸ್ಸಿನಲ್ಲಿ ಇಂದ್ರಾದಿದೇವತೆಗಳೊಡನೆ ಇವನಿಗೆ ಭಾಗವಿಲ್ಲದಿರಲಿ ! ಅಧಮಾಧಮನಾದ ಇವನು, ನಿಮ್ಮೊಡನೆ ಸಮಾನವಾಗಿ ಹವಿರ್ಭಾಗವನ್ನು ಗ್ರಹಿಸುವುದಕ್ಕೆ ಎಷ್ಟುಮಾತ್ರವೂ ಅರ್ಹನಲ್ಲ!” ಎಂದು ಶಪಿಸಿದನು. ಅಲ್ಲಿದ್ದ ಸಭಾಸದರನೇಕರು ಇವನನ್ನು ಬಹಳವಾಗಿ ತಡೆದು ನಿವಾರಿಸುತ್ತಿದ್ದುದರಿಂದ, ಇಮ್ಮಡಿಯಾದ ಕೋಪವನ್ನು ಹೊಂದಿ,ಮನಸ್ಸಿಗೆ ತಿಳಿವಿಲ್ಲದೆ, ಅಲ್ಲಿ ನಿಲ್ಲದೆ ಆ ಕ್ಷಣವೇ ತನ್ನ ನಿವಾಸಕ್ಕೆ ಹೊರಟುಹೋದನು. ದಕ್ಷನು ಇಷ್ಟುಕ್ರೂರವಾಕ್ಯಗಳನ್ನಾಡಿ ನಿಂದಿಸುತ್ತಿದ್ದರೂ, ಶಾಂತಮೂರ್ತಿಯಾದ ಶಂಕರನು, ಬಾಯೆತ್ತದೆ, ಅವೆಲ್ಲವನ್ನೂ ಕಿವಿಗೆ ಹಾಕಿಕೊಂಡು ಸ್ತಬ್ಧನಾಗಿ ಕುಳಿತಿದ್ದನು. ಆದರೆ ರುದ್ರನ ಕಿಂಕರನಾದ ನಂದೀಶ್ವರನಿಗೆ, ತನ್ನ ಪ್ರಭುವಿನ ವಿಷಯವಾಗಿ ದಕ್ಷನು ಹೇಳುತಿದ್ದ ನಿಂದಾವಾಕ್ಯಗಳನ್ನು ಕೇಳಿ ಸಹಿಸಲಾರದ ಕೋಪವುಂಟಾಯಿತು. ರುದ್ರನಿಗೆ ಹವಿರ್ಭಾಗವಿಲ್ಲದಂತೆ ಶಾಪವನ್ನು ಕೊಟ್ಟುದಕ್ಕಾಗಿ ಆ ದಕ್ಷನಿಗೂ, ಅಲ್ಲಿ ದಕ್ಷನ ಮಾತನ್ನು ಅಭಿನಂದಿಸುತಿದ್ದ ಬ್ರಾಹ್ಮಣರಿಗೂ ತಕ್ಕ ಪ್ರತಿಕ್ರಿಯೆಯನ್ನು ಮಾಡಬೇಕೆಂದೆಣಿಸಿ,ಆ ಸಭಿಕರನ್ನು ನೋಡಿ “ಎಲೈ ಸಭಾಸದರೆ! ಈ ದಕ್ಷನ ಅಹಂಭಾವವನ್ನು ನೋಡಿದಿರಲ್ಲವೆ? ಈ ಬ್ರಾಹ್ಮಣನು ತನ್ನ ಶರೀರವನ್ನೇ ಮೇಲೆಂದು ಭಾವಿಸಿ, ಆ ಶರೀರವನ್ನು ಗೌರವಿಸಲಿಲ್ಲವೆಂಬ ಕೋಪಕ್ಕಾಗಿ, ನಿರಪರಾಧಿಯಾಗಿಯೂ, ಭಗವದಂಶದಿಂದವತರಿಸಿ ಲೋಕಪೂಜ್ಯನಾಗಿಯೂ ಇರುವ ತಮ್ಮ ಪ್ರಭುವಾದ ಈಶ್ವರನಲ್ಲಿ ಮಹಾಪರಾಧವನ್ನು ನಡೆಸಿರುವನು. ಮನುಷ್ಯಶರೀರವನ್ನು ಪಡೆದುದಕ್ಕೆ ತತ್ವಜ್ಞಾನವಲ್ಲವೇ ಪ್ರಧಾನವು ! ಪ್ರಕೃತಿಪುರುಷೇಶ್ವರವಿಷಯವಾದ ತತ್ವಜ್ಞಾನವಿಲ್ಲದ ಈ ದುರಾತ್ಮನು ಎಂದೆಂದಿಗೂ ಸಂಸಾರಬದ್ಧನಾಗಿಯೇ ಸಂಕಟಪಡುತ್ತಿರಲಿ ! ಎಂದೆಂದಿಗೂ ಜ್ಞಾನಹೀನನಾಗಿ ವರ್ತಿ

ಸಲಿ! ಮಾಯಾಗುಣಗಳಿಗೆ ನೆಲೆಯಾದ ದೇಹಸಂಬಂಧವನ್ನು ಎಂದೆಂದಿಗೂ ಬಿಡದೆ, ತುಚ್ಛವಾದ ಸಾಂಸಾರಿಕಸುಖಗಳನ್ನೇ ಆಶಿಸುತ್ತ, ಅರ್ಥವಾದಗಳಿಂದ ತುಂಬಿದ ವೇದಗಳನ್ನೇ ನಂಬಿ, ಬುದ್ಧಿಗೆಟ್ಟವನಾಗಿ, ಅಲ್ಪಸುಖದಾಯಕಗಳಾದ ಕರ್ಮಗಳಲ್ಲಿಯೇ ನಿರತನಾಗಿರಲಿ ! ಮತ್ತು ನಶ್ವರವಾದ ದೇಹವನ್ನೇ ಆತ್ಮವೆಂದು ಭ್ರಮಿಸಿ, ಆತ್ಮಪರಮಾತ್ಮತತ್ವವನ್ನು ತಿಳಿಯಲಾರದೆ, ಕೇವಲ ಪಶುಪ್ರಾಯನಾಗಿರುವ ಈತನಿಗೆ, ಆ ಸ್ವಭಾವಕ್ಕೆ ತಕ್ಕಂತೆ ರೂಪದಲ್ಲಿಯೂ ಆಡಿನ ಮುಖದಂತೆ ಮುಖವುಂಟಾಗಲಿ! ಕರ್ಮಾರ್ಥವಾದ ಅವಿದ್ಯೆಯನ್ನೇ ತತ್ವವಿದ್ಯೆಯೆಂದು ನಂಬಿ ಬುದ್ಧಿಗೆಟ್ಟಿರುವ ಈ ದಕ್ಷನು, ಆ ಪಶುಸ್ವಭಾವದಲ್ಲಿಯೇ ನೆಲೆಗೊಂಡಿರಲಿ ! ಮತ್ತು ಈ ದಕ್ಷನು ನಮ್ಮ ಪ್ರಭುವಾದ ರುದ್ರನನ್ನು ಅಷ್ಟೊಂದು ವಿಧವಾಗಿ ನಿಂದಿಸಿ,ಅವಮಾನಪಡಿಸುವಾಗ, ಈ ಸಭೆಯಲ್ಲಿ ಯಾವಯಾವ ಬ್ರಾಹ್ಮಣರು ಅವನ ಮಾತನ್ನು ಅನುಮೋದಿಸಿ ಸಂತೋಷಿಸುತಿದ್ದರೋ,ಅವರೆಲ್ಲರೂ ಹಾಗೆಯೇ ಕರ್ಮಪರರಾಗಿ, ಜರಾಮರಣಾದಿದುಃಖಗಳಿಗೆ ನೆಲೆಯಾದ ಸಂಸಾರದಲ್ಲಿಯೇ ಕಟ್ಟುಬಿದ್ದು ಈ ಲೋಕದಲ್ಲಿ ನರಳುತ್ತಿರಲಿ ! ಫಲವನ್ನುಕೊಡದೆ ಕೇವಲ ಪುಷ್ಪಗಳನ್ನು ಮಾತ್ರ ತೋರಿಸಿ, ಮಕರಂದಗಂಧದಿಂದ ಇತರರ ಮನಸ್ಸನ್ನು ಮೋಹಗೊಳಿಸತಕ್ಕ ಲತೆಗಳಂತೆ,ನಶ್ವರಗಳಾದ ಸ್ವರ್ಗಾದಿಸುಖಗಳನ್ನು ಕಾಣಿಸಿ,ಜನರಿಗೆ ಆಸೆಯನ್ನು ಹುಟ್ಟಿಸತಕ್ಕ ಕರ್ಮಕಾಂಡದಲ್ಲಿ ರುದ್ರದ್ವೇಷಿಗಳಾದ ಈ ಬ್ರಾಹ್ಮಣರೆಲ್ಲರೂ ಬುದ್ಧಿಮೋಹಗೊಂಡು, ಆ ಕರ್ಮಗಳಲ್ಲಿಯೇ ನಿತ್ಯಾಸಕ್ತರಾಗಿರಲಿ! ಮತ್ತು ಈ ಬ್ರಾಹ್ಮಣರು ಆಹಾರದಲ್ಲಿ ನಿಯತಿಯಿಲ್ಲದೆ ಸಿಕ್ಕಿದುದೆಲ್ಲವನ್ನೂ ಭಕ್ಷಿಸತಕ್ಕವರಾಗಿ, ಶರೀರವನ್ನೂ, ಅದಕ್ಕೆ ಸಂಬಂಧಪಟ್ಟ ಹೆಂಡಿರುಮಕ್ಕಳು ಮುಂತಾದ ಪರಿವಾರಗಳನ್ನೂ ಪೋಷಿಸುವುದಕ್ಕಾಗಿಯೇ ವಿದ್ಯಾರ್ಜನವನ್ನು ಮಾಡುತ್ತ, ಆ ಉದ್ದೇಶದಿಂದಲೇ ತಪಸ್ಸುಗಳನ್ನೂ ವ್ರತಗಳನ್ನೂ ನಡೆಸುತ್ತ, ಆತ್ಮಪರಮಾತ್ಮತತ್ವವನ್ನು ತಿಳಿಯುವುದರಲ್ಲಿ ಅಕ್ಕರೆಯಿಲ್ಲದೆ, ದ್ರವ್ಯಾರ್ಜನೆಯಲ್ಲಿ ದೃಷ್ಟಿಯಿಟ್ಟು,ಭಿಕ್ಷುಕರಾಗಿ ಸಂಚರಿಸುತ್ತಿರಲಿ!”ಎಂದು ಶಪಿಸಿದನು. ಹೀಗೆ ನಂದಿಯು,ಬ್ರಾಹ್ಮಣಕುಲಕ್ಕೆ ಶಾಪಕೊಟ್ಟುದನ್ನು ನೋಡಿ,ಅಲ್ಲಿದ್ದ ಭೃಗುಮಹರ್ಷಿಗೆ ಮನಸ್ಸಿ

ನಲ್ಲಿ ಅತ್ಯಾಕ್ರೋಶವುಂಟಾಯಿತು. ತನ್ನ ಕಡೆಯ ಬ್ರಾಹ್ಮಣರಿಗುಂಟಾದ ಈ ಅವಮಾನವನ್ನು ಸಹಿಸಲಾರದೆ,ಆ ಭೃಗುಮುನಿಯು ಬ್ರಹ್ಮದಂಡದಂತೆ ತಡೆಯಲಸಾಧ್ಯವಾದ ಪ್ರತಿಶಾಪವನ್ನು ನಂದಿಯಮೇಲೆ ಪ್ರಯೋಗಿಸುವುದಕ್ಕಾಗಿ, ಹೀಗೆಂದು ಹೇಳುವನು. "ಎಲೈ ಸಭಾಸದರೆ! ವಿವೇಕವಿಲ್ಲದ ಈ ನಂದಿಯು, ನಿಷ್ಕಾರಣವಾಗಿ ನಮ್ಮ ಬ್ರಾಹ್ಮಣರನ್ನು ಶಪಿಸಿರುವನು. ಆದುದರಿಂದ ಇದೋ! ಇವನನ್ನು ನಾನು ಶಪಿಸುವೆನು. ಲೋಕದಲ್ಲಿ ಯಾರು ಕೇವಲ ಶಂಕರಮತವನ್ನವಲಂಬಿಸುವರೋ,ಆ ಮತಾವಲಂಬಿಗಳನ್ನು ಯಾರು ಅನುಸರಿಸುವರೋ, ಅವರೆಲ್ಲರೂ ವೇದವಿರುದ್ಧಕರ್ಮಗಳಲ್ಲಿಯೇ ಪ್ರವರ್ತಿಸುತ್ತ, ಪಾಷಂಡಿಗಳೆನಿಸಿಕೊಳ್ಳಲಿ! ಮತ್ತು ಅವರು ಆಚಾರಹೀನರಾಗಿ, ಮೂಢಬುದ್ಧಿಯುಳ್ಳವರಾಗಿ, ಜಟಾಭಸ್ಮಧಾರಿಗಳಾಗಿ, ತಮ್ಮ ತಮ್ಮ ವರ್ಣಾಶ್ರಮಧರ್ಮಗಳನ್ನು ತ್ಯಜಿಸಿ, ದುರಾಚಾರಪರರಾಗಿ ವರ್ತಿಸಲಿ! ಶಿವದೀಕ್ಷೆಯನ್ನು ಹಿಡಿದು, ಸುರೆ ಮುಂತಾದ ಮದ್ಯಕುಂಭಗಳನ್ನು ಪೂಜಿಸುವವರಾಗಲಿ! ಸಕಲವರ್ಣಾಶ್ರಮದವರಿಗೂ ಶ್ರೇಯಸ್ಕರವಾಗಿಯೂ, ಕೊನೆಮೊದಲಿಲ್ಲದುವಾಗಿಯೂ, ಮನು ಮೊದಲಾದ ಪುರಾತನಾರ್ಯರಿಂದ ಆದರಿಸಲ್ಪಟ್ಟುದಾಗಿಯೂ, ಭಗವಂತನನ್ನು ತಿಳಿಸುವುದಕ್ಕೆ ಪ್ರಮಾಣಭೂತವಾಗಿಯೂ, ಅಪೌರುಷೇಯವೆನಿಸಿಕೊಂಡು ಸರ್ವೋತ್ತಮವಾಗಿಯೂಇರುವ ವೇದವನ್ನೇ ಇವರು ನಿಂದಿಸುತ್ತ, ಸಜ್ಜನರಿಂದ ಆದರಿಸಲ್ಪಡತಕ್ಕ ಆ ವೇದ ಮಾರ್ಗವನ್ನು ಬಿಟ್ಟು, ರುದ್ರದೇವತಾತ್ಮಕವಾದ ಪಾಷಂಡಧರ್ಮದಲ್ಲಿಯೇ ನಿರತರಾಗಿರಲಿ!" ಎಂದನು. ಭೃಗುಮುನಿಯು ಹೇಳಿದ ಈ ಮಾತನ್ನು ಕೇಳಿ ರುದ್ರನು, ಮನಸ್ಸಿನಲ್ಲಿ ಸ್ವಲ್ಪಪರಿತಾಪಗೊಂಡವನಂತೆ ತನ್ನ ಅನುಚರರೊಡಗೂಡಿ, ಆ ಕ್ಷಣವೇ ಆ ಯಜ್ಞಶಾಲೆಯನ್ನು ಬಿಟ್ಟು ಹೊರಟುಹೋದನು. ಆಮೇಲೆ ಇತ್ತಲಾಗಿ ಮರೀಚಿ ಮೊದಲಾದ ಮಹರ್ಷಿಗಳೆಲ್ಲರೂ ಶ್ರೀಹರಿಪ್ರೀತಿಗಾಗಿ ತಾವು ಆರಂಭಿಸಿದ್ದ ಸತ್ರಯಾಗವನ್ನು ಸಹಸ್ರಸಂವತ್ಸರಗಳವರೆಗೆ ಸಾಂಗವಾಗಿ ನೆರವೇರಿಸಿ, ಗಂಗಾ ಯಮುನಾನದಿಗಳ ಸಂಗಮಸ್ಥಳದಲ್ಲಿ ಅವಭೃತವನ್ನೂ ನಡೆಸಿ, ಕೃತಕೃತ್ಯರಾಗಿ, ತಮ್ಮ ತಮ್ಮ ನಿವಾಸಗಳಿಗೆ ಹೊರಟುಹೋದರು. ಇದು ಎರಡನೆಯಅಧ್ಯಾಯವು.

---

ಸತೀದೇವಿಯು ತನ್ನ ತಂದೆಯಾದ ದಕ್ಷನಯಾಗ ಕ್ಕಾಗಿ ಹೋಗಬೇಕೆಂದು ರುದ್ರನ ಅನುಮತಿ ಯನ್ನು ಕೇಳಿದುದು. ರುದ್ರನು ಅವಳನ್ನು ತಡೆದುದು.

ವಿದುರಾ ಕೇಳು! ಹೀಗೆ ಮಾವನಿಗೂ, ಅಳಿಯನಿಗೂ ಪ್ರಬಲವಾದ ವಿರೋಧವು ಬೆಳೆದು, ಬಹುಕಾಲದವರೆಗೆ ಅವರಿಬ್ಬರೂ ಆ ವೈರಭಾವದಿಂ ದಲೇ ಇರುತಿದ್ದರು. ಆಮೇಲೆ ಒಂದಾನೊಂದು ಕಾಲದಲ್ಲಿ ಚತುರ್ಮುಖ ಬ್ರಹ್ಮನು ದಕ್ಷನನ್ನು ಬೇರೆ ಎಲ್ಲಾ ಪ್ರಜಾಧಿಪತಿಗಳಿಗೂ ಪ್ರಧಾನನನ್ನಾಗಿ ಮಾಡಿ, ಆ ಆಧಿಪತ್ಯದಲ್ಲಿ ಅವನಿಗೆ ಪಟ್ಟಾಭಿಷೇಕವನ್ನೂ ನಡೆಸಿದನು. ಇದರಿಂದ ದಕ್ಷನಿಗೆ ಮನಸ್ಸಿನಲ್ಲಿ ಮತ್ತಷ್ಟು ಗರ್ವೋದ್ರೇಕವುಂಟಾಯಿತು. ಇದಕ್ಕಿವೊದಲೇ ದಕ್ಷನು ಬ್ರಹ್ಮಾಂಶಭೂತನಾದ ರುದ್ರನಿಗೂ, ಅವನ ಕಡೆಯವರಿಗೂ ಯಜ್ಞದಲ್ಲಿ ಹವಿರ್ಭಾಗಗಳನ್ನು ಸಲ್ಲಿಸಕೂಡದೆಂದು ಶಪಿಸಿ, ಅವರನ್ನು ಅವಮಾನಪಡಿಸಿದ್ದನಷ್ಟೆ? ಅದರಿಂದಾಚೆಗೆ ದಕ್ಷನು ತಾನಾ ಗಿಯೇ ವಾಜಪೇಯವೆಂಬ ಒಂದಾನೊಂದು ಯಾಗವನ್ನಾರಂಭಿಸಿ, ಅವ ರೆಲ್ಲರನ್ನೂ ಅವಮಾನಪಡಿಸಿದುದಲ್ಲದೆ, ಬೃಹಸ್ಪತಿಸವವೆಂಬ ಮತ್ತೊಂದು ಯಾಗವನ್ನೂ ನಡೆಸತೊಡಗಿದನು. ಈ ಯಾಗಕ್ಕಾಗಿ ಎಲ್ಲಾ ದೇವತೆಗಳೂ, ಪಿತೃಗಳೂ, ಬ್ರಹ್ಮರ್ಷಿಗಳೂ, ದೇವರ್ಷಿಗಳೂ ಉತ್ಸಾಹಪೂರ್ವಕವಾಗಿ ಬರುತ್ತಿದ್ದರು. ಇವರೆಲ್ಲರೂ ತಮ್ಮತಮ್ಮ ಪತ್ನಿಯರೊಡಗೂಡಿ, ಸಮಸ್ತ ಮಂಗಳಾಲಂಕಾರಭೂಷಿತರಾಗಿ ಆಕಾಶಮಾರ್ಗದಲ್ಲಿ ಬರುತ್ತಿರುವಾಗ, ಒಬ್ಬರಿಗೊಬ್ಬರು ಆ ದಕ್ಷಯಾಗದ ವೈಭವಗಳನ್ನೇ ಬಹಳವಾಗಿಕೊಂಡಾಡು ತ್ತಿದ್ದರು. ಆಗ ಮನೆಯ ಬಾಗಿಲಲ್ಲಿ ಕುಳಿತಿದ್ದ ಸತೀದೇವಿಯು, ಹೀಗೆ ದೇವ ತಾಸ್ತ್ರೀಯರೆಲ್ಲರೂ ಉತ್ತಮಾಹಾರಗಳನ್ನೂ, ದಿವ್ಯಕುಂಡಲಗಳನ್ನೂ ಧರಿಸಿ, ತನ್ನ ತಂದೆಯ ಯಾಗಸಂಭ್ರಮಗಳನ್ನು ಹೇಳಿಕೊಳ್ಳುತ್ತ, ನಾನಾ ಕಡೆಗ ಳಿಂದ ಹೊರಟು ತನ್ನ ಮನೆಯಮುಂದೆ ಉತ್ಸಾಹದಿಂದ ಪ್ರಯಾಣಮಾಡು ತ್ತಿರುವುದನ್ನು ನೋಡಿ, ತಾನೂ ಆ ಉತ್ಸವವನ್ನು ನೋಡಿ ಬರಬೇಕೆಂಬ ಕುತೂಹಲವುಳ್ಳವಳಾಗಿ ಪತಿಯಾದ ರುದ್ರನ ಬಳಿಗೆ ಬಂದು ಹೀಗೆಂದು ಪ್ರಾರ್ಥಿಸುವಳು. ''ನಾಥಾ! ಈಗ ನಿನ್ನ ಮಾವನಾದ ದಕ್ಷನು, ಯಾವುದೋ

ಯಜ್ಞವನ್ನು ನಡೆಸುತ್ತಿರುವಹಾಗಿದೆ. ಅದೋ! ಆಕಾಶದಲ್ಲಿ ಅನೇಕದೇವತೆಗಳು ಮಹಾಸಂಭ್ರಮದಿಂದ ಪ್ರಯಾಣಮಾಡುತ್ತಿರುವರು ನೋಡು!ನಿನಗೆ ಸಮ್ಮತವಾದರೆ, ನಾವೂ ಅಲ್ಲಿಗೆ ಹೋಗಿ ನೋಡಿ ಬರುವೆವು. ಆ ಉತ್ಸವಕ್ಕಾಗಿ ನನ್ನ ಸಹೋದರಿಯರೆಲ್ಲರೂ ಬಂಧುಮಿತ್ರರನ್ನು ನೋಡುವುದಕ್ಕೆ ಇದೇ ಒಳ್ಳೇಸಮಯವೆಂದು ತಮ್ಮತಮ್ಮ ಪತಿಗಳೊಡನೆ ಬಂದು ಸೇರುವುದರಲ್ಲಿ ಸಂದೇಹವಿಲ್ಲ.ಆದುದರಿಂದ ಅವರಂತೆ ನಾವೂ ಅಲ್ಲಿಗೆ ಹೋದರೆ, ಅವರೆಲ್ಲರನ್ನೂ ನೋಡಿಕೊಂಡು, ಅಲ್ಲಿ ನನ್ನ ತಂದೆತಾಯಿಗಳು ನಮಗೆ ನಡೆಸತಕ್ಕ ಮರ್ಯಾದೆಗಳೆಲ್ಲವನ್ನೂ ಪಡೆದು ಬರಬಹುದು.ಅಲ್ಲಿ ನನ್ನ ಅಕ್ಕಂದಿರನ್ನೂ,ಭಾವಂದಿರನ್ನೂ,ನನ್ನ ತಾಯಿಯ ಸಹೋದರಿಯರನ್ನೂ,ಬಹುಕಾಲದಿಂದ ನನ್ನನ್ನು ಕಾಣದೆ ತವಕಿಸುತ್ತಿರುವ ನನ್ನತಾಯಿಯನ್ನೂ, ಯಾಗಶಾಲೆಯಲ್ಲಿ ಮಹರ್ಷಿಗಳಿಂದ ಯೂಪಸ್ತಂಭವು ಎತ್ತಿ ನಿಲ್ಲಿಸಲ್ಪಡುವುದನ್ನೂ ನೋಡಿ ಬರಬೇಕೆಂದು ಬಹುಕಾಲದಿಂದ ನನಗೆ ಕುತೂಹಲವುಂಟು. ಅಲ್ಲಿ ಹೋದರೆ ಆ ಆಸೆಯನ್ನೂ ತೀರಿಸಿಕೊಳ್ಳಬಹುದು. ಆದರೆ, ಎಲೈ ನಾಥನೆ! ನಿನಗೆ ಅಲ್ಲಿ ಹೋಗಿ ನೋಡಬೇಕಾದ ಆಶ್ಚರ್ಯವೇನೂ ಇರಲಾರದು. ಏಕೆಂದರೆ, ಕರ್ಮಸಂಬಂಧವಾದ ಜನನಮರಣಾದಿಗಳೊಂದೂ ಇಲ್ಲದಶ್ರೀಮಹಾವಿಷ್ಣುವು, ಸತ್ವಾದಿಗುಣತ್ರಯದ ಮೂಲಕವಾಗಿ ತನ್ನ ಮಾಯೆಯಿಂದ ಚಿತ್ರವಿಚಿತ್ರವಾಗಿ ಹರಡಿರುವ ಈ ಪ್ರಪಂಚಸ್ಥಿತಿಯು ಮೊತ್ತಕ್ಕೆ, ತತ್ವಜ್ಞರಾದ ನಿಮ್ಮಂತವರಿಗೆ ಆಶ್ಚರ್ಯವನ್ನುಂಟುಮಾಡುವುದೇಹೊರತು, ಬೇರೆ ಯಾವ ಅಲ್ಪವಿಷಯವೂ ನಿಮ್ಮ ಮನಸ್ಸಿಗೆ ಅಷ್ಟೊಂದು ಆಶ್ಚರ್ಯವನ್ನುಂಟುಮಾಡಲಾರದು. ನಾನಾದರೋ ಹೆಣ್ಣುಹೆಂಗಸು ! ಸ್ತ್ರೀಯರು ಸಹಜವಾಗಿಯೇ ಚಪಲಸ್ವಭಾವವುಳ್ಳವರು ! ಅದರಲ್ಲಿಯೂ ನಾನು ಪರಾವರತತ್ವವನ್ನು ತಿಳಿದವಳಲ್ಲ. ಆದುದರಿಂದ ನಾನು ನನ್ನ ತಂದೆಯ ಮನೆಗೆ ಹೋಗಿ, ಅಲ್ಲಿ ನನ್ನ ಬಂಧುಗಳನ್ನು ನೋಡಿ ಬರಬೇಕೆಂಬ ಕುತೂಹಲದಿಂದ ಆತುರಪಡುತ್ತಿರುವೆನು. ನನ್ನ ಕೋರಿಕೆಯನ್ನು ನೆರವೇರಿಸಬೇಕು. ನಾಥಾ! ಇದೂ ಹಾಗಿರಲಿ! ನಮ್ಮೊಡನೆ ಯಾವವಿಧವಾದ ಬಂಧುತ್ವವೂ ಇಲ್ಲದ ಇತರಸ್ತ್ರೀಯರೂ ಕೂಡ, ಎಷ್ಟೋ ಉತ್ಸಾಹದಿಂದ ಉಡಿಗೆ

ತೊಡಿಗೆಗಳನ್ನು ಧರಿಸಿ,ತಮ್ಮತಮ್ಮ ಪತಿಗಳೊಡನೆ ಆ ಮಹೋತ್ಸವವನ್ನು ನೋಡುವುದಕ್ಕೆ ಹೋಗುತ್ತಿರುವರು ನೋಡು!ಕಲಹಂಸದಂತೆ ಬಿಳುಪಾದ ವಿಮಾನಗಳನ್ನೇರಿ ಪ್ರಯಾಣಮಾಡುತ್ತಿರುವ ಈ ದೇವತೆಗಳಗುಂಪಿನಿಂದ ಆಕಾಶವೆಲ್ಲವೂ ತುಂಬಿ ಹೋಗಿರುವುದನ್ನು ಕಾಣೆಯಾ?ಹೀಗಿರುವಾಗ ತಂದೆ ಯಮನೆಯಲ್ಲಿ ಮಹೋತ್ಸವವು ನಡೆಯುತ್ತಿರುವುದನ್ನು ಕೇಳಿಯೂ, ಹೊಟ್ಟೆಯಲ್ಲಿ ಹುಟ್ಟಿದ ಮಗಳಾದ ನನಗೆ ಅಲ್ಲಿಗೆ ಹೋಗದೆ ನಿಲ್ಲುವುದಕ್ಕೆ ಹೇಗೆ ತಾನೇ ಮನಸ್ಸು ತಡೆಯುವುದು ? ನನ್ನ ದೇಹವನ್ನು ತಡೆದಿಟ್ಟರೂ ನನ್ನ ಮನಸ್ಸು ನಿಲ್ಲಲಾರದು. ಆದರೆ “ಕರೆಯದೆ ನಾವು ಅಲ್ಲಿಗೆ ಹೋಗುವುದು ಯುಕ್ತವಲ್ಲ.” ವೆಂದು ನೀನು ಹೇಳಬಹುದು. ಕರೆಯದಿದ್ದರೂ ನಾವು ಅಲ್ಲಿಗೆ ಹೋಗಬೇಕಾದುದೇ ಯುಕ್ತವು. ಏಕೆಂದರೆ, ಲೋಕದಲ್ಲಿ ತಂದೆತಾಯಿಗಳೂ, ಆಚಾರ್ಯನೂ,ಪತಿಯೂ, ಮಿತ್ರರೂ ಕರೆಯದಿದ್ದರೂ ಅವರ ಮನೆಗಳಲ್ಲಿ ನಡೆಯತಕ್ಕ ಮಹೋತ್ಸವಕ್ಕೆ ಹೋಗಬೇಕಾದುದೇ ಯುಕ್ತವು. ಇದು ಹಿರಿಯರ ಸಂಪ್ರದಾಯದಿಂದ ನಡೆದು ಬಂದಿರುವುದು. ಇದನ್ನು ನನ್ನ ಆತುರಕ್ಕಾಗಿ ನಾನು ಸ್ವಬುದ್ಧಿಯಿಂದ ಹೇಳುವೆನೆಂದುತಿಳಿಯಬೇಡ! ನೀನೋ ನನ್ನಲ್ಲಿ ಅಸಾಧಾರಣ ವಾತ್ಸಲ್ಯವುಳ್ಳವನೆಂಬುದಕ್ಕೆ,ನನ್ನನ್ನು ಕ್ಷಣಮಾತ್ರವೂ ಆಗಲಿರಲಾರದೆ ನಿನ್ನ ಅರ್ಧದೇಹವನ್ನಾಗಿ ನನ್ನನ್ನು ಪರಿಗ್ರಹಿಸಿರುವುದೇ ಸಾಕಾದ ನಿದರ್ಶನವಾಗಿದೆ.ಅದೇವಿಧವಾದ ವಾತ್ಸಲ್ಯದಿಂದ ನನ್ನ ಕೋರಿಕೆಯನ್ನೀಡೇರಿಸಬೇಕು.ನನ್ನಲ್ಲಿ ಕೃಪೆಯಿಟ್ಟು ನನ್ನನ್ನು ಕರೆದುಕೊಂಡು ಹೋಗು”ಎಂದಳು.ರುದ್ರನು ಹೀಗೆ ಪ್ರಾರ್ಥಿಸುತ್ತಿರುವ ಸತೀದೇವಿಯ ವಾಕ್ಯವನ್ನು ಕೇಳಿ ಮೊದಲು ದಕ್ಷನು ತನ್ನನ್ನು ಮಹಾಸಭೆಯಲ್ಲಿ ಅತಿಕ್ರೂರವಾಗಿ ನಿಂದಿಸಿದ ವಾಕ್ಯಗಳನ್ನೂ ಸ್ಮರಿಸಿಕೊಂಡು ತನ್ನ ಪತ್ನಿಗೆಸಮಾಧಾನವನ್ನು ಹೇಳುವನು. “ಪ್ರಿಯೆ!ನೀನು ಹೇಳಿದುದೇನೋ ಯುಕ್ತವು. ಬಂಧುಗಳ ಮನೆಗೆ ಕರೆಯದಿದ್ದರೂ ಹೋಗಬೇಕಾದುದೇ ಹಿರಿಯರಸಂಪ್ರದಾಯವೆಂಬುದೂ ನಿಜವು. ಆದರೆ ಆ ಬಂಧುಗಳು ಪರಸ್ಪರಪರುಷವಾಕ್ಯಗಳನ್ನಾಡಿ, ಆ ವಾಗ್ಬಾಣಗಳಿಂದ ನೊಂದಿದ್ದರೆಮಾತ್ರ,ಆ ಬಾಂಧವ್ಯವು ಬಿಟ್ಟು ಹೋಗಬೇಕಲ್ಲದೆ ಬೇರೆಯಲ್ಲ. ಅಂತಹ ಬಂಧುಗಳ ಮನೆಗೆ ಕಾಲಿಡುವುದೇ

ನ್ಯಾಯವಲ್ಲ. ಎಲೆ ದೇವಿ! ಮತ್ತೊಂದು ವಿಷಯವನ್ನು ಹೇಳುವೆನು ಕೇಳು. ಲೋಕದಲ್ಲಿ ವಿದ್ಯೆ, ತಪಸ್ಸು, ಧನ, ರೂಪ, ವಯಸ್ಸು, ಕುಲ, ವೆಂಬೀ ಆರು ಬಗೆಯ ಭಾಗ್ಯಗಳೂ ಸತ್ಪುರುಷರಲ್ಲಿ ಸೇರಿದಪಕ್ಷದಲ್ಲಿ, ಅವು ಗುಣರೂಪವಾಗಿ ಪರಿಣಮಿಸುವುವು. ಈ ಗುಣಗಳೇ ದುರ್ಜನರಲ್ಲಿ ದೋಷಹೇತುಗಳಾಗುವುವು. ಆದುದರಿಂದ ನಿನ್ನ ತಂದೆಯಾದ ದಕ್ಷನು, ವಿದ್ಯೆ, ತಪಸ್ಸು, ಮೊದಲಾದ ಎಲ್ಲಾಸದ್ಗುಣಗಳಿಂದ ಕೂಡಿದವನಾಗಿದ್ದರೂ, ಅವನ ಮನಸ್ಸು ದುಷ್ಟವಾದುದರಿಂದ, ಆ ಗುಣಗಳೇ ಅವನಲ್ಲಿ ದೋಷಗಳಾಗಿ ಪರಿಣಮಿಸಿರುವುವು. ಇದರಿಂದ ಅವನು ಗರ್ವೋದ್ರಿಕ್ತನಾಗಿ ಮಹಾತ್ಮರನ್ನು ತಿರಸ್ಕರಿಸುವನು. ಈ ಗರ್ವದಿಂದ ಅವನಿಗೆ ಸ್ವಲ್ಪಮಾತ್ರವೂ ತಾರತಮ್ಯಜ್ಞಾನವಿರುವಂತೆ ತೋರುವುದಿಲ್ಲ. ಯಾರಲ್ಲಿ ಹೇಗೆ ನಡೆಯಬೇಕೆಂಬ ವಿವೇಕಜ್ಞಾನವೂ ಅವನಲ್ಲಿಲ್ಲ. ತನಗಿಂತಲೂ ಮೇಲಾದವರನ್ನೂ ಕೂಡ, ಹುಲ್ಲಿಗಿಂತಲೂ ಕಡೆಯಾಗಿ ಭಾವಿಸುವನು. ಹೀಗೆ ಗರ್ವೋದ್ರಿಕ್ತನಾಗಿಯೂ, ದುರ್ಗುಣಗಳಿಗೆ ನೆಲೆಯಾಗಿಯೂ ಇರುವ ನಿನ್ನ ತಂದೆಯ ಮನೆಗೆ,ಬಂಧುತ್ವವನ್ನು ಭಾವಿಸಿ ನಾವಾಗಿ ಹೋಗುವುದು ಎಷ್ಟುಮಾತ್ರವೂ ಉಚಿತವಲ್ಲ.ಒಂದುವೇಳೆ ನಾವಾಗಿ ಹೋದರೂ,ಇಂತಹ ಕುಟಿಲಬುದ್ಧಿಯುಳ್ಳವರು, ನಮ್ಮನ್ನು ಕ್ರೂರದೃಷ್ಟಿಯಿಂದ ನೋಡಿ ನಿರಾಕರಿಸುವರೇ ಹೊರತು, ಗೌರವಿಸಲಾರರು. ಇಂತಹ ಚಪಲಬುದ್ಧಿಯುಳ್ಳವರ ಬಳಿಗೆ ಹೋಗಿ ನಾವು ಅವಮಾನಪಟ್ಟು ಬರಬೇಕೇಹೊರತು ಬೇರೆಯಲ್ಲ. ಬೇರೆವಿಧವಾದ ಎಷ್ಟೋ ಕಷ್ಟಗಳನ್ನಾದರೂ ಸಹಿಸಬಹುದೇಹೊರತು, ನಮ್ಮ ಬಂಧುಗಳು, ನಮ್ಮ ವಿಷಯವಾಗಿ ನುಡಿಯತಕ್ಕ ತಿರಸ್ಕಾರವಾಕ್ಯಗಳನ್ನುಮಾತ್ರ ಸಹಿಸುವುದು ಸಾಧ್ಯವಲ್ಲ. ಯುದ್ಧದಲ್ಲಿ ಶತ್ರುಗಳಮುಂದೆ ನಿಂತು,ಅವರ ಬಾಣಪ್ರಹಾರಗಳಿಂದ ಬಹಳವಾಗಿ ನೊಂದು ಗಾಯಗಳಿಂದ ದೇಹವೆಲ್ಲವೂ ಛಿನ್ನಭಿನ್ನವಾಗಿದ್ದರೂಕೂಡ, ತನ್ನ ಮನೆಗೆ ಹಿಂತಿರುಗಿ ಬಂದಮೇಲೆ, ತಕ್ಕ ಚಿಕಿತ್ಸೆಯನ್ನು ಮಾಡಿಸಿಕೊಂಡು ರಾತ್ರಿಯಲ್ಲಿ ಸುಖನಿದ್ರೆಯನ್ನನುಭವಿಸಬಹುದು. ಆದರೆ ಬಂಧುಗಳ ದುರ್ವಾಕ್ಯಗಳೆಂಬ ಬಾಣಗಳಿಂದ ನೊಂದವನಿಗೆ, ಯಾವವಿಧದಲ್ಲಿಯೂ ಚಿಕಿತ್ಸೆಯಿಲ್ಲ,

ಎಷ್ಟುದಿನಗಳಾದರೂ ಅವನ ಮನಸ್ಸಿಗೆ ನೆಮ್ಮದಿಯಿರದು! ಅಹೋರಾತ್ರವೂ ಕೊರಗಿಸಂಕಟಪಟ್ಟುಕಂದಿಕುಂದಿ ಕೃಶನಾಗಿ,ಕೊನೆಗೆ ಆಸಂಕಟದಿಂದಲೇ ಸಾಯುವನು.ಎಲೆ ದೇವಿ!ನಿನ್ನ ತಂದೆಯು ಹಿಂದೆ ಬ್ರಹ್ಮಸಭೆಯಲ್ಲಿ ನನ್ನನ್ನು ಕ್ರೂರವಾಕ್ಯದಿಂದ ನಿಂದಿಸಿ ತಿರಸ್ಕರಿಸಿದುದುಹಾಗಿರಲಿ! ಈಗಲೂ ಅದೇ ದ್ವೇಷವನ್ನಿಟ್ಟುಕೊಂಡು ನಮ್ಮನ್ನು ಕರೆಯದಂತೆಯೇ ಯಾಗವನ್ನೂನಡೆಸುತ್ತಿರುವನಲ್ಲಾ!ಇಂತಹ ಸ್ಥಿತಿಯಲ್ಲಿ ನಾವಾಗಿ ಹೋಗುವುದು ಯುಕ್ತವೆ?ನೀನೇ ಆಲೋಚಿಸಿ ನೋಡು! ಆದುದರಿಂದ ಎಂದಿಗೂ ನಾನು ಬರಲಾರೆನು. ಒಂದುವೇಳೆ ನೀನು “ನನ್ನ ತಂದೆಯು ನಿನ್ನನ್ನು ನಿಂದಿಸಿದುದರಿಂದ ನೀನು ಅಲ್ಲಿಗೆ ಹೋಗದಿರುವುದು ಯುಕ್ತವಾದರೂ ನಾನು ಹೋಗಿಬರುವುದಕ್ಕೆ ಅಡ್ಡಿಯಿಲ್ಲವಷ್ಟೆ?” ಎಂದು ಕೇಳಬಹುದು. ಪ್ರಜಾಧಿಪತಿಗಳಲ್ಲಿ ತನಗೆ ಪ್ರಧಾನಪಟ್ಟವಾಯಿತೆಂಬ ಗರ್ವದಿಂದ ಬೀಗಿ ಬೆರೆಯುತ್ತಿರುವ ಆ ನಿನ್ನ ತಂದೆಗೆ, ನಿನ್ನಲ್ಲಿ ಹೆಚ್ಚಾದ ಪ್ರೇಮವಿದ್ದರೂ ಇರಬಹುದು. ಲೋಕದಲ್ಲಿ ತಂದೆತಾಯಿಗಳಿಗೆ ಕಿರಿಯ ಮಕ್ಕಳಲ್ಲಿ ಹೆಚ್ಚು ಪ್ರೇಮವಿರುವುದು ಸಹಜವಾದುದರಿಂದ, ನಿನ್ನ ತಂದೆಯಾದ ದಕ್ಷನಿಗೆ ನಿನ್ನ ಒಡಹುಟ್ಟಿದವರಲ್ಲಿರುವುದಕ್ಕಿಂತಲೂ ನಿನ್ನಲ್ಲಿಯೇ ಹೆಚ್ಚುಪ್ರೇಮವುಂಟೆಂಬುದನ್ನೂ ನಾನು ಧೃಢವಾಗಿ ಹೇಳಬಲ್ಲೆನು. ಆದರೆ ನೀನು ನಮಗೆ ಭಾರ್ಯೆಯಾಗಿ ನನ್ನನ್ನೇ ನಂಬಿರತಕ್ಕವಳು. ನಾನೋ ನಿನ್ನ ತಂದೆಗೆ ಪರಮವಿರೋಧಿಯಾಗಿರುವೆನು. ಆದುದರಿಂದ ನಿನ್ನ ತಂದೆಯು ನಿನ್ನನ್ನು ಮೊದಲಿನಂತೆ ಈಗಲೂ ಪ್ರೀತಿಸಿ ಗೌರವಿಸುವನೆಂದು ನನಗೆ ತೋರಲಿಲ್ಲ. ಆದುದರಿಂದ ಇನ್ನು ನೀನು ಈ ವಿಷಯದಲ್ಲಿ ನನ್ನನ್ನು ನಿರ್ಬಂಧಿಸಬೇಡ ! ಹಿಂದೆ ದಕ್ಷನು ಬ್ರಹ್ಮಸಭೆಗೆ ಬಂದಾಗ, ನಾನು ಅವನನ್ನು ಗೌರವಿಸದೆ ಹೋದುದಕ್ಕಾಗಿ, ಅವನು ನನ್ನಲ್ಲಿ ವೈರವನ್ನು ಬೆಳೆಸಿದನೆಂದೂ,ಆ ವಿರೋಧಕ್ಕೆ ನಾನೇ ಕಾರಣವೆಂದೂ ನೀನು ಹೇಳಬಹುದು. ಅದು ಹಾಗಲ್ಲ.ಲೋಕದಲ್ಲಿ ಕೆಲವುಮೂಢರು,ಪುಣ್ಯಬಲದಿಂದಸತ್ಕೀರ್ತಿಯನ್ನುಪಡೆದುಪ್ರಸಿದ್ಧಿಹೊಂದಿದಮಹಾತ್ಮರಂತೆ ತಾವೂಉನ್ನತಪದವಿಯನ್ನು ಹೊಂದಬೇಕೆಂದುಪ್ರಯತ್ನಿಸಿ,ಈಪ್ರಯತ್ನವುಕೈಗೂಡದಿದ್ದಾಗವಿವೇಕವಿಲ್ಲದೆ ಮನಸ್ಸಂಕಟದಿಂದಬೇಯುವರು.ಮಾತ್ಸರ್ಯದಿಂದ ಆ

ಮಹಾತ್ಮರನ್ನೇ ದ್ವೇಷಿಸುವರು. ಈ ದ್ವೇಷಕ್ಕೆ ಅವರವರ ಅಜ್ಞತೆಯೇಕಾರಣವಲ್ಲದೆ ಬೇರೆಯಲ್ಲ. ಲೋಕಪೂಜ್ಯನಾದ ಶ್ರೀಮನ್ನಾರಾಯಣನಲ್ಲಿ ರಾಕ್ಷಸರು ದ್ವೇಷಿಸುವುದಕ್ಕೆ ಅವರ ಅವಿವೇಕವಲ್ಲವೇಕಾರಣವು! ಆದುದರಿಂದನಿನ್ನ ತಂದೆಯಾದ ದಕ್ಷನು ನನ್ನನ್ನು ದ್ವೇಷಿಸುವುದಕ್ಕೆ ಅವನ ಮನಸ್ಸಿನಲ್ಲಿರುವ ಅಸೂಯೆಯೇ ಕಾರಣವೇಹೊರತು ನಾನಲ್ಲ. ಹೇಗಿದ್ದರೂ ಪೂಜ್ಯನಾದ ಆ ದಕ್ಷನನ್ನು ನೋಡಿ ನಮಸ್ಕರಿಸದೆ ಹೋದುದು ನನ್ನ ತಪ್ಪೆಂದು ನೀನು ಭಾವಿಸಿರಬಹುದು. ದೇವಿ ! ನೀನು ಹೇಳಿದುದೇನೋ ನಿಜವು. ಪ್ರಾಜ್ಞರಾದವರು ಒಬ್ಬರನ್ನೊಬ್ಬರು ಸಂಧಿಸಿದಾಗ ಥಟ್ಟನೆ ಇದಿರೆದ್ದು, ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ ನಮಸ್ಕರಿಸಬೇಕಾದುದೇ ಉಚಿತಕೃತ್ಯವು. ಆದರೆ ದೇಹಾಭಿಮಾನವುಳ್ಳ ಅಜ್ಞನನ್ನು ಕಂಡಾಗ, ಪ್ರಾಜ್ಞನಾದವನು, ಭಗವಂತನನ್ನು ಮಧ್ಯವರ್ತಿಯನ್ನಾಗಿಟ್ಟುಕೊಂಡು, ಮನಸ್ಸಿನಲ್ಲಿ ಮಾತ್ರ ನಮಸ್ಕರಿಸುವನೇಹೊರತು ಕರಣತ್ರಯದಿಂದಲೂ ನಮಸ್ಕರಿಸಲಾರನು. ನಿನ್ನ ತಂದೆಯಾದ ದಕ್ಷನು ಕೇವಲ ದೇಹಾಭಿಮಾನದಿಂದ ಗರ್ವಿಷ್ಠನೆಂಬುದನ್ನು ನಾನು ಬಲ್ಲೆನು. ಅವನು ಸಭಾಪ್ರವೇಶವನ್ನು ಮಾಡಿದಾಗ ನಾನು ವಾಕ್ಕಾಯಗಳಿಂದ ಪ್ರತ್ಯುತ್ಥಾನಮಾಡಿ ನಮಸ್ಕರಿಸದಿದ್ದರೂ, ಹೃದಯಾಂತರ್ಯಾಮಿಯಾದ ಭಗವಂತನನ್ನುದ್ದೇಶಿಸಿ, ಮಾನಸಿಕವಾಗಿಯೇ ಪ್ರತ್ಯುತ್ಥಾನಪ್ರಣಾದಿಗಳೆಲ್ಲವನ್ನೂ ನಡೆಸಿ ಗೌರವಿಸಿರುವೆನು. ನಾವು ಪ್ರಾಜ್ಞರಾದವರಿಗೆ ಸ್ಪಷ್ಟವಾಗಿ ತಲೆಬಗ್ಗಿ ನಮಸ್ಕರಿಸಿದರೂ, ಅವರು ಅದನ್ನು ಭಗವದರ್ಪಿತವನ್ನಾಗಿಯೇ ತಿಳಿಯುವರೇಹೊರತು, ಆ ನಮಸ್ಕಾರವನ್ನು ತಮಗೆಂದು ಭಾವಿಸಲಾರರು. ಆತ್ಮತತ್ವವನ್ನರಿಯದ ದುರಭಿಮಾನಿಗಳಾದರೋ, ತಮಗೆ ಮತ್ತೊಬ್ಬರು ತ್ರಿಕರಣಗಳಿಂದಮಾಡುವನಮಸ್ಕಾರಾದಿಗೌರವಗಳನ್ನೂ ತಮಗೆಂದೇ ಭಾವಿಸಿ, ತಾವು ಮತ್ತೊಬ್ಬರನ್ನು ಗೌರವಿಸುವಾಗಲೂ ಅದೇಭಾವದಿಂದ ಗೌರವಿಸುವರು. "ಆದರೆ ಅಂತರ್ಯಾಮಿಯಾದ ಪರಮಪುರುಷನಿಗಾದರೂ ತ್ರಿಕರಣಗಳಿಂದಿಲ್ಲದೆ, ಮನಸ್ಸಿನಿಂದಮಾತ್ರವೇ ನಮಸ್ಕರಿಸಬೇಕಾದುದೇನು?" ಎಂದು ಕೇಳುವೆಯಾ ? ರಜಸ್ತಮೋಗುಣಗಳ ಸಂಬಂಧವಿಲ್ಲದೆ, ಕೇವಲಸತ್ವಪ್ರಧಾನವಾಗಿ, ಪರಿ

ಶುದ್ಧವೆನಿಸಿದ ಮನಸ್ಸನ್ನು ವಸುದೇವಾತ್ಮಕವೆಂದು ಹೇಳುವರು. ಪ್ರಕಾಶಗುಣವುಳ್ಳ ಅಂತಹ ಮನಸ್ಸಿಗೇ ಭಗವಂತನ ಸ್ವರೂಪಾದಿಗಳೆಲ್ಲವೂ ಸ್ಪಷ್ಟವಾಗಿ ಕಾಣುವುವು. ಅಂತಹ ಮನಸ್ಸಿನಲ್ಲಿಯೇ ಭಗವಂತನು ನಿತ್ಯವಾಸವನ್ನೂ ಮಾಡುವನು. ಆ ವಸುದೇವನು ಅಂತಹ ಮನಸ್ಸಿನ ವ್ಯಾಪಾರಕ್ಕಲ್ಲದೆ ಬೇರೆ ಇಂದ್ರಿಯಗಳಿಗೆ ಗೋಚರಿಸಲಾರನು. ಆದುದರಿಂದ ಆ ಭಗವಂತನನ್ನು ಅಂತಹ ಮನಸ್ಸಿನಿಂದ ನಮಸ್ಕರಿಸಬೇಕಾದುದೇಯುಕ್ತವು. ಆದರಂತೆಯೇ ನಾನೂ ಅವನನ್ನು ಮನಸ್ಸಿನಿಂದಮಾತ್ರವೇ ನಮಸ್ಕರಿಸಿದೆನು. ಆದುದರಿಂದ ಈ ವಿಷಯದಲ್ಲಿ ನಾನು ತಪ್ಪಿ ನಡೆದವನಲ್ಲ. ದಕ್ಷನು ಕೇವಲ ದುರಭಿಮಾನದಿಂದ ನನ್ನಲ್ಲಿ ವಿರೋಧಿಸುತ್ತಿರುವನು. ಹೀಗೆ ನನ್ನೊಡನೆ ಬದ್ಧ ದ್ವೇಷವುಳ್ಳ ಆ ದಕ್ಷನ ಮನೆಗೆ ನಾನಾಗಲಿ, ನೀನಾಗಲಿ, ಕಾಲಿಡುವುದೇ ಉಚಿತವಲ್ಲ. ಅವನನ್ನು ಕಣ್ಣೆತ್ತಿನೋಡುವುದೂ ನನಗೆ ಸಮ್ಮತವಿಲ್ಲ. ಇಷ್ಟಾದರೂ ನೀನು ತಂದೆಯೆಂಬ ಅಭಿಮಾನಕ್ಕಾಗಿ ನನ್ನ ಮಾತನ್ನು ಮೀರಿ ಹೋದಪಕ್ಷದಲ್ಲಿ, ನನಗೂ ಅಲ್ಲಿ ತಿರಸ್ಕಾರವುಂಟಾಗುವುದೇ ನಿಶ್ಚಯವು. ಹಿಂದೆ ಯಜ್ಞಸಭೆಯಲ್ಲಿ ನಿರಪರಾಧಿಯಾಗಿ ಕುಳಿತಿದ್ದ ನನ್ನನ್ನು ಪರುಷವಾಕ್ಯದಿಂದ ತಿರಸ್ಕರಿಸಿದ ಆ ನಿನ್ನ ತಂದೆಯನ್ನಾಗಲಿ, ಅವನ ಕಡೆಯವರನ್ನಾಗಲಿ, ಇನ್ನುಮೇಲೆ ನೀನು ಕಣ್ಣೆತ್ತಿಯೂ ನೋಡಬಾರದೆಂಬುದೇ ನನ್ನ ಅಭಿಪ್ರಾಯವು. ನೀನು ಮಿತಿಮೀರಿ ಹೋದರೂ ಅವಮಾನವು ತಪ್ಪದು. ಸ್ವಜನರಲ್ಲಿ ಅವಮಾನಪಟ್ಟು ಬದುಕುವುದಕ್ಕಿಂತ,ಸಾಯುವುದೇ ಮೇಲು. ಅಂತಹ ತಿರಸ್ಕಾರವು ಆ ಕ್ಷಣವೇ ಮರಣಕ್ಕೂ ಕಾರಣವಾಗಬಹುದು. ಇದರಮೇಲೆ ನಿನ್ನಿಷ್ಟವು” ಎಂದನು. ಇಲ್ಲಿಗೆ ಮೂರನೆಯ ಅಧ್ಯಾಯವು.

---

{ ಸತೀದೇವಿಯು ಪತಿಯ ಮಾತನ್ನುಲ್ಲಂಘಿಸಿ ತಂದೆಯ ಯಾಗಶಾಲೆಗೆ ಹೋಗಿ ಅಲ್ಲಿ ತಿರಸ್ಕಾರಹೊಂದಿ ದೇಹತ್ಯಾಗವನ್ನು ಮಾಡಿದುದು. }

ವಿದುರಾ! ಇಷ್ಟುಮಾತನ್ನು ಹೇಳಿ ರುದ್ರನು ಸುಮ್ಮನಾದನು. ಆ ಹರೆ ಅವನಿಗೆ ಮನಸ್ಸಿನಲ್ಲಿ ಪರಸ್ಪರವಿರುದ್ಧವಾದ ಆಲೋಚನೆಯು ಹು

ಟ್ಟಿತು. ತನ್ನ ಪತ್ನಿಯಾದ ಸತೀದೇವಿಯು ಯಾಗಕ್ಕೆ ಹೋದಪಕ್ಷದಲ್ಲಿ, ಅಲ್ಲಿ ಬಹಳವಾಗಿ ತಿರಸ್ಕಾರವನ್ನುಹೊಂದಿ ಪ್ರಾಣತ್ಯಾಗವನ್ನು ಮಾಡಿ ಕೊಳ್ಳುವುದೇ ನಿಶ್ಚಯವು.ಅಲ್ಲಿಗೆ ಹೋಗದಂತೆ ಅವಳನ್ನು ತಡೆದಪಕ್ಷದಲ್ಲಿ,ತನ್ನ ತಂದೆತಾಯಿಗಳನ್ನೂ,ಅಕ್ಕಂದಿರನ್ನೂನೋಡಿ ಬರಬೇಕೆಂಬ ದೊಡ್ಡಕುತೂಹಲಕ್ಕೆ ಭಂಗವುಂಟಾಗುವುದರಿಂದ,ಇಲ್ಲಿಯೇ ಅವಳು ಪ್ರಾಣತ್ಯಾಗಮಾಡಿ ಕೊಳ್ಳಬಹುದು.ಆದುದರಿಂದ ಅವಳನ್ನು ಕಳುಹಿಸಿದರೂ,ಕಳುಹಿಸದಿದ್ದರೂ ಅವಳ ಪ್ರಾಣಹಾನಿಗೆ ಸಂಭವವಿರುವುದರಿಂದ, ಯಾವ ನಿಶ್ಚಯವನ್ನೂಮಾಡಲಾರದೆ ಚಿಂತಿಸುತ್ತ ಮೌನದಿಂದಿದ್ದನು. ಇತ್ತಲಾಗಿ ಸತೀದೇವಿಯು,ತನ್ನ ಪ್ರಿಯಬಂಧುಗಳನ್ನು ನೋಡಬೇಕೆಂಬ ಕುತೂಹಲದಿಂದ ತವಕಿಸುತ್ತ,ನಿಂತಲ್ಲಿ ನಿಲ್ಲಲಾರದೆ ತತ್ತಳಿಸುತ್ತಿದ್ದಳು.ಒಮ್ಮೆ ಹೇಗಾದರೂ ತಾನು ಹೊರಟುಹೋಗುವುದೇ ನಿಶ್ಚಯವೆಂದು ಮನೆಯಿಂದ ಹೊರಕ್ಕೆ ಬರುವಳು.ಹೊರಕ್ಕೆ ಬಂದಕೂಡಲೆ ಅಲ್ಲಿ ನಿಂತು,ಪತಿಯಾಜ್ಞೆಯನ್ನು ಮೀರಿ ಹೋಗುವುದರಿಂದ ಮುಂದೆ ತನಗೆ ಯಾವಹಾನಿಯುಂಟಾಗುವುದೋ ಎಂದು ಭಯಪಟ್ಟು ಹಿಂತಿರುಗುವಳು. ಹೀಗೆ ಅವಳ ಮನಸ್ಸೂ ನಿಶ್ಚಯಬುದ್ಧಿಯಿಲ್ಲದೆ ತತ್ತಳಿಸ್ಸುತಿತ್ತು.ತನ್ನ ಪತಿಯಿಂದ ತನ್ನ ಆಸೆಗೆ ಭಂಗವುಂಟಾದುದಕ್ಕಾಗಿದುಃಖಿಸುತ್ತ ಕ್ಷಣಕ್ಷಣಕ್ಕೂ ತನ್ನ ತಂದೆತಾಯಿಗಳನ್ನೂ,ಅಕ್ಕಂದಿರನ್ನೂ ನೆನೆಸಿಕೊಂಡು ಕಣ್ಣುಗಳಲ್ಲಿ ದುಃಖಬಾಷ್ಪಗಳನ್ನುತುಂಬಿಕೊಂಡು ಅಳುತಿದ್ದಳು. ಎಷ್ಟಾದರೂ ಅವಳ ಮನಸ್ಸಿಗೆ ದುಃಖಶಾಂತಿಯುಂಟಾಗಲಿಲ್ಲ.ಕೊನೆಕೊನೆಗೆಮನಸ್ಸಿನಲ್ಲಿ ಕೋಪವು ಹೆಚ್ಚುತ್ತಬಂದಿತು. ಆ ಕೋಪದಿಂದ ದೇಹದಲ್ಲಿ ನಡುಕವುಂಟಾಯಿತು. ಆಗ ಆ ಸತೀದೇವಿಯು, ಕೇವಲಶಾಂತಿಮೂರ್ತಿಯಾಗಿ ಅಜಾತಶತ್ರುವೆನಿಸಿದ ತನ್ನ ಪತಿಯಾದ ರುದ್ರನನ್ನು ತನ್ನ ಕಣ್ಣಿನಿಂದಲೇ ದಹಿಸಿಬಿಡುವಂತೆ ದುರದುರನೆ ನೋಡಿದಳು. ಹೀಗೆ ಸ್ವಲ್ಪಕಾಲದವರೆಗೆ ಅವನನ್ನುನೋಡಿ, ದೊಡ್ಡದಾಗಿ ನಿಟ್ಟುಸಿರನ್ನು ಬಿಟ್ಟಳು. ಅವಳ ಮನಸ್ಸಿನಲ್ಲಿ ತಂದೆತಾಯಿಗಳನ್ನು ನೋಡಬೇಕೆಂಬ ಆತುರವು ಪ್ರಬಲವಾಗುತ್ತಬಂದಿತು. ದುಃಖವೂ, ರೋಷವೂ ಮೇಲೆಮೇಲೆ ಹೆಚ್ಚಿತು. ಹೀಗೆ ಬಂಧುಸ್ನೇಹದಿಂದ ಬುದ್ಧಿಗೆಟ್ಟ ಆ ಸತೀದೇವಿಯು, ತನ್ನಲ್ಲಿರುವ ಪ್ರೇಮಾತಿಶಯ

ದಿಂದ ತನಗೆ ಅರ್ಧಶರೀರವನ್ನೇ ಕೊಟ್ಟವನಾಗಿಯೂ, ತನಗೆ ಸರ್ವವಿಧ ದಲ್ಲಿಯೂ ನಾಥನಾಗಿಯೂ ಇರುವ ರುದ್ರನ ಮಾತನ್ನೂ ನಿರಾಕರಿಸಿ, ಸ್ತ್ರೀಯರಿಗೆ ಸಹಜವಾದ ಚಪಲಬುದ್ಧಿಯನ್ನವಲಂಬಿಸಿ, ಆ ಸ್ಥಳವನ್ನು ಬಿಟ್ಟು, ತನ್ನ ತಂದೆಯ ಮನೆಗೆ ಪ್ರಯಾಣಮಾಡಿ ಹೊರಟುಬಿಟ್ಟಳು. ಹೀಗೆ ಸತೀದೇವಿಯು ಬಹಳ ಸಡಗರದಿಂದ ಏಕಾಕಿನಿಯಾಗಿ ಪ್ರಯಾಣ ಮಾಡಿ ಹೊರಡುತ್ತಿರುವುದನ್ನು, ರುದ್ರನ ಅನುಚರರಾದ ಪ್ರಥಮಗಣಗ ಳಲ್ಲಿ ಕೆಲವರು ನೋಡಿದರು. ಹೀಗೆ ಪ್ರಭುಪತ್ನಿಯಾದ ಸತೀದೇವಿಯು ಅಸಹಾಯಳಾಗಿ ಕಾಲುನಡೆಯಿಂದಲೇ ಪ್ರಯಾಣಮಾಡುವುದನ್ನೂ, ರುದ್ರನು ಅವಳನ್ನು ಹಿಂಬಾಲಿಸದಿರುವುದನ್ನೂ ನೋಡಿ ಮಣಿಮಂತ, ಮದನ, ಮೊದಲಾದ ಪಾರ್ಷದರೂ, ಯಕ್ಷರೂ, ಮನಸ್ಸಿನಲ್ಲಿ ದುಃಖಿತ ರಾಗಿ, ವೃಷೇಂದ್ರನಾದ ನಂದಿಯನ್ನು ಮುಂದಿಟ್ಟುಕೊಂಡು ತಾವಾಗಿಯೇ ಅವಳ ಸಹಾಯಕ್ಕಾಗಿ ಹಿಂಬಾಲಿಸಿ ಹೊರಟರು. ಅವರಲ್ಲಿ ಕೆಲವರು ಅವಳು ಲೀಲಾರ್ಥವಾಗಿ ಸಾಕಿದ ಗಿಳಿಗಳನ್ನೂ, ಕೆಲವರು ಅವಳ ಆಟದ ಚಂಡು ಗಳನ್ನೂ ಕೆಲವರು ಕನ್ನಡಿಗಳನ್ನೂ, ಕೆಲವರು ಲೀಲಾಪದ್ಮಗಳನ್ನೂ, ಕೆಲ ವರು ಶ್ವೇತಚ್ಛತ್ರಗಳನ್ನೂ, ಕೆಲವರು ಬೀಸಣಿಗೆಗಳನ್ನೂ, ಕೆಲವರು ಗಂಥ ಮಾಲ್ಯಾದಿಗಳನ್ನೂ ಸಂಗ್ರಹಿಸಿಕೊಂಡು ಹೊರಟರು. ಕೆಲವರು ಬಾಯಿಂದ ಗಾನಮಾಡುತ್ತ ಬಂದರು. ಕೆಲವರು ಶಂಖ, ದುಂದುಭಿ, ವೇಣು ಮೊದ ಲಾದ ವಾದ್ಯಗಳನ್ನು ನುಡಿಸುತ್ತ ಹೊರಟರು. ಹೀಗೆ ಅವರೆಲ್ಲರೂ ತಮ್ಮ ಉಡಿಗೆ ತೊಡಿಗೆಗಳನ್ನು ತೊಟ್ಟು, ಅವಳಿಗೂ ಅಲಂಕಾರಗಳನ್ನು ತೊಡಿಸಿ ಅವಳನ್ನು ಬಲಾತ್ಕಾರದಿಂದ ನಂದಿಯಮೇಲೆ ಕುಳ್ಳಿರಿಸಿ, ದಕ್ಷನ ಯಜ್ಞ ಶಾಲೆಗೆ ಕರೆತಂದು ಬಿಟ್ಟರು. ಹೀಗೆ ಸಾವಿರಾರುಮಂದಿ ರುದ್ರಾನುಚರ ರೊಡನೆ ಸತೀದೇವಿಯು ತನ್ನ ತಂದೆಯ ಯಜ್ಞಶಾಲೆಯನ್ನು ಪ್ರವೇ ಶಿಸಿ, ಅಲ್ಲಿ ನೆರೆದಿದ್ದ ಮಹರ್ಷಿಗಳನ್ನೂ, ಅವರು ನಾನಾಕಡೆಗಳಲ್ಲಿಯೂ ನಡೆಸುತಿದ್ದ ವೇದಘೋಷಗಳನ್ನೂ, ದರ್ಭೆ, ಅಜಿನ, ಮುಂತಾದುವುಗ ಳಿಂದ ಮಾಡಿದ ಆಸ್ತರಣಗಳನ್ನೂ, ಯಜ್ಞಪಶುವನ್ನೂ, ಬ್ರಾಹ್ಮಣಗೋ ಷ್ಠಿಯನ್ನೂ, ದೇವಸಮೂಹವನ್ನೂ, ಮೃತ್ಪಾತ್ರೆಗಳನ್ನೂ, ಕಮಂಡಲುಗಳ

ನ್ನೂ, ಉಕ್ಕಿನಿಂದಲೂ, ಸುವರ್ಣದಿಂದಲೂ ಮಾಡಿದ ಯಜ್ಞಪಾತ್ರಗ ಳನ್ನೂ ನೋಡಿದಳು. ಹೀಗೆ ಸಮಸ್ತಯಜ್ಞಸಾಮಗ್ರಿಗಳಿಂದ ತುಂಬಿದ ಆ ಯಾಗಶಾಲೆಯನ್ನು ಪ್ರವೇಶಿಸಿ ಸಂತೋಷದಿಂದ ನೋಡುತ್ತಿದ್ದಳು. ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳಾದ ಈ ಸತೀದೇವಿಯು ಬಂದು ನಿಂತಿ ರುವುದನ್ನು ನೋಡಿಯೂ ದಕ್ಷನು, ಇವಳನ್ನು ಕಣ್ಣೆತ್ತಿಯೂ ನೋಡದೆ ಸುಮ್ಮನಿದ್ದನು. ಈ ದಕ್ಷನ ಭಯಕ್ಕಾಗಿ ಅವನ ಕಡೆಯವರೂ ಅವಳನ್ನು ಆದರಿಸಲಿಲ್ಲ. ಆದರೆ ಈ ಸತೀದೇವಿಯ ತಾಯಿ,ಮತ್ತು ಅಕ್ಕಂದಿರುಮಾತ್ರ, ಇವಳನ್ನು ಕಂಡೊಡನೆ ಸಂತೋಷದಿಂದ ಆನಂದಬಾಷ್ಪವನ್ನು ಸುರಿ ಸುತ್ತ ಮುಂದೆ ಬಂದು, ಅವಳನ್ನಾಲಿಂಗಿಸಿಕೊಂಡು, ಅತ್ಯಾದರಪೂರ್ವಕ ವಾಗಿ ಕ್ಷೇಮಲಾಭಗಳನ್ನು ವಿಚಾರಿಸಿದರು. ಹೀಗೆ ಸತೀದೇವಿಯನ್ನು ಅವಳ ತಾಯಿ, ತಾಯಿಯ ಒಡಹುಟ್ಟಿದವರು, ಮತ್ತು ಸಹೋದರಿಯರು ಮುಂ ತಾಗಿ ಕೆಲವು ಬಂಧುಸ್ತ್ರೀಯರುಮಾತ್ರ ಪ್ರೇಮಪುರಸ್ಸರವಾಗಿ ಸತ್ಕ ರಿಸಿ, ಕುಶಲಪ್ರಶ್ನಗಳನ್ನು ಮಾಡಿ,ಪೀಠವನ್ನು ಕೊಟ್ಟು ಕುಳ್ಳಿರಿಸುವುದಕ್ಕೆ ಹೋದರು. ಆದರೆ ಅವಳಿಗೆ ತನ್ನ ತಂದೆಯಾದ ದಕ್ಷನು ತನ್ನನ್ನು ಪುರಸ್ಕ ರಿಸಲಿಲ್ಲವೆಂಬ ವ್ಯಥೆಯು ಮನಸ್ಸಿಗೆ ಬಹಳ ವ್ಯಾಕುಲತೆಯನ್ನುಂಟುಮಾಡಿ ದುದರಿಂದ, ಇತರರು ಮಾಡಿದ ಸತ್ಕಾರಗಳೊಂದನ್ನೂ ಸ್ವೀಕರಿಸುವು ದಕ್ಕೆ ಸಮ್ಮತಿಸಲಿಲ್ಲ. ಮತ್ತು ತನ್ನ ತಂದೆಯಾದ ದಕ್ಷನು ಲೋಕಪೂಜ್ಯ ನಾದ ತನ್ನ ಪತ್ನಿಯನ್ನು ನಿರಾಕರಿಸಿ,ಅವನಿಗೆ ಸಲ್ಲಿಸಬೇಕಾದ ಹವಿರ್ಭಾಗ ವನ್ನೂ ಸಲ್ಲಿಸದೆ, ಯಜ್ಞಮಾಡುತ್ತಿರುವುದನ್ನೂ, ತಾನಾಗಿ ಬಂದು ಯಜ್ಞಶಾಲೆಯಲ್ಲಿ ನಿಂತಾಗಲೂ ತನ್ನನ್ನು ಮಾತಾಡಿಸದೆ ತಿರಸ್ಕರಿಸಿದು ದನ್ನೂ ನೋಡಿ ಅವಳ ಮನಸ್ಸಿಗೆ ಸಹಿಸಲಾರದ ಸಂಕಟವುಂಟಾಯಿತು. ಉಕ್ಕಿಬರುವ ಕೋಪಾವೇಶದಿಂದ ಸಮಸ್ತಲೋಕಗಳನ್ನೂ ದೃಷ್ಟಿಯಿಂ ದಲೇ ದಹಿಸಿಬಿಡುವಂತೆ ನೋಡುತ್ತ,ರೋಷಾಕುಲಿತವಾದ ಪರುಷವಾಕ್ಯ ದಿಂದ ತನ್ನ ತಂದೆಯನ್ನು ನಿಂದಿಸುವುದಕ್ಕೆ ತೊಡಗಿದಳು ಧೂಮಾದಿ ಮಾರ್ಗಕ್ಕೆ ತಂದು ಸೇರಿಸಿ, ಅಲ್ಪಫಲಗಳನ್ನು ಕೊಡತಕ್ಕ ಕರ್ಮಗಳಲ್ಲಿ ಬಿದ್ದು, ಅದರಿಂದ ಮಹಾಗರ್ವಿಷ್ಠನಾಗಿಯೂ, ರುದ್ರದ್ವೇಷಿಯಾಗಿಯೂ

ಇರುವ ಆ ದಕ್ಷನ ಹೆಮ್ಮೆಯನ್ನೂ, ಸತೀದೇವಿಯ ಮನೋವ್ಯಥೆಯನ್ನೂ ನೋಡಿ, ಇವಳೊಡನೆ ಬಂದಿದ್ದ ಭೂತಗಣಗಳೆಲ್ಲವೂ ಅತ್ಯಾಕ್ರೋಶ ಗೊಂಡು, ಆಗಲೇ ಆ ದಕ್ಷನನ್ನು ಹಿಡಿದು ಕೊಂದುಬಿಡಬೇಕೆಂದು ನಿಶ್ಚಯಿಸಿ, ಒಂದೇ ಗುಂಪಾಗಿ ಮೇಲೆದ್ದು ನಿಲ್ಲಲು, ಸತೀದೇವಿಯು ಅವರೆಲ್ಲರನ್ನೂ ತಡೆದು, ಆ ಸಭಾಜನವೆಲ್ಲವೂ ಕೇಳುತ್ತಿರುವ ಹಾಗೆ ತನ್ನ ತಂದೆಯನ್ನು ಕುರಿತು ಹೀಗೆಂದು ಹೇಳುವಳು. “ಓ ಬ್ರಾಹ್ಮಣಾ! ಯಾವಾಗಲೂ ಆತ್ಮಾನಂದವನ್ನನುಭವಿಸುವುದರಲ್ಲಿಯೇ ನಿರತನಾಗಿ, ಪರಮಾತ್ಮನೊಬ್ಬನನ್ನೇ ಭಕ್ತಿಯಿಂದ ಭಜಿಸುತ್ತಿರುವ ನನ್ನ ನಾಥನಾದ ಶಂಕರನು, ಸಮಸ್ತವನ್ನೂ ಬ್ರಹ್ಮಸ್ವರೂಪವನ್ನಾಗಿಯೇ ಭಾವಿಸತಕ್ಕವನು! ಅವನಿಗೆ ಇಂತವರು ಪ್ರಿಯರೆಂದೂ, ಇಂತವರು ವಿರೋಧಿಗಳೆಂದೂ ಭೇದಬುದ್ಧಿಯಿಲ್ಲ! ಹೀಗೆ ಸರ್ವಸಮನಾಗಿ ವರ್ತಿಸತಕ್ಕ ಅಂತಹ ಮಹಾತ್ಮನಲ್ಲಿ ಕೇವಲವಿವೇಕಹೀನನಾದ ನೀನೊಬ್ಬನುಹೊರತು ಬೇರೆ ಯಾರು ತಾನೇ ದ್ವೇಷಿಸುವರು! ಇತರರ ಗುಣಗಳಲ್ಲಿ ದೋಷವನ್ನು ಹುಡುಕಿ ತೆಗೆಯುವುದೇ ನಿನ್ನಂತಹ ದುರಾತ್ಮರ ಸ್ವಭಾವವು. ಇತರರಲ್ಲಿ ಕಂಡು ಬರುವ ಅಲ್ಪಸ್ವಲ್ಪ ಗುಣಗಳನ್ನೇ ಬಹಳವಾಗಿ ವಿಸ್ತರಿಸಿ ಕೊಂಡಾಡುವುದು ಸಜ್ಜನರ ಸ್ವಭಾವವು. ಅಂತಹ ಸಾಧುಸ್ವಭಾವವುಳ್ಳ ನನ್ನ ಪತಿಯಲ್ಲಿಯೇ ನೀನು ಮಹಾಪರಾಧವನ್ನು ನಡೆಸಿದೆಯಲ್ಲಾ! ಶವಪ್ರಾಯವಾದ ಶರೀರವನ್ನೇ ಆತ್ಮವೆಂದು ಭ್ರಮಿಸಿ ಗರ್ವಪಡುತ್ತಿರುವ ನಿಮ್ಮಂತಹ ಕುತ್ಸಿತಬುದ್ಧಿಯುಳ್ಳವರು, ಈ ರೀತಿಯಾಗಿ ಮಹಾತ್ಮರನ್ನು ನಿಂದಿಸುವುದೇನೂ ಆಶ್ಚರ್ಯವಲ್ಲ. ಅಸೂಯೆಯೇ ಇದಕ್ಕೆ ಕಾರಣವು. ಇಂತಹ ದುರಾತ್ಮರನ್ನಡಗಿಸುವುದಕ್ಕೆ ಆ ಮಹಾಪುರುಷರು, ತಮಗೆ ಸಹಜವಾದ ದಯಾಗುಣದಿಂದ ತಾವಾಗಿ ಪ್ರಯತ್ನಮಾಡದಿದ್ದರೂ, ಅವರ ಪಾದಧೂಳಿಯೇ ಆ ನೀಚರ ದುರಹಂಕಾರವನ್ನೂ, ಅವರಲ್ಲಿರುವ ಅಲ್ಪಸ್ವಲ್ಪತೇಜಸ್ಸನ್ನೂ ಅಡಗಿಸಿ ಬಿಡಬಲ್ಲುದು. ಹೀಗೆ ನಿಗ್ರಹಿಸಲ್ಪಟ್ಟ ದುರಾತ್ಮರು ಮತ್ತಷ್ಟು ಅಸಹನದಿಂದ ಆ ಮಹಾತ್ಮರನ್ನು ನಿಂದಿಸುತ್ತ, ಅದರಿಂದಲೇ ಸಂತೋಷಪಡುವರು. ಓ ಬ್ರಾಹ್ಮಣಾ! “ಶಿವ” ಎಂದು ಕರೆಯಲ್ಪಡುವ ಯಾವ ಮಹಾತ್ಮನ ಎರಡು ನಾಮಾಕ್ಷರ

ಗಳನ್ನು ಉಚ್ಚರಿಸಿದಮಾತ್ರಕ್ಕೆ ಸಮಸ್ತಪಾಪಗಳೂ ನೀಗುವುವೋ, ಯಾವನ ಕೀರ್ತಿಯು ಲೋಕಪಾವನವೆನಿಸಿರುವುದೋ, ಯಾವನ ಆಜ್ಞೆಗೆ ಮೂರುಲೋಕದಲ್ಲಿಯೂ ತಡೆಯಿಲ್ಲವೋ,ಅಂತಹಮಹಾತ್ಮನಲ್ಲಿ ನಿನಗೆ ದ್ವೇಷವೆ? ಯಾವ ವಿಷಯದಲ್ಲಿಯೂ ಅವನಿಗೆ ಸಾಟಿಯಲ್ಲದ ನಿನಗೆ ಅವನೊಡನೆ ಹೋರಾಟವೆ? ಅಯ್ಯೋ ಎಂತಹ ಅಕೃತ್ಯವನ್ನು ನಡೆಸಿದೆ! ಬ್ರಹ್ಮಾನಂದರಸವನ್ನು ಪಾನಮಾಡಬೇಕೆಂಬ ಆಸೆಯುಳ್ಳವನು, ತಮ್ಮ ಮನಸ್ಸೆಂಬ ಭ್ರಮರಗಳನ್ನು ಯಾವನ ಪಾದಾರವಿಂದಗಳಲ್ಲಿ ನೆಲೆಗೊಳಿಸುತ್ತಿರುವರೋ, ಯಾವನು ಸಮಸ್ತಲೋಕಕ್ಕೂ ಕೋರಿದ ಕೋರಿಕೆಗಳನ್ನು ಆಯಾಕ್ಷಣದಲ್ಲಿಈಡೇರಿಸುತ್ತ,ಲೋಕಬಂಧುವೆಂದು ಪ್ರಖ್ಯಾತಿಯನ್ನು ಹೊಂದಿರುವನೋಅಂತಹ ಪರಮೇಶ್ವರನೊಡನೆ ನಿನಗೆ ವಿರೋಧವೆ? ಆ ಬ್ರಹ್ಮಸಭೆಯಲ್ಲಿ ನೀನು ನನ್ನ ಪತಿಯನ್ನು ಅಮಂಗಳಸ್ವರೂಪನೆಂದೂ, ಅವನ ಹೆಸರನ್ನಾದರೂ ಸ್ಮರಿಸಬಾರದೆಂದೂ ಹೇಳಿದೆಯಲ್ಲವೆ? ಅದರ ತತ್ವವನ್ನು ನೀನೇನು ಬಲ್ಲೆ ! ನನ್ನ ಪತಿಯಾದ ರುದ್ರನು, ಶ್ಮಶಾನದಲ್ಲಿ ಜಡೆಗಳನ್ನು ಕೆದರಿಕೊಂಡು,ಅಲ್ಲಿನ ಮಾಲ್ಯಗಳನ್ನೂ,ಭಸ್ಮವನ್ನೂ, ಕಪಾಲಗಳನ್ನೂ ಧರಿಸಿ,ಪಿಶಾಚಗಳ ಗುಂಪಿನಲ್ಲಿ ವಾಸಮಾಡುತ್ತಿರುವುದರಿಂದ ಅವನನ್ನು ಅಮಂಗಳಸ್ವರೂಪನೆಂದು ನೀನೊಬ್ಬನು ಭಾವಿಸಿದಮಾತ್ರಕ್ಕೇನು? ಈಸ್ವರೂಪವನ್ನೇ ಮರೀಚ್ಯಾದಿಗಳೆಲ್ಲರೂ ಎಷ್ಟೋವಿಧದಿಂದ ಕೊಂಡಾಡಿ, ತಮ್ಮ ಪವಿತ್ರತೆಗಾಗಿ ಆತನ ಪಾದಧೂಳಿಯನ್ನು ತಮ್ಮ ತಲೆಯಲ್ಲಿ ಧರಿಸುತ್ತಿರುವರು ! ದೋಷೈಕದೃಷ್ಟಿಯಾದ ನೀನೊಬ್ಬನುಹೊರತು ಬೇರೊಬ್ಬರೂ ಅವನನ್ನು ನಿಂದಿಸಲಾರರು.ಅವನುಆ ವಿಧವಾದ ಸ್ವರೂಪವನ್ನು ಕೈಕೊಂಡಿರುವುದು ನಿಮ್ಮಂತಹ ಅವಿವೇಕಿಗಳನ್ನುಮರುಳುಮಾಡುವುದಕ್ಕಲ್ಲದೆ ಬೇರೆಯಲ್ಲ!ಇನ್ನುಹೆಚ್ಚುಮಾತಿನಿಂದೇನು? ಲೋಕದಲ್ಲಿ ಧರ್ಮಪರಿಪಾಲಕನಾದ ಆ ಈಶ್ವರನನ್ನು ದುರ್ಬುದ್ಧಿಯುಳ್ಳ ಯಾವನಾದರೂ ನಿಂದಿಸುವುದಕ್ಕೆ ಬಾಯೆತ್ತಿದಕೂಡಲೆ,ಆ ನಿಂದಾವಾಕ್ಯವು ಕಿವಿಗೆ ಬೀಳುವಷ್ಟರೊಳಗಾಗಿ ಸತ್ಪುರುಷನಾದವನು ಆ ದುರಾತ್ಮನ ನಾಲಗೆಯನ್ನು ಕತ್ತಿಯಿಂದ ಕತ್ತರಿಸಿಬಿಡಬೇಕು. ಆ ಕಾರ್ಯವನ್ನು ನಡೆಸುವುದಕ್ಕೆ ತನ್ನಿಂದ ಸಾಧ್ಯವಿಲ್ಲದಪಕ್ಷದಲ್ಲಿ ತಾನೇ ಆತ್ಮಹತ್ಯವನ್ನಾದರೂಮಾ

ಡಿಕೊಂಡು ಪ್ರಾಣವನ್ನು ಬಿಡಬೇಕು! ಅದಕ್ಕೂ ಮನಸ್ಸು ಬಾರದಪಕ್ಷದಲ್ಲಿ ಕಿವಿಗಳನ್ನು ಮುಚ್ಚಿಕೊಂಡು ಆಕ್ಷಣವೇ ಆ ಸ್ಥಲವನ್ನು ಬಿಟ್ಟು ಹೊರಟು ಹೋಗಬೇಕು.ಇದನ್ನು ತಿಳಿಯದೆ ನೀನೇ ನಿನ್ನ ಬಾಯಿಂದ ಆ ಪರಮಶಿವನನ್ನು ನಿಂದಿಸಿದೆಯಲ್ಲಾ! ಆ ಮಹಾತ್ಮನನ್ನು ನಿಂದಿಸಿದ ನಿನ್ನ ನಾಲಗೆಯನ್ನು ಈ ಕ್ಷಣವೇ ಕತ್ತರಿಸಬೇಕಾದುದು ನನ್ನ ಕರ್ತವ್ಯವಾಗಿದೆ. ಹೆಣ್ಣು ಹೆಂಗಸಾದ ನನಗೆ ಆ ಕಾರ್ಯವನ್ನು ನಡೆಸುವಷ್ಟು ಸಾಮರ್ಥ್ಯವಿಲ್ಲವಾದುದರಿಂದ, ಈಗ ನನಗೆ ಪ್ರಾಣತ್ಯಾಗವನ್ನು ಮಾಡಿಕೊಳ್ಳಬೇಕಾದುದೇ ಉಚಿತಕೃತವು!ಶಿವನಿಂದೆಯನ್ನು ಕೇಳಲಾರದೆ ಪ್ರಾಣತ್ಯಾಗಮಾಡುವ ವಿಚಾರವು ಹಾಗಿರಲಿ! ಆ ಶಿವದ್ವೇಷಿಯಾದ ನಿನ್ನ ಶರೀರದಿಂದ ಹುಟ್ಟಿದ ಈ ನನ್ನ ಶರೀರವನ್ನಿಟ್ಟುಕೊಂಡಿರುವುದೇ ನನಗೆ ಸರ್ವಥಾ ಸಮ್ಮತವಿಲ್ಲ! ಮೊದಲು ಅಜ್ಞಾನದಿಂದ ದುಷ್ಟಾನ್ನವನ್ನು ತಿಂದವನು, ಕೊನೆಗೆ ಅದರ ನಿಜಸ್ಥಿತಿಯನ್ನು ತಿಳಿದಮೇಲೆ, ಪ್ರಯತ್ನಪೂರ್ವಕವಾಗಿ ಆ ಅನ್ನವನ್ನು ಹೊರಕ್ಕೆ ಕಕ್ಕಿ ಶರೀರವನ್ನು ಪವಿತ್ರಮಾಡಿಕೊಳ್ಳುವಂತೆ, ಈಗ ನಾನೂ ನನ್ನ ಪೂರ್ವಕರ್ಮವಶದಿಂದ ದುರಾತ್ಮನಾದ ನಿನಗೆ ಮಗಳಾಗಿ ಹುಟ್ಟಿದ್ದರೂ, ಈಗ ಆವಿಷಯದಲ್ಲಿ ಪಶ್ಚಾತ್ತಾಪವು ಹುಟ್ಟಿರುವುದರಿಂದ ಕೇವಲತುಚ್ಛವಾಗಿಯೂ, ನಿಂದಾಸ್ಪದವಾಗಿಯೂ ಇರುವ ಈ ದೇಹವನ್ನು ಬಿಟ್ಟು ಪವಿತ್ರಳಾಗುವೆನು. ನನ್ನಪತಿಯಾದ ರುದ್ರನು ವೈದಿಕಕರ್ಮಗಳನ್ನು ಬಿಟ್ಟು ಅಮಂಗಳಸ್ವರೂಪನಾಗಿ ತಿರುಗುತ್ತಿರುವನೆಂದು ಅವನನ್ನು ನೀನು ನಿಂದಿಸಿದೆಯಲ್ಲವೆ? ನನ್ನ ಪತಿಯು ಕೇವಲಶುದ್ಧಮನಸ್ಸಿಗೆಮಾತ್ರವೇ ಗೋಚರಿಸತಕ್ಕ ಪರಬ್ರಹ್ಮಾನಂದದಲ್ಲಿರತಕ್ಕವನು. ಅಂತಹ ಮಹಾಯೋಗಿಯಾದ ಆತನ ಮನಸ್ಸಿಗೆ, ಕರ್ಮಪ್ರವಣಗಳಾದ ವೇದಮಾರ್ಗಗಳೊಂದೂ ರುಚಿಸದು! ದೇವತೆಗಳಿಗೆ ಗಗನದಲ್ಲಿಯೂ, ಮನುಷ್ಯರಿಗೆ ಭೂಮಿಯಲ್ಲಿಯೂ ಗತಿಭೇದವು ಏರ್ಪಟ್ಟಿರುವಂತೆ, ವೇದಗಳಲ್ಲಿಯೂ ಪ್ರವೃತ್ತಿನಿವೃತ್ತಿಕರ್ಮಗಳೆಂಬ ಎರಡು ವಿಭಾಗವುಂಟು! ಆದರೆ, ಪ್ರವೃತ್ತಿಕರ್ಮವು ರಾಗಕಾರಣವೆಂದೂ,ನಿವೃತ್ತಿಕರ್ಮಗಳು ವೈರಾಗ್ಯಕಾರಣವೆಂದೂ ವಿಭಾಗಿಸಲ್ಪಟ್ಟಿರುವುದರಿಂದ,ಸಂಸಾರಿಗಳುಪ್ರವೃತ್ತಿಕರ್ಮವನ್ನೂ,ಆತ್ಮಾನುಭವದಲ್ಲಿಅಪೇಕ್ಷೆಯು

ಳೃ ಯೋಗಿಗಳು ನಿವೃತ್ತಿಕರ್ಮವನ್ನೂ ಪ್ರಧಾನವಾಗಿ ಕೈಕೊಳ್ಳುವರು. ಇವುಗಳಲ್ಲಿ ಕರ್ಮಗಳನ್ನು ತೊರೆದು, ಭಗವದುಪಾಸನವನ್ನುಮಾಡುವುದೇ ಮೇಲಾದ ಧರ್ಮವಾದುದರಿಂದ, ಆ ಮಾರ್ಗವನ್ನನುಸರಿಸಬೇಕೆಂಬುದೇ ವೇದಗಳ ಮುಖ್ಯಾಭಿಪ್ರಾಯವು. ಅದನ್ನನುಷ್ಠಿಸತಕ್ಕವರೇ ವೈದಿಕೋತ್ತಮರೇಹೊರತು, ಕೇವಲ ಕರ್ಮಾನುಷ್ಠಾನದಲ್ಲಿರತಕ್ಕವರನ್ನು ವೇದದ ತತ್ವಾರ್ಥವನ್ನು ಚೆನ್ನಾಗಿ ತಿಳಿಯದವರೆಂದೇ ಎಣಿಸಬೇಕು. ಇಂತಹ ಮೂಢರಲ್ಲಿ ನೀನೂ ಒಬ್ಬನಾದುದರಿಂದ, ನೀನು ಅಲ್ಪಸುಖಹೇತುಗಳಾದ ಸ್ವರ್ಗಾದಿಗಳನ್ನು ಸಾಧಿಸುವುದಕ್ಕಾಗಿ ಪ್ರವೃತ್ತಿಧರ್ಮವನ್ನು ಹಿಡಿದಿರುವೆ. ನನ್ನ ಪತಿಯಾದರೋ ತತ್ವಜ್ಞನಾದುದರಿಂದ, ಪರಮಾತ್ಮೋಪಾಸನವೊಂದರಲ್ಲಿಯೇ ಮನಸ್ಸಿಟ್ಟು, ನಿವೃತ್ತಿಧರ್ಮವನ್ನು ಹಿಡಿದಿರುವನು. ಹೀಗೆ ನಿಮ್ಮನಿಮ್ಮ ಬುದ್ಧಿಗೆ ತೋರಿದಂತೆ ವೈದಿಕಕೃತ್ಯಗಳಲ್ಲಿ ನೀವಿಬ್ಬರೂ ಪ್ರವರ್ತಿಸಿರುವಾಗ, ನೀನು ಅವನನ್ನು ಕ್ರಿಯಾಶೂನ್ಯನೆಂದು ನಿಂದಿಸಿದುದು ಮಹಾಪಾತಕವಲ್ಲವೆ? ಆದರೆ "ಪ್ರವೃತ್ತಿನಿವೃತ್ತಿ ಧರ್ಮಗಳೆರಡೂ ವೇದಸಮ್ಮತಗಳಾಗಿರುವಾಗ, ರುದ್ರನು ಪ್ರವೃತ್ತಿಮಾರ್ಗವನ್ನೇಕೆ ಬಿಟ್ಟುಬಿಡಬೇಕು?" ಎಂದು ಕೇಳುವೆಯಾ ? ವೇದದಲ್ಲಿ ಇವೆರಡಕ್ಕೂ *ಪರಸ್ಪರವಿರುದ್ಧವಾದ ಬೇರೆಬೇರೆ ಮಾರ್ಗಗಳೇ ಏರ್ಪಟ್ಟಿರುವುದರಿಂದ, ಇವೆರಡನ್ನೂ ಒಬ್ಬನೇ ನಡೆಸುವುದು ಸಾಧ್ಯವಲ್ಲ. ನಿವೃತ್ತಿಕರ್ಮವೊಂದೇ ಜ್ಞಾನಮಾರ್ಗಕ್ಕೆ ಅನುಕೂಲವಾಗಿ ಬ್ರಹ್ಮಾನಂದಕ್ಕೂ ಸಾಧನವಾಗುವುದು. ನನ್ನ ಪತಿಯಾದ ಶಿವನು ಆ ನಿವೃತ್ತಿಧರ್ಮವನ್ನೇ ಹಿಡಿದಿರುವನು. "ಆದರೆ ಯಾಗಾದಿಕರ್ಮಗಳಿಂದ ನಮಗೆ ಲಭಿಸತಕ್ಕ ಸೌಖ್ಯಗಳೆಲ್ಲವೂ ನಿಮ್ಮಂತವರಿಗೆ ಲಭಿಸುವುದು ಹೇಗೆ?" ಎಂದು ಕೇಳುವೆಯಾ? ಎಂದಿಗೂ ಹಾಗೆಣಿಸಬೇಡ! ನಿವೃತ್ತಿಧರ್ಮದಲ್ಲಿ ಸಿದ್ಧಿಯನ್ನು ಪಡೆದ ನಮ್ಮಂತವರಿಗೆ, ಅಣಿಮಾದ್ಯಷ್ಟಸಿದ್ಧಿಗಳೂ ಸಂಕಲ್ಪಮಾತ್ರದಿಂದಲೇ ಲಭಿಸುವುವು. ಅವು ನಿಮ್ಮಂತವರಿಗೆ ಅಷ್ಟುಸುಲಭವಾಗಿ ಲಭಿಸಲಾರವು. ನೀವು ಪ್ರವೃತ್ತಿಧ

---

* ಪ್ರವೃತ್ತಿಧರ್ಮವೆಂದರೆ ಫಲಾಪೇಕ್ಷೆಯಿಂದ ಮಾಡುವ ಕರ್ಮವು. ನಿವೃತ್ತಿಧರ್ಮವೆಂದರೆ ಯಾವ ಫಲವನ್ನೂ ಅಪೇಕ್ಷಿಸದೆ ನಡೆಸತಕ್ಕ ಕರ್ಮವು. ಆದುದರಿಂದ ಇವೆರಡೂ ಪರಸ್ಪರವಿರುದ್ಧಗಳೆಂದು ಭಾವವು.

ರ್ಮವನ್ನು ಹಿಡಿದು ಯಾಗಾದಿಗಳನ್ನು ನಡೆಸಿ ಶ್ರಮಪಟ್ಟು ಸಂಪಾದಿಸತಕ್ಕ ಸಿದ್ಧಿಗಳೆಲ್ಲವೂ ಕೇವಲಕುತ್ಸಿತಗಳು! ಯಾಗಾನ್ನಗಳನ್ನು ಭುಜಿಸತಕ್ಕವರು ಮಾತ್ರವೇ ಅದನ್ನು ಕೊಂಡಾಡುವರೇಹೊರತು, ತತ್ವಜ್ಞರು ಅದನ್ನಾ ದರಿಸಲಾರರು. ನಿವೃತ್ತಿಧರ್ಮದಲ್ಲಿರತಕ್ಕವರು. ಇದಕ್ಕಿಂತಲೂ ಎಷ್ಟೋ ಉತ್ತಮವಾದ ಸಿದ್ಧಿಯನ್ನು ಪಡೆಯುವರು. ಆದುದರಿಂದ ನಿಮ್ಮಂತವರಿಗೆ ಲಭಿಸತಕ್ಕ ಸುಖಗಳನ್ನು ಅವರು ಕಡೆಗಣ್ಣಿನಿಂದಲೂ ಆದರಿಸಲಾರರು. ಆ ದುದರಿಂದ ನಿಮ್ಮಂತೆ ಕರ್ಮಪ್ರವರ್ತನೆಯಿಂದ ಅವರಿಗಾಗುವ ಫಲ ವೊಂದೂ ಇಲ್ಲ! ಓ ಬ್ರಾಹ್ಮಣಾ! ನೀನು ಈ ಅಲ್ಪಸಿದ್ಧಿಯನ್ನು ಕೊ ಡತಕ್ಕ ಕರ್ಮಗಳಲ್ಲಿ ಪ್ರವರ್ತಿಸಿದಮಾತ್ರಕ್ಕೆ, ನಾನೇ ಪರಮವೈದಿಕ ನೆಂದು ಗರ್ವಿಸಿ, ಅಷ್ಟೈಶ್ವರ್ಯಗಳನ್ನೂ ತನ್ನ ಸಂಕಲ್ಪದಿಂದಲೇ ಸಾ ಧಿಸಬಲ್ಲ ಆ ಪರಮೇಶ್ವರನನ್ನು ಭಸ್ಮಧಾರಿಯೆಂದು ತಿರಸ್ಕರಿಸಬಾರದು. ಇನ್ನು ಹೆಚ್ಚುಮಾತಿನಿಂದೇನು?ಅಂತಹ ಮಹಾತ್ಮನಾದ ಶಿವನನ್ನು ನಿಂದಿಸಿ ದ ನಿನ್ನ ಹೊಟ್ಟೆಯಲ್ಲಿ ಹುಟ್ಟಿದುದಕ್ಕಾಗಿ ಈಗ ನಾನು ಸಂಕಟಪಡುತ್ತಿರು ವೆನು.ನಿನ್ನ ಮಗಳೆಂದು ಹೇಳಿಕೊಳ್ಳುವುದಕ್ಕೆ ನನಗೆ ನಾಚಿಕೆಯಾಗಿರುವು ದು! ಈ ನನ್ನ ಜನ್ಮವನ್ನು ಸುಟ್ಟಹೊರತು ಅದಕ್ಕೆ ಪವಿತ್ರತೆಯಿಲ್ಲ!ಅಷ್ಟೇ ಕೆ?ರುದ್ರನು ಆಗಾಗ ನನ್ನೊಡನೆ ಪರಿಹಾಸ್ಯಗಳನ್ನು ಮಾಡುವಾಗ‚‚ದಾಕ್ಷಾ ಯಣಿ"ಎಂದು ನಿನ್ನ ಸಂಬಂಧವನ್ನು ತೋರಿಸುವಂತೆ ನನ್ನ ಹೆಸರನ್ನು ಹಿಡಿ ದು ಕರೆಯುವುದುಂಟು. ಈ ಕೆಟ್ಟಸಂಬಂಧವನ್ನು ಸೂಚಿಸತಕ್ಕ ಆ ಹೆಸರ ನ್ನು ಕೇಳಿದೊಡನೆ, ನನ್ನ ಮನಸ್ಸಿಗೆ ಸಹಿಸಬಾರದ ಏನೋ ಒಂದು ಅವ ಮಾನವುಂಟಾದಂತಾಗಿ, ನಾನು ಮುಖದಲ್ಲಿ ಕಳೆಗುಂದಿ ದುಃಖದಿಂದ ತಲೆ ಯನ್ನು ತಗ್ಗಿಸುತ್ತಿದ್ದೆನು. ಇನ್ನುಮುಂದೆ ಇಂತಹ ಅವಮಾನಗಳನ್ನು ಸ ಹಿಸುವುದಕ್ಕಿಂತಲೂ ಸಾಯುವುದೇ ಮೇಲಲ್ಲವೆ? ಆದುದರಿಂದ ಲೋಕದ ಲ್ಲಿ ನಿನ್ನ ಮಗಳಾಗಿ ಬದುಕಿರುವುದಕ್ಕಿಂತಲೂ, ಶವಪ್ರಾಯವಾದ ಈ ಶರೀ ರವನ್ನು ಬಿಟ್ಟುಬಿಡುವುದೇ ಯುಕ್ತವು" ಎಂದಳು. ಆ ಮಹಾಸಭೆಯಲ್ಲಿ ಸತೀದೇವಿಯು ಈ ಮಾತುಗಳಿಂದ ದಕ್ಷನನ್ನು ನಿಂದಿಸಿ, ಬೇರೆ ಮಾತಾಡ ದೆ, ಒಡನೆಯೇ ಅಲ್ಲಿಂದ ಉತ್ತರದಿಕ್ಕಿನ ಕಡೆಗೆ ಹೊರಟಳು. ಅಲ್ಲಿ ಒಂದಾ

ನೊಂದು ಪವಿತ್ರವಾದ ಸ್ಥಳದಲ್ಲಿ ದರ್ಭಾಸ್ತರಣವನ್ನು ಕಲ್ಪಿಸಿ, ಉಟ್ಟ ಪಟ್ಟೆಮಡಿಯೊಡನೆ ಶುದ್ಧಾಚಮನವನ್ನು ಮಾಡಿಬಂದು, ಕಣ್ಣುಗಳನ್ನು ಮುಚ್ಚಿ ಮೌನದಿಂದ ಕುಳಿತಳು. ಮೊದಲು ಈ ಯೋಗಾಭ್ಯಾಸದಲ್ಲಿ ಎಷ್ಟುಹೊತ್ತು ಕುಳಿತಿದ್ದರೂ ಶ್ರಮವಿಲ್ಲದಂತೆ ಆಸನಸಿದ್ಧಿಯನ್ನು ಪಡೆದು ನಿರ್ದುಷ್ಟಳಾಗಿ, ಪ್ರಾಣವಾಯುವನ್ನೂ, ಅಪಾನವಾಯುವನ್ನೂ ಕ್ರಮ ವಾಗಿ ಮೇಲೆ ಕೆಳಗೆ ಹೋಗದಂತೆ ತಡೆದು,ನಾಭಿಸ್ಥಾನದಲ್ಲಿ, ಸಮಾನವಾ ಯುವಿನೊಡನೆ ಒಂದುಗೂಡಿಸಿದಳು. ಆಮೇಲೆ ಕಂಠದೇಶದಲ್ಲಿರುವ ಉ ದಾನವಾಯುವನ್ನು ನಾಭಿಚಕ್ರದಿಂದ ಮೇಲಕ್ಕೆಬ್ಬಿಸಿ,ಬುದ್ಧಿಯೊಡನೆ ಮೆ ಲ್ಲಮೆಲ್ಲಗೆ ಹೃದಯಕ್ಕೆ ತಂದು ಸೇರಿಸಿದಳು. ಆ ಹೃದಯದಿಂದ ಮೇಲಕ್ಕೆ ತಂದು ಹುಬ್ಬುಗಳ ನಡುವೆ ಸೇರಿಸಿದಳು. ಹೀಗೆ ಸತೀದೇವಿಯು,ಮಹಾತ್ಮ ರಿಗೂ ಮಹಾತ್ಮನೆನಿಸಿಕೊಂಡ ರುದ್ರನು ಆಗಾಗ ಯಾವ ದೇಹವನ್ನು ತನ್ನ ತೊಡೆಯಮೇಲೆ ಪ್ರೀತಿಯಿಂದೇರಿಸಿ ಗೌರವಿಸುತಿದ್ದನೋ, ಆ ತನ್ನ ದೇಹವನ್ನು ತಂದೆಯಮೇಲಿನ ಕೋಪಕ್ಕಾಗಿ ಯೋಗಾಗ್ನಿಯಿಂದ ಭಸ್ಮ ಮಾಡಿಬಿಡಬೇಕೆಂದು ನಿಶ್ಚಯಿಸಿ, ದೇಹದಲ್ಲಿ ಅಗ್ನಿವಾಯುಗಳನ್ನು ಹುಟ್ಟಿ ಸತಕ್ಕ ಅನಿಲಾಗ್ನಿಧಾರಣೆಯೆಂಬ ಕ್ರೂರಸಮಾಧಿಯನ್ನು ಹಿಡಿದುನಿಂತಳು ಹೀಗೆ ಸತೀದೇವಿಯು ಸಮಾಧಿಯನ್ನು ಹಿಡಿದು, ಮನಸ್ಸಿನಲ್ಲಿ ಬೇರೆ ಯಾವ ಚಿಂತೆಯೂ ಇಲ್ಲದೆ, ತನ್ನ ಪತಿಯಾದ ಶಿವನ ಪಾದಾರವಿಂದಗಳನ್ನೇ ಧ್ಯಾನಿಸುತ್ತಿರುವಾಗ, ಅವಳ ದೇಹದಿಂದ ತಪೋಜ್ವಾಲೆಯು ಹೊರಟು ಪವಿತ್ರವಾದ ಆಕೆಯ ದೇಹವನ್ನು ಭಸ್ಮಮಾಡಿತು. ಈ ಆಶ್ಚರ್ಯವನ್ನು ನೋಡಿ ಆಕಾಶದಲ್ಲಿ ದೇವಗಂಧರ್ವಾದಿಗಳೂ, ಭೂಮಿಯಲ್ಲಿರುವ ಭೂತ ಗಳೂ ಹಾಹಾಕಾರದಿಂದ ಕೂಗಿಡುತ್ತಿದ್ದುವು. ಈ ಹಾಹಾಕಾರಧ್ವನಿಯು ಭೂಮ್ಯಾಕಾಶಗಳೆಲ್ಲವನ್ನೂ ತುಂಬಿತು. ಲೋಕದ ಜನವೆಲ್ಲವೂ ಅಲ್ಲಲ್ಲಿ ಗುಂಪುಕೂಡಿ “ಅಯ್ಯೋ! ಆ ದಕ್ಷನ ದೌರ್ಜನ್ಯವನ್ನೇನೆಂದು ಹೇಳಲಿ! ತಾನು ಪ್ರಜಾಧಿಪತ್ಯದಲ್ಲಿ ಅಭಿಷಿಕ್ತನಾಗಿರುವಾಗ, ಚರಾಚರಾತ್ಮಕವಾದ ಸಮಸ್ತಪ್ರಪಂಚವನ್ನೂ ಪ್ರೇಮಪೂರ್ವಕವಾಗಿ ಆದರಿಸಬೇಕಾದುದು ಅವನ ಕೃತ್ಯವು. ಹೀಗಿರುವಾಗ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳ

ಸಾವಿಗೆ ತಾನೇ ಕಾರಣವಾದನಲ್ಲಾ ! ಆಕೆಯೋ ಮಹಾತ್ಮಳು ! ಅವಳ ಸದಾಚಾರವೂ, ಅವಳ ಸದ್ಗುಣಗಳೂ, ಆಕೆಯ ಉದಾರಸ್ವಭಾವವೂ ಲೋಕವಿಖ್ಯಾತವಾಗಿರುವುವು. ಅಂತಹ ಪರಮಸಾಧ್ವಿಯಾದ ತನ್ನ ಮಗಳನ್ನೂ ತಿರಸ್ಕರಿಸಿ, ಭಗವದಂಶಭೂತನಾದ ರುದ್ರನೊಡನೆಯೂ ವಿರೋಧಿಸಿಕೊಂಡಮೇಲೆ, ಬ್ರಾಹ್ಮಣಾಧಮನಾದ ಆ ದಕ್ಷನಿಗೆ, ಲೋಕದಲ್ಲಿ ದುಷ್ಕೀರ್ತಿಯೂ,ಭಯಂಕರವಾದ ನರಕವೂ ಎಂದಿಗೆತಾನೇ ತಪ್ಪುವುದು" ಎಂದು ಒಬ್ಬೊಬ್ಬರೂ ದಕ್ಷನನ್ನು ಬಾಯಿಗೆ ಬಂದಹಾಗೆ ನಿಂದಿಸುತಿದ್ದರು. ಇದೇಸಮಯದಲ್ಲಿ ಅತ್ತಲಾಗಿ ಸತೀದೇವಿಗೆ ಸಹಾಯಕರಾಗಿ ಅವಳೊಡನೆ ದಕ್ಷಸಭೆಗೆ ಬಂದಿದ್ದ ರುದ್ರಗಣಗಳೆಲ್ಲವೂ, ಆಕೆಯ ಮರಣವನ್ನು ಕೇಳಿ ಬಹಳದುಃಖಿತರಾಗಿ, ಆ ಸಭೆಯಲ್ಲಿರುವವರೆಲ್ಲರನ್ನೂ ಒಟ್ಟಿಕ್ಕೆ ಕೊಂದುಬಿಡಬೇಕೆಂಬ ನಿಶ್ಚಯದಿಂದ,ತಮ್ಮತಮ್ಮ ಆಯುಧಗಳನ್ನು ಹಿಡಿದುಮೇಲೇಬಿದ್ದರು. ಈ ಪ್ರಯತ್ನವನ್ನು ನೋಡಿ ಅಲ್ಲಿದ್ದ ಭೃಗುಮಹರ್ಷಿಯು, ಅತ್ಯಂತಕೋಪೋದ್ದೀಪಿತನಾಗಿ, ಯಜ್ಞನಾಶಕ್ಕಾಗಿ ಮೇಲೆ ಬಿದ್ದು ಬರುತ್ತಿರುವ ಆ ಭೂತಗಣಗಳನ್ನು ಕೊಲ್ಲುವುದಕ್ಕಾಗಿ, ದಕ್ಷಿಣಾಗ್ನಿಯಲ್ಲಿ ಅಭಿಚಾರಮಂತ್ರದಿಂದ ಹೋಮವನ್ನಾರಂಭಿಸಿದನು. ಭೃಗುಮಹರ್ಷಿಯು ಈ ಹೋಮವನ್ನು ಮಾಡಿದೊಡನೆ, ಆ ಅಗ್ನಿಕುಂಡದಿಂದ ಕೈಯಲ್ಲಿ ಕೊಳ್ಳಿಗಳನ್ನು,ಹಿಡಿದು ಕೆಲವು ದೇವತೆಗಳು ಸಾವಿರಲೆಕ್ಕದಿಂದ ಮೇಲೆದ್ದುಬಂದರು. ಇವರಿಗೆ ಋಭುಗಳೆಂದು ಹೆಸರು. ಇವರೆಲ್ಲರೂ ತಮ್ಮ ತಪೋಮಹಿಮೆಯಿಂದ ಸೋಮಯಾಗಗಳಲ್ಲಿ ಕೊಡುವ ಹವಿರ್ಭಾಗವನ್ನು ಭುಜಿಸತಕ್ಕವರು. ದಕ್ಷನನ್ನು ಕೊಲ್ಲುವುದಕ್ಕಾಗಿ ಬಂದ ಆ ಪ್ರಮಥಗಣಗಳೂ, ಯಕ್ಷರೂ, ಬ್ರಹ್ಮತೇಜಸ್ಸಿನಿಂದ ಜ್ವಲಿಸುತಿದ್ದ ಈ ಋಭುದೇವತೆಗಳ ಕೈಕೊಳ್ಳಿಗಳಿಂದ ದಗ್ಧರಾಗಿ, ಅಲ್ಲಿ ನಿಲ್ಲಲಾರದೆ ನಾನಾದಿಕ್ಕಿಗೆ ಚದರಿಹೋದರು. ಇದು ನಾಲ್ಕನೆಯ ಅಧ್ಯಾಯವು.

---

{ ಸತೀದೇವಿಯು ದೇಹತ್ಯಾಗಮಾಡಿದುದನ್ನು ಕೇಳಿ ರುದ್ರನು ವೀರಭದ್ರನನ್ನು ಸೃಷ್ಟಿಸಿ ದಕ್ಷ ಯಾಗವನ್ನು ಧ್ವಂಸಮಾಡಿಸಿದುದು }

**ಇ**ಷ್ಟರಲ್ಲಿ ಇತ್ತಲಾಗಿ ರುದ್ರನಿಗೆ ನಾರದನ ಮುಖದಿಂದ ದಕ್ಷಯಾಗದಲ್ಲಿ ನಡೆದ ಈ ವೃತ್ತಾಂತಗಳೆಲ್ಲವೂ ಕ್ರಮವಾಗಿ ತಿಳಿದುಬಂದುವು. ಸತೀದೇವಿಯು ಯಜ್ಞಸಭೆಯಲ್ಲಿ ತಂದೆಯಿಂದ ತಿರಸ್ಕೃತಳಾದುದೂ,ಆ ಅವಮಾನವನ್ನು ಸಹಿಸಲಾರದೆ ಅವಳು ತನ್ನ ದೇಹವನ್ನು ಯೋಗಾಗ್ನಿಯಲ್ಲಿ ಭಸ್ಮಮಾಡಿದುದೂ,ತನ್ನ ಅನುಚರರಾದ ಪ್ರಮಥಗಣಗಳು ಯಾಗಸಭೆಯಲ್ಲಿ ಋಭುದೇವತೆಗಳಿಂದ ಪರಾಜಯಹೊಂದಿ ಓಡಿಹೋದುದೂ, ಇವೇಮೊದಲಾದ ವೃತ್ತಾಂತಗಳೆಲ್ಲವನ್ನೂ ಕೇಳಿದಾಗ, ಅವನಿಗೆ ಮಿತಿಮೀರಿದ ಕೋಪಾವೇಶವು ಹುಟ್ಟಿತು. ಮೇಲೆಮೇಲೆ ಪ್ರಜ್ವಲಿಸುತ್ತ ಬಂದ ಮಹತ್ತಾದ ಈ ಕೋಪಾಗ್ನಿಯಿಂದ, ರುದ್ರನು ತುಟಿಗಳನ್ನು ಕಚ್ಚುತ್ತ, ಕ್ರೂರಧ್ವನಿಯಿಂದ ಗರ್ಜಿಸಿ, ಅಗ್ನಿಜ್ವಾಲೆಯಂತೆಯೂ, ಮಿಂಚಿನ ಬಳ್ಳಿಯಂತೆಯೂ ಕಾಂತಿಯಿಂದ ಜ್ವಲಿಸುತಿದ್ದ ತನ್ನ ಜಟೆಗಳಲ್ಲಿ, ಒಂದು ತಿರಿಯನ್ನು ಕಿತ್ತು, ಅದನ್ನು ನೆಲಕ್ಕೆ ಅಪ್ಪಳಿಸಿ ಬಡಿದನು. ಒಡನೆಯೇ ಆ ಜಟಾಗ್ರದಿಂದ ಮಹಾದ್ಭುತವಾದ ಒಂದಾನೊಂದು ರೌದ್ರಾಕೃತಿಯು ತಲೆದೋರಿತು.ವಿದುರಾ! ಇವನೇ ರುದ್ರಾಂಶದಿಂದ ಹುಟ್ಟಿದ ವೀರಭದ್ರನು ! ಅವನ ಭಯಂಕರಸ್ವರೂಪವನ್ನು ಕೇಳಬೇಕೆ?ಆಕಾಶವನ್ನೊತ್ತುವಂತೆ ಮಹೋನ್ನತವಾದ ಆಕೃತಿ! ಕಾಲಮೇಘದಂತೆ ಕಪ್ಪಾದ ಮೈ! ಸಹಸ್ರಭುಜಗಳು! ಒಂದೊಂದುಭುಜದಲ್ಲಿಯೂ ಜ್ವಲಿಸುತ್ತಿರುವ ಮಹಾಯುಧಗಳು!ಭಯಂಕರಗಳಾದ ಕೋರೆದಾಡೆಗಳು!ಸೂರ್ಯನಂತೆ ಥಗಥಗಿಸುವ ಮೂರು ಕಣ್ಣುಗಳು! ಕೆಂಡದಂತೆ ಕೆಂಪಾದ ತಲೆಕೂದಲು! ಕಂಠದಲ್ಲಿ ಕಪಾಲಮಾಲಿಕೆ ! ಇಂತಹ ಅದ್ಭುತಾಕೃತಿಯಿಂದ ಕಾಣಿಸಿಕೊಂಡ ಆ ಮಹಾಭೂತವು, ರುದ್ರನ ಮುಂದೆ ಬದ್ಧಾಂಜಲಿಯಾಗಿ ನಿಂತು “ಪ್ರಭೂ ! ಏನಪ್ಪಣೆ ! ನಾನು ಮಾಡಬೇಕಾದ ಕಾರ್ಯವೇನು!” ಎಂದು ವಿಜ್ಞಾಪಿಸಿತು ! ಆಗ ರುದ್ರನು ಅವನನ್ನು ಕುರಿತು “ಓ ವೀರಭದ್ರಾ!ನನ್ನ ನಿಜಾಂಶದಿಂದ ನಿನ್ನನ್ನು ಹುಟ್ಟಿಸಿ ಈ ಪ್ರಮಥಗಣಗಳಲ್ಲಿ ನಿನಗೆ ಸೇನಾಧಿಪತ್ಯವನ್ನು ಕೊಟ್ಟಿರುವೆನು.ಈಗಲೆ

ನೀನು ಹೋಗಿ ಆ ದಕ್ಷನನ್ನೂ, ಅವನ ಯಾಗವನ್ನೂ ಧ್ವಂಸಮಾಡಿ ಬರಬೇಕು! ಬ್ರಾಹ್ಮಣತೇಜಸ್ಸು ದುರ್ಜಯವೆಂದು ತಿಳಿಯಬೇಡ ನನ್ನ ಅಂಶದಿಂದಲೇ ನೀನು ಹುಟ್ಟಿರುವುದರಿಂದ, ನನಗೆ ಯಾವುದೂ ಇದಿರಲ್ಲ! ಹೋಗಿ ಬಾ!" ಎಂದನು. ಈ ಮಾತನ್ನು ಕೇಳಿದೊಡನೆ ವೀರಭದ್ರನು, ತಂದೆಗೆ ಪ್ರದಕ್ಷಿಣವನ್ನು ಮಾಡಿ, ಮೇಲೆಮೇಲೆ ಕೋಪದಿಂದುಕ್ಕುತ್ತ, ಎಂತಹ ಬಲಿಷ್ಠರನ್ನಾದರೂ ತಾನು ಅಡಗಿಸಬಹುದೆಂಬ ದೃಢವಾದ ನಂಬಿಕೆಯಿಂದ, ಭಯಂಕರವಾದ ಸಿಹ್ಮನಾದವನ್ನು ಮಾಡುತ್ತ, ವೇಗದಿಂದ ಮುಂದೆ ಹೊರಟನು. ರುದ್ರಾನುಚರರಾದ ಅನೇಕಪ್ರಮಥಗಣಗಳೂ ಕೂಡ ಭಯಂಕರಧ್ವನಿಯಿಂದ ಅವನನ್ನು ಹಿಂಬಾಲಿಸಿದುವು. ಹೀಗೆ ಪ್ರಯಾಣೋದ್ಯುಕ್ತನಾದ ವೀರಭದ್ರನು, ಮೃತ್ಯುವಿಗೂ ಮೃತ್ಯುವಂತಿದ್ದ ಒಂದು ಮಹಾಶೂಲವನ್ನು ಕೈಯಲ್ಲಿ ಹಿಡಿದು, ಕಾಲಿನಲ್ಲಿ ಕಟ್ಟಿದ ಕಿರುಗೆಜ್ಜೆಗಳ ಧ್ವನಿಯಿಂದಲೂ, ಸೇನಾಘೋಷಗಳಿಂದಲೂ ದಿಕ್ಕುಗಳನ್ನು ತುಂಬುತ್ತ, ನೆಲವನ್ನು ನಡುಗಿಸುವಂತೆ ಮಹಾವೇಗದಿಂದ ದಕ್ಷನ ಯಾಗಭೂಮಿಯನ್ನು ಕುರಿತು ಹೋಗುತಿದ್ದನು. ಇಷ್ಟರಲ್ಲಿಯೇ ಅತ್ತಲಾಗಿ ದಕ್ಷನ ಯಾಗಶಾಲೆಯಲ್ಲಿದ್ದ ಸಭಾಸದರಿಗೂ, ಋತ್ವಿಕ್ಕುಗಳಿಗೂ, ಬ್ರಾಹ್ಮಣರಿಗೂ, ಯಾಗಾಧ್ಯಕ್ಷನಾದ ದಕ್ಷನಿಗೂ, ಭಯಸೂಚಕಗಳಾದ ಈ ಚಿಹ್ನಗಳು ಕಂಡು ಬಂದುವು. ಸಮಸ್ತದಿಕ್ಕುಗಳನ್ನೂ ಕತ್ತಲೆಕವಿಸುವಂತೆ ಸೇನಾಧೂಳಿಯು ಮೇಲಕ್ಕೆದ್ದು ಆಕಾಶವನ್ನು ಮುಚ್ಚಿತು. ಆಗ ಆ ದಕ್ಷಸಭೆಯಲ್ಲಿದ್ದ ಬ್ರಾಹ್ಮಣರೂ, ಬ್ರಾಹ್ಮಣಪತ್ನಿಯರೂ, ಉತ್ತರದಿಕ್ಕಿನಲ್ಲಿ ಹೀಗೆ ಆಕಸ್ಮಿಕವಾಗಿ ಗಾಢಾಂಧಕಾರವು ಕವಿದುದನ್ನು ನೋಡಿ, ಒಬ್ಬರಿಗೊಬ್ಬರು "ಆಹಾ! ಇದೇನಿದು! ಇಷ್ಟೊಂದು ಕತ್ತಲೆಗೆ ಕಾರಣವೇನು? ಓಹೋ! ನೆಲದ ಧೂಳಿಯು ಮೆಲಕ್ಕೆದ್ದ ಹಾಗಿದೆ! ಹೀಗೆ ಆಕಸ್ಮಿಕವಾಗಿ ಇಷ್ಟೊಂದು ಧೂಳು ಕವಿಯಲು ಕಾರಣವೇನೋ ತಿಳಿಯಲಿಲ್ಲ! ಈಗ ಅಷ್ಟೇನೂ ಗಾಳಿಯೂ ಬೀಸುವಹಾಗೆ ಕಾಣಲಿಲ್ಲ ! ಒಂದುವೇಳೆ ಊರನ್ನು ಕೊಳ್ಳೆಹೊಡೆಯುವುದಕ್ಕಾಗಿ ಕಳ್ಳರೇನಾದರೂ ಗುಂಪುಕಟ್ಟಿ ಬರುತ್ತಿರಬಹುದೆ ? ಕ್ರೂರದಂಡನೆಯಿಂದ ದುಷ್ಟರನ್ನಡಗಿಸತಕ್ಕ ಪ್ರಾಚೀನಬರ್ಹಿಯು ಈಗ

ರಾಜ್ಯವನ್ನಾಳುತ್ತಿರುವುದರಿಂದ, ಚೋರಬಾಧೆಗೂ ಅವಕಾಶವಿಲ್ಲ. ಅಥವಾ! ಇದು ಗೋಧೂಳಿಯಾಗಿರಬಹುದೆ? ಎಂದರೆ, ಇದು ದನಗಳ ಮಂದೆಯನ್ನು ನಡೆಸತಕ್ಕ ಸಮಯವೂ ಅಲ್ಲ! ಇದಕ್ಕೆ ಕಾರಣವೇನಿರಬಹುದು ? ಒಂದುವೇಳೆ ಇದೇ ಪ್ರಳಯಕಾಲದ ಸೂಚನೆಯಾಗಿರಬಹುದೆ?” ಎಂದು ಭಯದಿಂದ ಗುಸುಗುಟ್ಟುತ್ತಿದ್ದರು. ದಕ್ಷಪತ್ನಿಯಾದ ಪ್ರಸೂತಿಯೂ,ಇನ್ನೂ ಬೇರೆ ಕೆಲವು ಸ್ತ್ರೀಯರೂ ಹೀಗೆಯೇ ಭಯದಿಂದ ತಮ್ಮೊಳಗೆ ತಾವು ‘,ಆಹಾ! ಇದೇನೋ ಮಹಾನರ್ಥವು ಸಂಭವಿಸುವಂತಿದೆ! ದಕ್ಷನು ಮಾಡಿದ ಪಾಪಕಾರ್ಯಕ್ಕೆ ಈಗಲೇ ಫಲವು ಕಾಣುವಹಾಗಿದೆ! ಆಹಾ! ದಕ್ಷನು ಎಂತಹ ಕ್ರೂರಕಾರ್ಯವನ್ನು ನಡೆಸಿಬಿಟ್ಟನು ! ತನ್ನ ಇತರಕನ್ಯೆಯರೆಲ್ಲರೂ ನೋಡುತ್ತಿರುವಹಾಗೆಯೇ, ಅವರ ಕಣ್ಣಮುಂದೆ, ನಿರ್ದೋಷೆಯಾದ ತನ್ನ ಕಿರಿಯಮಗಳನ್ನು ಅವಮಾನಪಡಿಸಿದನು! ಇದಲ್ಲದೆ! ತನ್ನ ಅಳಿಯನಾದ ರುದ್ರನನ್ನು, ಮಹಾಸಭೆಯಲ್ಲಿ ನಿಂದಿಸಿ, ಅವನನ್ನೂ ಕೋಪಗೊಳಿಸಿದನು. ಆ ರುದ್ರನೇನು ಸಾಮಾನ್ಯನೆ? ಅವನ ಮಹಾಮಹಿಮೆಯನ್ನು ಇಷ್ಟೆಂದು ನಿರ್ಣಯಿಸುವುದಕ್ಕಾದರೂ ಯಾರಿಂದ ಸಾಧ್ಯವು? ಅವನ ಕೋಪಕ್ಕೆ ಯಾರುತಾನೇ ಇದಿರುನಿಲ್ಲುವರು? ಯಾವನು ಮಹಾಪ್ರಳಯದಲ್ಲಿ ತನ್ನ ಜಡೆಗಳನ್ನು ಕೆದರಿ, ತ್ರಿಶೂಲಾಗ್ರದಿಂದ ತಿವಿದು ಪೋಣಿಸಿದ ಅಷ್ಟದಿಗ್ಗಜಗಳಿಂದಲೂ, ಇತರಾಯುಧಗಳಿಂದಲೂ ಕೂಡಿದ ತನ್ನ ತೋಳುಗಳನ್ನೇ ತನಗೆ ಜಯಧ್ವಜವನ್ನಾಗಿ ಮೇಲಕ್ಕೆತ್ತಿ ಹಿಡಿದು, ಮೇಘಗರ್ಜನೆಯಂತೆ ಭಯಂಕರವಾದ ತನ್ನ ಸಿಂಹನಾದದಿಂದ ದಿಕ್ಕುಗಳೆಲ್ಲವನ್ನೂ ಭೇದಿಸುವಂತೆ ಸಂತೋಷದಿಂದ ನರ್ತನಮಾಡುತ್ತಿರುವನೋ,ಅಂತಹ ರುದ್ರನನ್ನೇ ಕೋಪಗೊಳಿಸಿದಮೇಲೆ, ಇನ್ನು ಈ ದಕ್ಷನಿಗೆ ಕ್ಷೇಮವೆಲ್ಲಿ?ಆ ರುದ್ರನ ತೇಜಸ್ಸಾದರೋ ಯಾರಿಂದಲೂ ಸಹಿಸಲಸಾಧ್ಯವಾದುದು. ಅವನು ಒಂದಾವರ್ತಿ ಕೋಪದಿಂದ ಹುಬ್ಬನ್ನು ಗಂಟುಹಾಕಿದರೆ ಲೋಕವೆಲ್ಲವೂ ನಡುಗುವುದು. ಭಯಂಕರವಾದ ತನ್ನ ಕೋರೆದಾಡೆಗಳಿಂದಲೇ ನಕ್ಷತ್ರಗಳೆಲ್ಲವನ್ನೂ ಉದಿರಿಸಬಲ್ಲನು! ಇಂತಹ ಕಾಲರುದ್ರನನ್ನು ಕೋಪಗೊಳಿಸಿದ ಮೇಲೆ, ಸೃಷ್ಟಿಕರ್ತನಾದ ಬ್ರಹ್ಮನಿಗಾದರೂ ಕ್ಷೇಮವೆಲ್ಲಿಯದು ? ಇನ್ನು

ದಕ್ಷನ ಗತಿಯನ್ನು ಕೇಳಬೇಕೆ?" ಎಂದು ಅನ್ಯೋನ್ಯವಾಗಿ ಮಾತಾಡಿ ಕೊಳ್ಳುತಿದ್ದರು. ಇಷ್ಟರಲ್ಲಿಯೇ ಧೀರಮನಸ್ಸುಳ್ಳ ಆ ದಕ್ಷನಿಗೂ ಭಯ ವನ್ನು ಹುಟ್ಟಿಸುವಂತೆ ಭೂಮಿಯಲ್ಲಿಯೂ, ಆಕಾಶದಲ್ಲಿಯೂ ಅನೇಕ ದುಶ್ಶಕುನಗಳು ಕಾಣಬಂದುವು. ಇಷ್ಟರಲ್ಲಿರುದ್ರಾನುಚರರಾದಭೂತಗಣ ಗಳೂಕೂಡ ಗುಂಪುಗುಂಪಾಗಿ ವಿವಿಧಾಸ್ತ್ರಗಳೊಡನೆ ದಕ್ಷನ ಯಜ್ಞಶಾ ಲೆಗೆ ಪ್ರವೇಶಿಸಿಬಿಟ್ಟರು. ಇವರಲ್ಲಿಯೋ ಕೆಲವರು ಮಹೋನ್ನತವಾದ ಆ ಕಾರವುಳ್ಳವರು! ಕೆಲವರು ಗುಜ್ಜಾರಿಗಳಂತೆ ವಾಮನಾಕಾರವುಳ್ಳವರು ! ಅ ಗ್ನಿಜ್ವಾಲೆಯಂತೆ ಪಿಂಗಳವಾದ ಮೈಬಣ್ಣವುಳ್ಳವರು ಕೆಲವರು ! ಹೊಟ್ಟೆ ಯಲ್ಲಿಯೂ, ಮುಖದಲ್ಲಿಯೂ ಮೊಸಳೆಯಂತೆ ಆಕಾರವುಳ್ಳವರು ಕೆಲವರು! ಹೀಗೆ ನಾನಾಬಗೆಯ ವಿಕೃತಾಕಾರವುಳ್ಳ ಭೂತಗಣಗಳೆಲ್ಲವೂ ಯಜ್ಞಶಾ ಲೆಗೆ ಪ್ರವೇಶಿಸಿ, ನಾನಾಕಡೆಯಿಂದಲೂ ಸುತ್ತಿಮುತ್ತಿ, ಮೊದಲು ಯಜ್ಞ ಸಾಧನಗಳೆಲ್ಲವನ್ನೂ ನಾಶಮಾಡುವುದಕ್ಕೆ ತೊಡಗಿದರು. ಕೆಲವರು ಪೂ ರ್ವದಿಕ್ಕಿನಲ್ಲಿ ನಾಟಿದ ಪ್ರಾಗ್ವಂಶವೆಂಬ ಅಡ್ಡತೊಲೆಯನ್ನು ಮುರಿದು ಹಾಕಿದರು ಮತ್ತೆ ಕೆಲವರು ಪತ್ನೀಶಾಲೆಯೆಂಬ ಸ್ಥಲವನ್ನು ಭಗ್ನಮಾ ಡಿದರು. ಬೇರೆ ಕೆಲವರು ಯಜ್ಞಶಾಲೆಯ ಪೂರ್ವಕ್ಕಿರುವ ಸದಸ್ಸೆಂಬ ಮಂಟಪವನ್ನು ಕಿತ್ತು ಹಾಕಿದರು. ಬೇರೆ ಕೆಲವರು ಈ ಮಂಟಪಕ್ಕೆ ಉ ತ್ತರದಲ್ಲಿರುವ ಆಗ್ನೀಧ್ರಶಾಲೆಯನ್ನೂ, ಕೆಲವರು ಯಜ್ಞದೀಕ್ಷಿತನಾದ ದ ಕ್ಷನ ವಾಸಸ್ಥಾನವನ್ನೂ, ಕೆಲವರು ಅಡಿಗೆಮನೆಯನ್ನೂ ನಾಶಮಾಡಿದರು. ಕೆಲವರು ಅಲ್ಲಲ್ಲಿ ಸಿಕ್ಕಿದ ಯಜ್ಞಪಾತ್ರಗಳನ್ನೊಡೆಯುತ್ತ ಬಂದರು ! ಕೆಲ ವರು ಹೋಮಾಗ್ನಿಗಳನ್ನು ನಂದಿಸಿದರು ! ಕೆಲವರು ಅಗ್ನಿಕುಂಡಗಳಲ್ಲಿ ಮೂತ್ರವಿಸರ್ಜನವನ್ನು ಮಾಡಿದರು ! ಕೆಲವರು ಯಜ್ಞವೇದಿಕೆಗಳನ್ನೂ ಪರಿಸ್ತರಣಗಳನ್ನೂ ಒಡೆಯುತ್ತಬಂದರು. ಕೆಲವರು ಅಲ್ಲಿದ್ದ ಋಷಿಗಳನ್ನು ಹೊಡೆದು ಬಡಿದು ಹಿಂಸಿಸುತಿದ್ದರು. ಕೆಲವರು ಮುನಿಪತ್ನಿಯರನ್ನು ಹೆದರಿಸುತಿದ್ದರು. ಕೆಲವರು ಅಲ್ಲಲ್ಲಿ ಚದರಿ ಓಡಿ ಹೋಗುತಿದ್ದ ದೇವತೆ ಗಳನ್ನು ಬೆನ್ನಟ್ಟಿ ಹಿಡಿದರು. ಮಣಿಮಂತನು ಭೃಗುಮುನಿಯನ್ನೂ, ವೀರಭದ್ರನು ದಕ್ಷಪ್ರಜಾಪತಿಯನ್ನೂ, ಚಂಡೀಶ್ವರನು ಪೂಷಣನೆಂಬ

ದೇವತೆಯನ್ನೂ, ನಂದಿಯು ಭೃಗುವನ್ನೂ ಬೆನ್ನಟ್ಟಿ ಹಿಡಿದನು. ಈ ಭಯಂಕರವಾದ ಕೊಲೆಯನ್ನು ನೋಡಿ ಅಲ್ಲಲ್ಲಿ ಕೆಲವು ಸಭಿಕರೂ, ಋತ್ವಿಕ್ಕುಗಳೂ, ದೇವತೆಗಳೂ ದಿಕ್ಕುದಿಕ್ಕಿಗೆ ಚದರಿ ಕೈಗೆ ಸಿಕ್ಕದೆ ತಪ್ಪಿಸಿಕೊಂಡು ಓಡಿದರು. ಆ ಓಡಿಹೋಗುವವರನ್ನು ನೋಡಿ ಪ್ರಮಥ ಸೈನಿಕರು ಕಲ್ಲುಗಳನ್ನು ಬೀರುತಿದ್ದರು. ಹಿಂದೆ ಬ್ರಹ್ಮಸಭೆಯಲ್ಲಿ ದಕ್ಷನು ಶಿವನನ್ನು ನಿಂದಿಸಿದಾಗ, ಭೃಗುಮುನಿಯು ಸಂತೋಷದಿಂದ ಮೀಸೆಯನ್ನು ಮುರಿಯುತಿದ್ದುದರಿಂದ, ಅದಕ್ಕೆ ಪ್ರತೀಕಾರವಾಗಿ ವೀರಭದ್ರನು, ಹೋಮಸಾಧನವನ್ನು ಹಿಡಿದು ಅಗ್ನಿಯಲ್ಲಿ ಹೋಮಮಾಡುತಿದ್ದ ಸ್ಥಿತಿಯಲ್ಲಿಯೇ ಆ ಭೃಗುವನ್ನು ಎಳೆತರಿಸಿ, ಅವನ ಮೀಸೆಗಳನ್ನು ಕೀಳಿಸಿದನು. ಇದರಂತೆಯೇ ಹಿಂದೆ ದಕ್ಷನು ಶಿವನಿಂದೆಯನ್ನು ಮಾಡಿದಾಗ ಕಣ್ಣುಸನ್ನೆಯಿಂದ ಮೇಲೆಮೇಲೆ ಪ್ರೋತ್ಸಾಹಿಸುತಿದ್ದ ಭಗನನ್ನು ಸೆಳೆತರಿಸಿ,ಅವನನ್ನು ಕೆಳಕ್ಕೆ ಕೆಡಹಿ, ಅವನ ಕಣ್ಣುಗಳನ್ನು ಕೀಳಿಸಿದನು. ಹಿಂದೆ ಶಿವನಿಂದೆಯನ್ನು ಕೇಳಿ ಅಟ್ಟಹಾಸದಿಂದ ನಗುತಿದ್ದ ಪೂಷಣನೆಂಬುವನನ್ನು ಕರೆತರಿಸಿ, ಬಲರಾಮನು ಕಳಿಂಗರಾಜನ ಹಲ್ಲನ್ನು ಕೀಳಿಸಿದಂತೆ ಅವನ ಹಲ್ಲುಗಳನ್ನು ದಿರಿಸಿದನು.ಆಮೇಲೆ ವೀರಭದ್ರನು ದಕ್ಷನನ್ನು ತಾನೇಹಿಡಿದು ಕೆಳಕ್ಕೆ ಕೆಡಹಿ ಅವನ ಎದೆಯಮೇಲೆ ಕಾಲಿಟ್ಟು,ತೀಕ್ಷ್ಣವಾದ ಅಲಗುಳ್ಳಕತ್ತಿಯಿಂದ ಅವನ ತಲೆಯನ್ನು ಕತ್ತರಿಸುವುದಕ್ಕೆ ಹೋದನು.ಎಷ್ಟೆಷ್ಟುಕುಯ್ದರೂ,ಶಸ್ತ್ರಾಸ್ತ್ರಗಳಿಂದ ಖಂಡಿಸುತಿದ್ದರೂ, ಆ ದಕ್ಷನ ಶಿರಸ್ಸನ್ನು ಮುಂಡದಿಂದ ಬೇರೆ ಮಾಡಿ ಕೀಳುವುದಕ್ಕಾಗದೆ,ಚರ್ಮವು ಒಂದಾಗಿಯೇ ಅಂಟಿರುವುದನ್ನು ನೋಡಿ, ಮನಸ್ಸಿನಲ್ಲಿ ಆಶ್ಚರ್ಯಪಡುತ್ತ, ಇನ್ನೂ ಎಷ್ಟೆಷ್ಟೋ ಉಪಾಯಗಳನ್ನು ಮಾಡಿ ಯಾವುದೂ ಸಾಗದೆಹೋಗಲು, ಸುಮ್ಮನೆ ಸ್ತಬ್ಧನಾಗಿ ಯೋಚಿಸುತಿದ್ದನು.ಕೊನೆಗೆ ಯಜ್ಞಪಶುವನ್ನು ಕೊಲ್ಲುವಂತೆ ಕೊರಲನ್ನು ತಿರುಚಿ ಕೊಲ್ಲಬೇಕೆಂದು ನಿಶ್ಚಯಿಸಿ, ಮೊದಲು ಕಂಠವನ್ನು ಹಿಸುಕಿ ಅವನ ಪ್ರಾಣಗಳನ್ನು ನೀಗಿಸಿ, ಆಮೇಲೆ ಅವನ ತಲೆಯನ್ನು ಕಿತ್ತುತೆಗೆದನು. ಈ ವೀರಭದ್ರನ ಆಶ್ಚರ್ಯಕಾರ್ಯವನ್ನು ನೋಡಿ ಭೂತ ಪ್ರೇತ ಪಿಶಾಚಗಳೆಲ್ಲವೂ "ಭಲೆಭಲೆ" ಎಂದು ಕೊಂಡಾಡುತಿದ್ದುವು. ಇತ್ತಲಾಗಿ ಪರಾಜಯ

ವನ್ನು ಹೊಂದಿದ ಬ್ರಾಹ್ಮಣರೆಲ್ಲರೂ ಅವನನ್ನು ಶಪಿಸುತ್ತಿದ್ದರು. ಹೀಗೆ ವೀರಭದ್ರನು ದಕ್ಷಯಾಗವನ್ನು ಧ್ವಂಸಮಾಡಿದಮೇಲೆ, ಆ ದಕ್ಷನ ತಲೆಯನ್ನು ದಕ್ಷಿಣಾಗ್ನಿಯಲ್ಲಿ ಹೋಮಮಾಡಿ, ತನ್ನ ಉದ್ದೇಶವು ನೆರವೇರಿದುದಕ್ಕಾಗಿ ಸಂತೋಷಗೊಂಡು, ತನ್ನ ಪರಿವಾರಗಳೊಡನೆ ಹಿಂತಿರುಗಿ ಕೈಲಾಸಪರ್ವತವನ್ನು ಸೇರಿದನು. ಇಲ್ಲಿಗೆ ಐದನೆಯ ಅಧ್ಯಾಯವು.

---

**ಇಂದ್ರಾದಿದೇವತೆಗಳು ತಮಗುಂಟಾದ ಪರಾಭವಕ್ಕಾಗಿ ಬ್ರಹ್ಮನಲ್ಲಿಗೆ ಹೋಗಿ ಪ್ರಾರ್ಥಿಸಿದುದು. ಬ್ರಹ್ಮನು ಅವರೆಲ್ಲರನ್ನೂ ರುದ್ರನ ಬಳಿಗೆ ಕರೆತಂದುದು.**

ಈ ಯಜ್ಞಶಾಲೆಯಲ್ಲಿ ರುದ್ರನ ಸೈನಿಕರಕೈಗೆ ಸಿಕ್ಕದೆ ತಪ್ಪಿಸಿಕೊಂಡು ಹೋದ ದೇವತೆಗಳೆಲ್ಲರೂ ದುಃಖಿತರಾಗಿ, ಮುಂದೆ ಮಾಡಬೇಕಾದುದೇನೆಂದು ಯೋಚಿಸಿ, ಚತುರ್ಮುಖಬ್ರಹ್ಮನ ಬಳಿಗೆ ಹೊರಟರು. ತೀಕ್ಷ್ಣವಾದ ಶೂಲಗಳಿಂದಲೂ ಪಟ್ಟಸಗಳಿಂದಲೂ ಕತ್ತಿಗಳಿಂದಲೂ, ಪರಿಘ,ಮುದ್ಗರ ಮೊದಲಾದ ಬೇರೆಬೇರೆ ಆಯುಧಗಳಿಂದಲೂ ಗಾಯಪಟ್ಟ ಆ ದೇವತೆಗಳು, ತಮ್ಮಂತೆಯೇ ಸತ್ತುಳಿದ ಕೆಲವು ಸಭಿಕರೊಡನೆಯೂ,ಋತ್ವಿಕ್ಕುಗಳೊಡನೆಯೂ ಸೇರಿಬಂದು, ಬ್ರಹ್ಮನಿಗೆ ನಮಸ್ಕರಿಸಿ ಈ ಸಂಗತಿಯೆಲ್ಲವನ್ನೂ ತಿಳಿಸಿದರು. ದಕ್ಷಯಾಗದಲ್ಲಿ ಈ ಅತ್ಯಾಹಿತಗಳು ನಡೆಯುವುದೆಂದು, ಬ್ರಹ್ಮವಿಷ್ಣುಗಳಿಬ್ಬರಿಗೆಮಾತ್ರ ಮೊದಲೇ ತಿಳಿದಿದ್ದುದರಿಂದ, ಅವರಿಬ್ಬರೂ ಈ ಯಾಗಶಾಲೆಗೆ ಬಂದಿರಲಿಲ್ಲ. ದೇವತೆಗಳು ಬಂದು ಮೊರೆಯಿಡುವುದನ್ನು ಕೇಳಿ ಬ್ರಹ್ಮನು ಅವರನ್ನು ಕುರಿತು “ಎಲೈ ದೇವತೆಗಳಿರಾ! ಈ ಅನರ್ಥಗಳಿಗೆಲ್ಲಾ ನೀವೇ ಕಾರಣವೆಂದೆಣಿಸಬೇಕಾಗಿದೆ. ಏಕೆಂದರೆ, ರುದ್ರನಾದರೋ ಮಹಾತೇಜಸ್ವಿಯು! ಶ್ರೇಯಸ್ಸನ್ನಪೇಕ್ಷಿಸತಕ್ಕವರು ಯಾರೂ ಅವನೊಡನೆ ವಿರೋಧಿಸಬಾರದು! ಹಾಗೆ ವಿರೋಧಿಸಿದವರಿಗೆ ಎಂದಿಗೂ ಕ್ಷೇಮವುಂಟಾಗಲಾರದು. ಮಹಾದೇವನಾಗಿಯೂ,ಯಾಗದಲ್ಲಿ ಹವಿರ್ಭಾಗವನ್ನು ಪಡೆಯುವುದಕ್ಕೆ ಅರ್ಹನಾಗಿಯೂ ಇರುವ ಆ ಈಶ್ವರನಿಗೆ ಸಲ್ಲತಕ್ಕ ಯಜ್ಞಭಾಗವನ್ನು ನೀವು ಸಲ್ಲಿಸದಿದ್ದಮೇಲೆ, ನಿಮ್ಮನ್ನು ಅಪರಾಧಿಗಳೆಂದು ಹೇಳುವುದರಲ್ಲಿ ಸಂದೇಹವೇನಿದೆ? ಆದುದಾಯಿತು! ಈಗ

ಲಾದರೂ, ನೀವೆಲ್ಲರೂ ವಿವೇಕಿಗಳಾಗಿ, ಆ ಈಶ್ವರನಲ್ಲಿಯೇ ಮರೆಹೊಕ್ಕು, ಅವನ ಅನುಗ್ರಹವನ್ನು ಸಂಪಾದಿಸುವುದು ಮೇಲು! ಎಲೈ ದೇವತೆಗಳಿರಾ! ಆ ರುದ್ರನನ್ನು ಸಾಮಾನ್ಯನೆಂದು ತಿಳಿಯಬೇಡಿರಿ! ಆ ಮಹಾತ್ಮನು ಒಂದಾವರ್ತಿ ಕೋಪದಿಂದ ತನ್ನ ಹುಬ್ಬನ್ನು ಗಂಟಿಕ್ಕಿದಮಾತ್ರಕ್ಕೆ, ಲೋಕಪಾಲಸಹಿತವಾಗಿ ಲೋಕವೆಲ್ಲವೂ ತಲೆಕೆಳಗಾಗುವುದು ನಾನೇ ಅವನಿಗೆ ಒಮ್ಮೊಮ್ಮೆ ಭಯಪಡಬೇಕಾಗಿರುವುದು. ಅಂತಹ ಮಹಾನುಭಾವನಾದ ಶಂಕರನು, ಹಿಂದೆ ಬ್ರಹ್ಮಸಭೆಯಲ್ಲಿ ದಕ್ಷನ ಪರುಷವಾಕ್ಯವನ್ನು ಕೇಳಿ ಮೊದಲೇ ಕೋಪಾವೇಶದಿಂದಿದ್ದನು. ಈಗ ಪತ್ನೀವಿಯೋಗವನ್ನು ಕೇಳಿ ಅವನ ಕೋಪವು ಮಿತಿಮೀರಿಹೋಗಿರುವುದು. ಆದುದರಿಂದ ನೀವೆಲ್ಲರೂ ಈಗಲೇ ಹೋಗಿ,ಆ ಶಿವನ ಪಾದಗಳಲ್ಲಿಯೇ ಬಿದ್ದು ಮೃದುಮಧುರವಾಕ್ಯಗಳಿಂದ ಅವನನ್ನು ಪ್ರಸನ್ನನನ್ನಾಗಿ ಮಾಡಬೇಕು. ಇದನ್ನು ಬಿಟ್ಟರೆ ಬೇರೆ ಉಪಾಯವೇ ಇಲ್ಲ. ಆತನನ್ನು ನೋಡಿದಮಾತ್ರಕ್ಕೆ ಎಲ್ಲರಿಗೂ ಭಯವುಂಟಾಗುವುದು. ಆ ಮಹಾತ್ಮನ ತತ್ವವನ್ನೂ,ಬಲವನ್ನೂ, ವೀರ್ಯವನ್ನೂ ಹೀಗೆಂದು ನಿರ್ಣಯಿಸುವುದಕ್ಕೆ ಇಂದ್ರನಾಗಲಿ, ಮಹರ್ಷಿಗಳಾಗಲಿ, ಇತರದೇವತೆಗಳಾಗಲಿ, ಕೊನೆಗೆ ನಾನಾಗಲಿ ಯಾರೂ ಸಮರ್ಥರಲ್ಲ. ಇನ್ನು ಸಾಮಾನ್ಯಮನುಷ್ಯರ ಪಾಡೇನು ? ಭಗವಂತನ ಆವೇಶಾವತಾರವೆನಿಸಿದ ಆ ರುದ್ರನನ್ನು ಸಮಾಧಾನಪಡಿಸಬೇಕಾದರೆ, ಅವನ ಪಾದಗಳಲ್ಲಿಯೇ ಬಿದ್ದು, ಅವನ ಅನುಗ್ರಹವನ್ನು ಸಂಪಾದಿಸಬೇಕಲ್ಲದೆ ಬೇರೆ ವಿಧಿಯಿಲ್ಲ. ನಾನೂ ನಿಮ್ಮ ಸಂಗಡ ಬರುವೆನು. ಕೈಲಾಸಕ್ಕೆ ಹೋಗುವೆವು" ಎಂದನು. ಈ ಮಾತಿಗೆ ಎಲ್ಲರೂ ಸಮ್ಮತಿಸಲು, ಬ್ರಹ್ಮನು ಪ್ರಜಾಧಿಪತಿಗಳೊಡನೆಯೂ, ಸಮಸ್ತ ದೇವತಾಸಮೂಹಗಳೊಡನೆಯೂ ರುದ್ರನಿಗೆ ವಾಸಸ್ಥಾನವಾದ ಕೈಲಾಸಪರ್ವತಕ್ಕೆ ಹೊರಟನು. ಶಿವನಿವಾಸಸ್ಥಾನವಾದ ಆ ಪರ್ವತದ ಸೌಭಾಗ್ಯವನ್ನು ಕೇಳಬೇಕೆ? ಯಾವಾಗಲೂ ಆ ಪರ್ವತಪ್ರದೇಶಗಳಲ್ಲಿ ಸಿದ್ಧಜಾತಿಯರೂ, ತಪಸ್ಸು, ಯೋಗ, ಮಂತ್ರ ಮೊದಲಾದುವುಗಳಲ್ಲಿ ಸಿದ್ಧಿಯನ್ನು ಪಡೆದವರೂ, ದೇವತೆಗಳೂ, ಕಿನ್ನರರೂ, ಗಂಧರ್ವರೂ, ಅಪ್ಸರಸ್ಸುಗಳೂ ತುಂಬಿರುವರು. ಮತ್ತು ಆ ಪರ್ವತವು, ನಾನಾ

ಬಗೆಯ ಗೈರಿಕಧಾತುಗಳಿಂದ ವಿಚಿತ್ರವಾದ ರತ್ನಮಯಶಿಖರಗಳು! ನಾನಾ ಬಗೆಯ ಮರಗಿಡಬಳ್ಳಿಗಳು ? ನಾನಾಜಾತಿಯ ಮೃಗಸಮೂಹಗಳು! ಅಲ್ಲಲ್ಲಿ ಸ್ವಚ್ಛಜಲವುಳ್ಳ ಅನೇಕ ಗಿರಿನದಿಗಳು ! ಚಿತ್ರವಿಚಿತ್ರಗಳಾದ ಗುಹೆಗಳು! ಅನೇಕವಿಧಗಳಾದ ತಪ್ಪಲುಗಳು! ಇವುಗಳಿಂದ ಕೂಡಿ, ತಮ್ಮತಮ್ಮ ಪತಿಗಳೊಡನೆ ಆಗಾಗ ವಿಹಾರಾರ್ಥವಾಗಿ ಬರುವ ಸಿದ್ಧಸ್ತ್ರೀಯರಿಗೆ ಸರ್ವವಿಧದಲ್ಲಿಯೂ ಆನಂದಕರವಾಗಿರುವುದು. ಮತ್ತು ಆ ಪರ್ವತದ ಸುತ್ತಲೂ ಒಂದು ಕಡೆಯಲ್ಲಿ ನವಿಲುಗಳ ಕೇಕಾಧ್ವನಿ! ಮತ್ತೊಂದುಕಡೆಯಲ್ಲಿಭ್ರಮರಝೇಂಕಾರಧ್ವನಿ ! ಇನ್ನೊಂದು ಕಡೆಯಲ್ಲಿ ಕೋಗಿಲೆಗಳ ಕಲಧ್ವನಿ ! ಬೇರೊಂದು ಕಡೆಯಲ್ಲಿ ಇತರಪಕ್ಷಿಗಳ ಗಾನಧ್ವನಿ ! ಇವೆಲ್ಲವೂ ಕಲೆತು, ಯಾವಾಗಲೂ ಕರ್ಣಾನಂದಕರವಾಗಿ ಕೇಳಿಸುತ್ತಿರುವುವು! ಮತ್ತು ಆ ಪರ್ವತವು ಕಲ್ಪವೃಕ್ಷಗಳಂತೆ ಸರ್ವಫಲಪ್ರದಗಳಾದ ನಾನಾಜಾತಿಯ ವೃಕ್ಷಗಳ ನೀಡಿದ ಕೊಂಬೆಗಳಿಂದ, ಪಕ್ಷಿಸಮೂಹಗಳನ್ನು ಕೈಯೆತ್ತಿ ಕರೆಯುವಂತೆಯೂ, ಆನೆಗಳ ಹಿಂಡಿನಿಂದ ನಡೆಯುವಂತೆಯೂ, ಗಿರಿನದಿಗಳ ಪ್ರವಾಹಧ್ವನಿಯಿಂದ ಮಾತಾಡಿಸುವಂತೆಯೂ ತೋರುತ್ತಿರುವುದು ! ಮತ್ತು ಆ ಪರ್ವತದಮೇಲೆ ಮಂದಾರ, ಪಾರಿಜಾತ, ಸರಳ, ತಮಾಲ, ಸಾಲೆ, ತಾಳೆ, ಕೋವಿದಾರ, ಅರ್ಜುನ, ಮಾವು, ಕಡವು, ನಾಗ, ಪುನ್ನಾಗ, ಸಂಪಗೆ, ಪಾದರಿ, ಅಸುಗೆ, ಪಗಡೆ, ಮೊಲ್ಲೆ, ಗೋರಂಟೆ, ಹೊಂದಾವರೆ, ಗಿರಿಮಲ್ಲಿಗೆ, ಮಾಧವಿ, ಮುಂತಾದ ಬಳ್ಳಿಗಳೂ, ಹಲಸು, ಅತ್ತಿ, ಅರಳಿ, ಆಲ, ಭುಜಪತ್ರ ಮುಂತಾದ ವೃಕ್ಷಗಳೂ, ಅನೇಕಜಾತಿಯ ಓಷಧಿಗಳೂ, ಪೂಗ, ರಾಜಪೂಗ, ನೇರಳೆ, ಖರ್ಜೂರ, ಆಮ್ರಾತಕ, ಸೀಮಾವು, ಪ್ರಿಯಂಗು, ಬೇವು, ಇಂಗಳ, ಬಿದಿರು, ಮುಂತಾದ ಫಲವೃಕ್ಷಗಳೂ ನಿಬಿಡವಾಗಿ ತುಂಬಿರುವುವು, ತಾವರೆ, ನೈದಿಲೆ, ಕಲ್ಹಾರ, ಮುಂತಾದ ನೀರುಹೂಗಳೆಲ್ಲವೂ ಸಮೃದ್ಧವಾಗಿರುವುವು. ಅಲ್ಲಲ್ಲಿನ ತಾವರೆಕೊಳಗಳಲ್ಲಿ ಹಂಸಕಾರಂಡವಗಳೇ ಮೊದಲಾದ ನೀರುಹಕ್ಕಿಗಳು ಅವ್ಯಕ್ತಮಧುರವಾಗಿ ಕೂಗುತ್ತಿರುವುವು. ಮತ್ತು ಅಲ್ಲಿನ ಕಾಡುಗಳಲ್ಲಿ ಜಿಂಕೆ, ಕಪಿ, ಹಂದಿ, ಸಿಂಹ, ಕರಡಿ. ಮುಳ್ಳುಹಂದಿ, ಕಡವೆ, ಹುಲಿ, ಎಂಟಡಿ, ಕಾಡೆಮ್ಮೆ, ಕೃಷ್ಣಸಾರ, ಗೋಕರ್ಣ, ಕಂಬಳಮೃಗ, ಕಸ್ತೂರೀ

ಮೃಗ,ಏಕಪದಗಳೆಂದೂ ಅಶ್ವಮುಖಗಳೆಂದೂ ಪ್ರಸಿದ್ಧವಾದ ನಾನಾಜಾತಿಯ ಮೃಗಗಳೆಲ್ಲವೂ ತುಂಬಿರುವುವು. ಮತ್ತು ಅಲ್ಲಿ ಸುತ್ತಲೂ ಬಾಳೆಯ ತೋಟಗಳಿಂದ ಆವೃತವಾದ ಸರೋವರಗಳೂ,ಆ ಸರೋವರದಸುತ್ತಲೂ ವಿಹಾರಯೋಗ್ಯವಾದ ಮರಳುದಿಣ್ಣೆಗಳೂ ಕಂಗೊಳಿಸುತ್ತಿರುವುವು! ಸ್ನಾನ ಮಾಡಿದಮಾತ್ರದಿಂದಲೇ ಸಮಸ್ತಪುಣ್ಯಫಲವನ್ನೂ ಕೊಡತಕ್ಕ ಗಂಗಾನದಿಯು ನೇತ್ರಾನಂದಕರವಾಗಿ ಪ್ರವಹಿಸುತ್ತಿರುವುದು. ಇಂತಹ ಕೈಲಾಸ ಪರ್ವತವನ್ನು ನೋಡಿ ಬ್ರಹ್ಮಾದಿದೇವತೆಗಳೆಲ್ಲರೂ ಪರಮಾಶ್ಚರ್ಯಭರಿತರಾಗಿ ಹೋಗುತ್ತ,ಮುಂದೆಲೋಕಾತಿಶಯಸೌಂದರ್ಯವುಳ್ಳ ಅಲಕಾನಗರಿಯನ್ನೂ ಅದರ ಹೊರಗಿನ ಸೌಗಂಧಿಕವನವನ್ನೂ ನೋಡಿ ಮತ್ತಷ್ಟು ಆನಂದಭರಿತ ರಾದರು.ಆ ಅಲಕಾನಗರಿಯ ಹೊರಭಾಗದಲ್ಲಿ ನಂದೆಯೆಂದೂ, ಅಲಕನಂದೆ ಯೆಂದೂ ಎರಡು ಪುಣ್ಯನದಿಗಳು ಪ್ರವಹಿಸುತ್ತಿರುವುವು.ಈ ನದಿಗಳೆರಡೂ ಶ್ರೀವಿಷ್ಣುಮೂರ್ತಿಯ ಪಾದಸಂಬಂಧದಿಂದ ಪರಮಪಾವನವೆನಿಸಿಕೊಂಡಿರುವುವು. ದೇವಸ್ತ್ರೀಯರು ವಿಮಾನಾರೂಢರಾಗಿ ಬರುವಾಗ, ದಾರಿಯಲ್ಲಿ ಈ ನದಿಗಳನ್ನು ಕಂಡೊಡನೆ, ಕೆಳಕ್ಕಿಳಿದು,ಅಲ್ಲಿ ತಮ್ಮತಮ್ಮ ಪತಿಗಳೊಡನೆ ಜಲಕ್ರೀಡೆಯನ್ನಾಡುತ್ತ ಶ್ರಮಪರಿಹಾರವನ್ನು ಮಾಡಿಕೊಂಡು ಮುಂದೆ ಸಾಗುವರು. ಹೀಗೆ ಅನವರತವೂ ದೇವತಾಸ್ತ್ರೀಯರು ಬಂದು ಜಲಕ್ರೀಡೆ ಯನ್ನಾಡಿ ಹೋಗುವುದರಿಂದ,ಅವರ ದೇಹದಲ್ಲಿ ಧರಿಸಿದ ಹರಿದ್ರಾಕುಂಕುಮಗಳ ಬಣ್ಣವು ಇದರಲ್ಲಿ ಕರಗಿ ಯಾವಾಗಲೂ ಅವು ಪೀತವರ್ಣವಾಗಿರುವುವು. ಅಲ್ಲಲ್ಲಿ ಸಂಚರಿಸತಕ್ಕ ಮದದಾನೆಗಳು,ಈ ನದೀಜಲವನ್ನು ಕಂಡೊಡನೆ,ದಾಹವಿಲ್ಲದಿದ್ದರೂ ಆಸೆಪಟ್ಟು ಅಲ್ಲಿ ಜಲಪಾನವನ್ನು ಮಾಡುವುವಲ್ಲದೆ ತಮ್ಮತಮ್ಮ ಹೆಣ್ಣಾನೆಗಳಿಗೂ ಆ ನೀರನ್ನು ಪ್ರೀತಿಯಿಂದ ಕುಡಿಸುವುವು. ಈ ಅಲಕಾನಗರಿಯಲ್ಲಿ,ಬೆಳ್ಳಿಬಂಗಾರಗಳಿಂದಲೂ,ನವರತ್ನಗಳಿಂದಲೂನಿರ್ಮಿತಗಳಾದ ದೇವವಿಮಾನಗಳು ಲೆಕ್ಕವಿಲ್ಲದಷ್ಟುಸುತ್ತುತ್ತಿರುವುವು. ಮಿಂಚಿನಿಂದ ಕೂಡಿದ ಮೇಘಪರಂಪರೆಗಳು ಆಕಾಶದಲ್ಲಿ ಹೇಗೋ ಹಾಗೆ,ಆ ಅಲಕಾಪುರದಲ್ಲಿ ದೇವತಾಸ್ತ್ರೀಯರಿಂದ ತುಂಬಿದ ವಿಮಾನಗಳು ಸರ್ವಕಾಲದಲ್ಲಿಯೂ ಸಂಚರಿಸುತ್ತಿರುವುವು.ಬ್ರಹ್ಮಾದಿದೇವತೆಗಳು ಕ್ರಮವಾಗಿ ಈ ಅಲ

ಕಾನಗರಿಯನ್ನೂ, ಆ ಎರಡು ಪುಣ್ಯನದಿಗಳನ್ನೂ, ಸೌಗಂಧಿಕವನವನ್ನೂ ದಾಟಿ ಸ್ವಲ್ಪ ಮುಂದೆ ಹೋಗಿ, ಅಲ್ಲಿ ಬೇರೊಂದು ಮಹೋದ್ಯಾನವನ್ನು ಕಂಡರು. ಅದರಲ್ಲಿಯೂಕೂಡ, ಎಲ್ಲಿ ನೋಡಿದರೂ ಮನೋಹರಗಳಾದ ವೃಕ್ಷವಾಟಿಕೆಗಳು! ಅವುಗಳಲ್ಲಿ ಶುಕಪಿಕಶಾರಿಕಾದಿಪಕ್ಷಿಗಳ ಮಧುರಧ್ವನಿ ಗಳು! ಅಲ್ಲಲ್ಲಿ ಚಿತ್ರವಿಚಿತ್ರಗಳಾದ ಫಲಗಳಿಂದಲೂ, ಹೂಗಳಿಂದಲೂ, ಎಲೆ ಗಳಿಂದಲೂ ಶೋಭಿತಗಳಾದ ಲತಾವಿಶೇಷಗಳು ! ನಡುನಡುವೆ ತಾವರೆ ಕೊಳಗಳು, ಆ ಕೊಳಗಳಲ್ಲಿ ಭ್ರಮರಝುಂಕಾರದೊಡಗೂಡಿದ ಕಲಹಂಸ ಧ್ವನಿಗಳು, ಹೀಗೆ ಸರ್ವಶೋಭಾಸ್ಪದವಾಗಿ, ಕಾಡಾನೆಗಳಿಂದ ಮುರಿಯ ಲ್ಪಟ್ಟ ಚಂದನವೃಕ್ಷಗಳ ಸುಗಂಧದಿಂದ, ಅಲ್ಲಿಗೆ ಆಗಾಗ ವಿಹಾರಾರ್ಥ ವಾಗಿ ಬರುವ ಯಕ್ಷಸ್ತ್ರೀಯರ ಮನಸ್ಸನ್ನು ಉಲ್ಲಾಸಗೊಳಿಸುತಿದ್ದ ಆ ದಿವ್ಯೋದ್ಯಾನವನ್ನು ಪ್ರವೇಶಿಸಿದರು. ಆ ಉದ್ಯಾನವನದ ದಾರಿಯಿಂದ ಹೋಗುತ್ತ, ಅದರ ನಡುವೆ ಅನೇಕ ಗಂಧರ್ವಸಮೂಹದಿಂದ ಸೇವಿತವಾ ಗಿಯೂ, ವೈಡೂರ್ಯ ಸೋಪಾನಗಳುಳ್ಳುದಾಗಿಯೂ, ನೈದಿಲೆ ಹೂಗ ಳಿಂದ ತುಂಬಿದುದಾಗಿಯೂ ಇದ್ದ ನಡೆಬಾವಿಗಳ ಸಾಲನ್ನು ಕಂಡರು. ಅದನ್ನೂದಾಟಿ ಮುಂದೆ ಹೋಗಿ, ಅಲ್ಲಿ ಮಹೋನ್ನತವಾದ ಒಂದಾ ನೊಂದು ವಟವೃಕ್ಷದ ಬಳಿಗೆ ಬಂದರು. ಆ ವಟವೃಕ್ಷವು ನೂರು ಯೋಜನ ದಷ್ಟು ಉನ್ನತವಾಗಿಯೂ, ಎಪ್ಪತ್ತೈದು ಯೋಜನದಗಲಕ್ಕೆ ಶಾಖೋಪ ಶಾಖೆಗಳಿಂದ ವಿಸ್ತೃತವಾಗಿಯೂ ಇರುವುದು. ಮತ್ತು ಅದು ಪಕ್ಷಿಗಳ ಗೂಡುಗಳೂ ಇಲ್ಲದೆ, ಸುತ್ತಲೂ ತಂಪಾದ ನೆಳಲನ್ನು ಕೊಡುತ್ತಿರು ವುದರಿಂದ ತಾಪರಹಿತವಾಗಿರುವುದು. ಮತ್ತು ಅದರ ಛಾಯೆಯು ಅನೇಕ ಯೋಗನಿಷ್ಠರಿಗೆ ಆಶ್ರಯವಾದುದರಿಂದ ಆ ವೃಕ್ಷವೇ ಯೋಗಸ್ವರೂ ಪವೋ ಎಂಬಂತಿರುವುದು. ಜ್ಞಾನಮಾರ್ಗವನ್ನು ಹಿಡಿದವರಿಗೆ ಅನುಕೂಲ ಸ್ಥಳವಾದ ಆ ಮರದಡಿಯಲ್ಲಿ, ಯೋಗಸಿದ್ಧರಾದ ಸುನಂದಾದಿಮುನಿಕು ಮಾರರಿಂದಲೂ,ತನಗೆ ಮಿತ್ರನಾದ ಕುಬೇರನಿಂದಲೂ ಸೇವಿಸಲ್ಪಡುತ್ತ, ಕೋಪವನ್ನು ನೀಗಿದ ಯಮನಂತೆ ಶಾಂತಮೂರ್ತಿಯಾಗಿ ಕುಳಿತಿದ್ದ ಶಂಕರ ನನ್ನು ಈ ಬ್ರಹ್ಮಾದಿದೇವತೆಗಳೆಲ್ಲರೂ ಕಂಡರು.ಅಲ್ಲಿ ಶಿವನು,ವಿದ್ಯೆ ಮತ್ತು

ತಪಸ್ಸೆಂಬ ಜ್ಞಾನಯೋಗಕರ್ಮಯೋಗಗಳ ಬಲದಿಂದ, ಪರಮಾತ್ಮೋ ಪಾಸನಾರೂಪವಾದ ಭಕ್ತಿಯೋಗವನ್ನು ಹಿಡಿದು, ಇಂದ್ರಿಯಗಳನ್ನು ಜಯಿಸಿ, ಸಮಸ್ತಭೂತದಯಾಪರನಾದುದರಿಂದ ಲೋಕಸುಹೃತ್ತೆನಿಸಿ, ಸಮಸ್ತ ಲೋಕಗಳಿಗೂ ಕ್ಷೇಮವನ್ನು ಚಿಂತಿಸುತ್ತಿರುವನು. ಸಂಧ್ಯಾಕಾಲಮೇಘದಂತೆ ರಕ್ತವರ್ಣವಾದ ತನ್ನ ದೇಹದಲ್ಲಿ, ಜಡೆ, ನಾರುಮಡಿ, ಕೃಷ್ಣಾಜಿನ ಮೊದಲಾದ ತಾಪಸಚಿಹ್ನಗಳನ್ನೂ, ತಲೆಯಲ್ಲಿ ಚಂದ್ರಕಳೆಯನ್ನೂ ಧರಿಸಿ, ಎಡಗಾಲನ್ನು ಬಲದ ತೊಡೆಯಮೇಲೆ ಏರಿಸಿಟ್ಟುಕೊಂಡು ಎಡದಮಂಡಿಯ ಮೇಲೆ ಎಡದ ತೋಳನ್ನು ನೀಡಿ, ಬಲಗೈಮಣಿಕಟ್ಟಿನಲ್ಲಿ ಅಕ್ಷಮಾಲೆಯನ್ನು ಧರಿಸಿ ದರ್ಭಾಸನದಮೇಲೆ ವೀರಾಸನದಿಂದ ಕುಳಿತಿರುವನು. ಮತ್ತು ತರ್ಕಮುದ್ರೆಯಿಂದ(ಎಂದರೆ ಜ್ಞಾನೋಪದೇಶಮುದ್ರೆಯಿಂದ) ಬಲಗೈಬೆರಳನ್ನು ಜೋಡಿಸಿ ಹಿಡಿದು, ಅನೇಕ ಸಜ್ಜನರಮುಂದೆ ಪ್ರಶ್ನೆಮಾಡುತ್ತಿರುವ ನಾರದನಿಗೆ ಬ್ರಹ್ಮತತ್ವವನ್ನುಪದೇಶಿಸುತ್ತಿರುವನು. ತಪಸ್ವಿಗಳೆಲ್ಲರಿಗೂ ಮುಖ್ಯನಾದ ಇಂತಹ ದಕ್ಷಿಣಾಮೂರ್ತಿಯನ್ನು ಕಂಡೊಡನೆ ಇಂದ್ರಾದಿಲೋಕಪಾಲಕರೂ, ಮಹರ್ಷಿಗಳೂ ಆತನಿಗೆ ಕೈಮುಗಿದು ನಮಸ್ಕರಿಸಿದರು. ಇಷ್ಟರಲ್ಲಿ ಯೋಗನಿಷ್ಠನಾದ ರುದ್ರನು, ಸಮಸ್ತ ದೇವತೆಗಳಿಂದಲೂ ಪೂಜಿತವಾದ ಪಾದಪದ್ಮವುಳ್ಳ ಲೋಕಪಿತಾಮಹನಾದ ಬ್ರಹ್ಮನು ತನ್ನ ಕಡೆಗೆ ಬರುತ್ತಿರುವುದನ್ನು ಕಂಡು, ಥಟ್ಟನೆ ಇದಿರೆದ್ದುಬಂದು, ವಾಮನರೂಪಿಯಾದ ವಿಷ್ಣುವು ಕಶ್ಯಪಪ್ರಜಾಪತಿಗೆ ನಮಸ್ಕರಿಸುವಂತೆ ತಲೆಬಗ್ಗಿ ನಮಸ್ಕರಿಸಿದನು. ಆಮೇಲೆ ಆ ರುದ್ರನಿಗೆ ಅನುಚರರಾಗಿದ್ದ ಸಿದ್ಧಗಣಗಳೂ, ಮಹರ್ಷಿಗಳೂ ಎಲ್ಲರೂ ಕ್ರಮವಾಗಿ ಮುಂದೆಬಂದು ಪ್ರಣಾಮವನ್ನು ಮಾಡಿದರು. ಹೀಗೆ ರುದ್ರನು ಸಪರಿವಾರನಾಗಿ ಬಂದು ನಮಸ್ಕರಿಸುವುದನ್ನು ನೋಡಿ ಬ್ರಹ್ಮನು ಅವನನ್ನು ಕುರಿತು ಹೀಗೆಂದು ಸ್ತುತಿಸುವನು. * “ಎಲೈ ಲೋಕೇಶ್ವರನೆ! ಚಿದಚಿದಾತ್ಮಕವಾದ ಈ ಸಮಸ್ತಜಗತ್ತಿಗೂ ಕ್ಷೇತ್ರ

* ಇಲ್ಲಿ ಕೆಲವು ಆಕ್ಷೇಪಣೆಗಳುಂಟು. ವಿಷ್ಣುವೇ ಸರ್ವೋತ್ತಮನೆಂದೂ, ಜಗತ್ಕಾರಣನೆಂದೂ, ಅವನೇ ಪರಬ್ರಹ್ಮಶಬ್ದವಾಚ್ಯನೆಂದೂ, ಅವನೇ ಧ್ಯೇಯವಸ್ತುವೆಂದೂ, ಅವನೇ ಮೋಕ್ಷಪ್ರದನೆಂದೂ ತೋರಿಸುವ ವೇದಾಂತಾರ್ಥಗಳನ್ನು ನಿರೂಪಿ

ದಂತೆಯೂ, ಬೀಜದಂತೆಯೂ ಕಾರಣವಾಗಿರುವ ಪ್ರಕೃತಿಪುರುಷರೆಂಬ ತತ್ವಗಳೆರಡಕ್ಕಿಂತಲೂ ವಿಲಕ್ಷಣನಾಗಿ, ಅವುಗಳಿಂದುಂಟಾದ ಸಮಸ್ತ

---

ಸುವುದಕ್ಕಾಗಿ ಈ ಭಾಗವತವೆಂಬ ಪುರಾಣವನ್ನು ವ್ಯಾಸಮುನಿಯು ರಚಿಸಿದುದಾಗಿ ಗ್ರಂಥಾರಂಭದಲ್ಲಿ ಹೇಳಲ್ಪಟ್ಟಿದೆ. ಅದರಂತೆಯೇ ಅಲ್ಲಲ್ಲಿ ಶ್ರೀಮನ್ನಾರಾಯಣ ನೊಬ್ಬನೇ ಅಪ್ರಾಕೃತವಾದ ದಿವ್ಯಸ್ವರೂಪವುಳ್ಳವನೆಂದೂ, ಬ್ರಹ್ಮರುದ್ರರೇ ಮೊದ ಲಾದ ಇತರದೇವತೆಗಳೆಲ್ಲರೂ ಜೀವವಿಶೇಷಗಳೆಂದೂ ಹೇಳಿದೆ ಈಗ ಬ್ರಹ್ಮನು ರುದ್ರ ನನ್ನು ಸ್ತುತಿಸುವಾಗ, ಆ ರುದ್ರನನ್ನೇ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಕಾರಣ ವಾದ ಪರಬ್ರಹ್ಮನನ್ನಾಗಿ ಹೇಳಿದುದೇಕೆ? ಇದಲ್ಲದೆ ಹಿಂದೆ ಸತೀದೇವಿಯೂ, ದಕ್ಷನೂ, ಮುಂದೆ ವಿಷ್ಣುವೂ ಆ ರುದ್ರನನ್ನು ಸ್ತುತಿಸುವಾಗಲೂಕೂಡ ಅವನಿಗೆ ಜಗತ್ಕಾರಣತ್ವಾದಿಗಳು ಸೂಚಿಸಲ್ಪಟ್ಟಿರುವುವು ಹೀಗೆ ವಿರುದ್ಧಾರ್ಥವುಳ್ಳ ಈ ಪುರಾ ಣವನ್ನು ನಂಬುವುದು ಹೇಗೆ? ಇದಲ್ಲದೆ ಹಿಂದೆ ಬ್ರಹ್ಮ ವಿಷ್ಣು ಮಹೇಶ್ವರರು ಮೂವರೂ, ತಮ್ಮತಮ್ಮ ಅಂಶದಿಂದ ಅತ್ರಿಮುನಿಗೆ ಕುಮಾರರಾಗಿ ಹುಟ್ಟಿದುದಾಗಿ ಹೇಳಿದೆ. "ತವಾಂತರಾತ್ಮಾ ಮಮ ಚ" ಇತ್ಯಾದಿ ಶ್ರುತಿಗಳಲ್ಲಿ, ವಿಷ್ಣುವಿಗೆ ಪರಮಾ ತ್ಮತ್ವವೂ, ಬ್ರಹ್ಮರುದ್ರರಿಗೆ ಜೀವತ್ವವೂ ಸ್ಪಷ್ಟವಾಗುವುದು. ಸರ್ವಾಂತರಾತ್ಮನಾದ ಪರಮಪುರುಷನು, ಜೀವನಮೂಲಕವಾಗಿ, ತನ್ನ ಜ್ಞಾನಶಕ್ತ್ಯಾದಿಗುಣಗಳಲ್ಲಿ ಯಾವು ದಾದರೂ ಒಂದನ್ನು ಹೊರಪಡಿಸುತ್ತ, ಅಂಶಾವತಾರದಲ್ಲಿರುವನೆಂದರೆ ಯುಕ್ತವಾಗಿ ತೋರುವುದೇಹೊರತು, ತಾವೇ ಜೀವಕೋಟಿಯಲ್ಲಿ ಸೇರಿದ ಬ್ರಹ್ಮರುದ್ರರು, ಮ ತ್ತೊಂದು ಜೀವನಲ್ಲಿ ಅನುಪ್ರವೇಶವೆಂಬ ಅಂಶಾವತಾರವನ್ನು ಹೊಂದುವುದು ಹೇಗೆ?" ಎಂಬೀ ಆಕ್ಷೇಪಣೆಗಳೆಲ್ಲಕ್ಕೂ ಇಲ್ಲಿ ಅವಕಾಶವುಂಟಾಗಬಹುದು. ಆದರೆ ಇವೆಲ್ಲ ವನ್ನೂ ಪರಸ್ಪರವಿರುದ್ಧಾರ್ಥಗಳೆಂದು ಗ್ರಹಿಸಕೂಡದು. ರುದ್ರಾದಿಗಳಿಗೆ ಅಲ್ಲಲ್ಲಿ ಆಧಿಕ್ಯವನ್ನು ಹೇಳಿದ್ದರೂ, ಆ ಕಡೆಗಳಲ್ಲೆಲ್ಲಾ ಆಯಾ ಜೀವಗಳನ್ನು ಶರೀರವಾಗಿ ಉಳ್ಳ ಅಂತರ್ಯಾಮಿಯಾದ ಪರಮಾತ್ಮನನ್ನುದ್ದೇಶಿಸಿ ಹೇಳಿದಂತೆಯೇ ಗ್ರಹಿಸ ಬೇಕು. ಇದಲ್ಲದೆ ಬ್ರಹ್ಮರುದ್ರಾದಿಗಳೆಲ್ಲರೂ ಭಗವಂತನ ಆವೇಶಾವತಾರವೆನಿಸಿರುವುದ ರಿಂದ, ಅವರಲ್ಲಿರುವ ಭಗವದಂಶವನ್ನುಕುರಿತೇ ಸ್ತುತಿಸಿದುದಾಗಿ ಗ್ರಹಿಸಬೇಕು. ಆದರೆ ಅಲ್ಲಲ್ಲಿ ರುದ್ರಾದಿಗಳು ಬ್ರಹ್ಮಸ್ವರೂಪರೆಂದೂ, ಅವರನ್ನು ಉಪಾಸನೆಮಾಡ ಬೇಕೆಂದೂ ಹೇಳಿರುವುದೇಕೆ? ಅನೇಕಸಾತ್ವಿಕ ತಂತ್ರಗಳಲ್ಲಿ "ನಾನ್ಯಂ ದೇವಂ ನಮ ಸ್ಕುರ್ಯಾನ್ನಾನ್ಯಂ ದೇವಂ ನಿರೀಕ್ಷಯೇತ್ । ನಾನ್ಯಂ ಪ್ರಾಸಾದಮಾರೋಹೇತ್ ನಾನ್ಯದಾಯತನಂ ವಿಶೇತ್" ಇತ್ಯಾದಿವಾಕ್ಯಗಳಿಂದ ಇತರ ದೇವತಾನಮಸ್ಕಾರಾದಿಗಳು ನಿಷೇಧಿಸಲ್ಪಟ್ಟಿರುವುದಲ್ಲವೆ?" ಎಂದರೆ, ಅದು ಅವರನ್ನು ಭಜಿಸಲೇ ಬಾರದೆಂಬ ನಿರ್ಬಂಧ

ಪ್ರಪಂಚಗಳಲ್ಲಿಯೂ ಅಡಗಿರತಕ್ಕ ಪರಬ್ರಹ್ಮವೇ ನೀನೆಂದು ತಿಳಿದಿರುವೆನು. ಎಂದರೆ, ನೀನು ಸಮಸ್ತ ಕಲ್ಯಾಣಗುಣಪರಿಪೂರ್ಣನಾಗಿ, ಹೇಯ ಗುಣರಹಿತನಾದ ಆ ನಾರಾಯಣನ ಆವೇಶಾವತಾರವಾಗಿರುವುದ

---

ರಿಂದ ಹೇಳಿದುದಲ್ಲ. ಬ್ರಹ್ಮೋಪಾಸನೆಯಲ್ಲಿ ಸದ್ವಾರಕವೆಂದೂ, ಅದ್ವಾರಕವೆಂದೂ ಎರಡುವಿಧವುಂಟು. ಸದ್ವಾರಕವೆಂದರೆ, ಬ್ರಹ್ಮರುದ್ರಾದಿರೂಪದಿಂದ, ತದಂತರ್ಯಾಮಿಯಾದ ಪರಮಾತ್ಮನನ್ನುಪಾಸಿಸುವುದು. ಅದ್ವಾರಕವೆಂದರೆ ನೇರ್ಪಗೆ ಶುದ್ಧಸತ್ವಮಯವಾದ ಆ ಭಗವನ್ಮೂರ್ತಿಯನ್ನೇ ಉಪಾಸಿಸುವುದು. ಇವುಗಳಲ್ಲಿ ಸದ್ವಾರಕವಾದ ಉಪಾಸನವೆಂಬುದು ಬೇರೆಬೇರೆ ಫಲಾಪೇಕ್ಷೆಯುಳ್ಳವರಿಂದ ನಡೆಸಲ್ಪಡುವುದು. ಅದ್ವಾರಕವಾದ ಉಪಾಸನವೆಂಬುದು, ಮೋಕ್ಷಾಪೇಕ್ಷೆಯುಳ್ಳವರು ಮಾತ್ರವೇ ಮಾಡಬೇಕಾದುದು. ಈ ವಿಷಯವೇ "ಯೋಯೋ ಯಾಂಯಾಂ ತನುಂ ಭಕ್ತಶ್ಶ್ರದ್ಧಯಾರ್ಚಿತು ಮಿಚ್ಛತಿ" । "ಅನನ್ಯಾಶ್ಚಿಂತಯಂತೋ ಮಾಂ" ಎಂಬೀ ವಾಕ್ಯಗಳಿಂದ ಸ್ಪಷ್ಟಪಡಿಸಲ್ಪಟ್ಟಿರುವುದು. ಈ ಪುರಾಣದಲ್ಲಿಯೇ ಪ್ರಥಮಸ್ಕಂಧದಲ್ಲಿ, "ರಜಸ್ತಮಃ ಪ್ರಕೃತಯಸ್ಸಮಶೀಲಾ ಭಜಂತಿ ವೈ । ಪಿತೃಭೂತಪ್ರಜೇಶಾದೀನ್ ಶ್ರಿಯೈಶ್ವರ್ಯಪ್ರಜೇಪ್ಸವಃ"॥ ಎಂಬುದಾಗಿ ರಜಸ್ತಮೋಗುಣ ಸ್ವಭಾವವುಳ್ಳವರು, ತಮಗೆ ಸಮಾನಸ್ವಭಾವವುಳ್ಳ ದೇವತೆಗಳನ್ನೇ ಭಜಿಸುತ್ತ, ತಮತಮಗೆ ಬೇಕಾದ ಅಲ್ಪಫಲಗಳನ್ನು ಬಯಸುವುದಾಗಿ ಹೇಳಿದೆ. ಹೀಗೆಯೇ ದ್ವಿತೀಯಸ್ಕಂಧದಲ್ಲಿ "ಅಕಾಮಸ್ಸರ್ವಕಾಮೋ ವಾ ಮೋಕ್ಷಕಾಮ ಉದಾರಧೀಃ । ತೀವ್ರೇಣ ಭಕ್ತಿಯೋಗೇನ ಯಜೇತ ಪುರುಷಂ ಪರಮ್" ॥ ಎಂದು, ಮೋಕ್ಷಾಪೇಕ್ಷೆಯುಳ್ಳವರು ಪರಮಪುರುಷನಾದ ಶ್ರೀಮನ್ನಾರಾಯಣನನ್ನೇ ಉಪಾಸಿಸಬೇಕೆಂದೂ ಹೇಳಿದೆ. ಆದುದರಿಂದ ಮೋಕ್ಷದೃಷ್ಟಿಯುಳ್ಳವರು ಇತರದೈವವನ್ನು ಭಜಿಸಬಾರದೆಂಬುದೇ ಆ ಸಾತ್ವಿಕತಂತ್ರಗಳ ಅಭಿಪ್ರಾಯವೇಹೊರತು, ಸರ್ವದೇವತೆಗಳನ್ನೂ ಪರಬ್ರಹ್ಮಸ್ವರೂಪದಿಂದ ಅನುಸಂಧಾನ ಮಾಡುವುದರಲ್ಲಿ ಯಾವ ವಿರೋಧವೂ ಇಲ್ಲವು. ಇದರಂತೆಯೇ "ಬ್ರಹ್ಮರುದ್ರರು ನಿಜಾಂಶದಿಂದ ಹುಟ್ಟುವುದು ಹೇಗೆ" ಎಂಬ ಆಕ್ಷೇಪಣೆಗೂ ಸಮಾಧಾನವುಂಟು. ಬ್ರಹ್ಮರುದ್ರರು ಜೀವಕೋಟಿಗೆ ಸೇರಿದ್ದರೂ, ಅವರು ಪರಮಪುರುಷಾನುಗ್ರಹದಿಂದ ಅಜ್ಞಾನವನ್ನು ನೀಗಿರುವರಲ್ಲದೆ, ನಮ್ಮಂತಹ ಇತರಜೀವರಿಗಿಂತಲೂ ಅಧಿಕವಾದ ಜ್ಞಾನವಿಕಾಸವುಳ್ಳವರು. ಆದರಿಂದ ಅವರು ತಮಗೆ ಧರ್ಮಭೂತವಾದ ಅಸಾಧಾರಣ ಜ್ಞಾನವಿಶೇಷದಿಂದ, ದುರ್ವಾಸನಲ್ಲಿಯೂ, ಚಂದ್ರನಲ್ಲಿಯೂ ಅನುಪ್ರವೇಶಮಾಡಿ, ನಿಜಾಂಶದಿಂದ ಹುಟ್ಟಿದರೆಂಬುದೂ ಉಪಪನ್ನವಾಗುವುದು.

ರಿಂದ,ಅವನ ಶಕ್ತಿಯೆಲ್ಲವೂ ನಿನ್ನಲ್ಲಿರುವುವು. ಜೇಡರ ಹುಳುಗಳು ತನ್ನ ಮೈಯಿಂದ ನೂಲನ್ನೆಳೆದು, ಕೊನೆಗೆ ತನ್ನಲ್ಲಿಯೇ ಅಡಗಿಸಿಕೊಳ್ಳುವಂತೆ, ನೀನೇ ಪ್ರಪಂಚಸ್ವರೂಪನಾಗಿ ಅದನ್ನು ಸೃಷ್ಟಿಸಿ, ರಕ್ಷಿಸುತಿದ್ದು, ಕೊನೆಗೆ ನಿನ್ನಲ್ಲಿಯೇ ಅದನ್ನು ಸೆಳೆದಿಟ್ಟುಕೊಳ್ಳುವೆ ! ಆದುದರಿಂದ ನಿನ್ನ ಅಂಶಭೂತಗಳಾಗಿ, ಶಿವಶಕ್ತಿಗಳೆನಿಸಿಕೊಂಡ ಪ್ರಕೃತಿಪುರುಷರಿಬ್ಬರಿಂದ ವಿಕಾರಹೊಂದಿರುವ ಈ ಜಗತ್ತೂ ನೀನಲ್ಲದೆ ಬೇರೆಯಲ್ಲ. ಓ ಶಂಕರಾ ! ಧರ್ಮಾರ್ಥಗಳೆಲ್ಲವನ್ನೂ ಕೈಗೂಡಿಸತಕ್ಕ ನೀನೇ, ಮೊದಲು ಲೋಕಕ್ಷೇಮಕ್ಕಾಗಿ ಉತ್ತಮಶಾಸ್ತ್ರಗಳನ್ನು ವಿಧಿಸಿ, ಯಜ್ಞವಿಧಿಗಳನ್ನೂ ಏರ್ಪಡಿಸಿರುವೆ. ಮತ್ತು ಸಮಸ್ತಧರ್ಮಗಳನ್ನೂ ಆಯಾ ಎಲ್ಲೆಗಳಲ್ಲಿ ನಿಲ್ಲಿಸತಕ್ಕವನೂ ನೀನೇ ! ಬ್ರಾಹ್ಮಣಾದಿಗಳೆಲ್ಲರೂ ಆಯಾವರ್ಣಾಶ್ರಮಗಳಿಗೆ ವಿಹಿತಗಳಾದ ಕೃತ್ಯಗಳನ್ನು ನಡೆಸುವುದೂ ನಿನ್ನ ಆಜ್ಞೆಯಿಂದಲ್ಲದೆ ಬೇರೆಯಲ್ಲ. ಎಲೈ ಮಂಗಳಸ್ವರೂಪನಾದ ಶಿವನೆ! ನೀನು ಲೋಕದಲ್ಲಿ ಸತ್ಕರ್ಮವನ್ನು ನಡೆಸಿದವರಿಗೆ ಉತ್ತಮಶ್ರೇಯಸ್ಸನ್ನು ಕೊಡತಕ್ಕವನು. ಅಂತಹ ಶುಭಕರ್ಮಗಳನ್ನು ನಡೆಸಿದವರಿಗೆ ಸ್ವರ್ಗಾದಿಗಳನ್ನಾಗಲಿ, ಮೋಕ್ಷವನ್ನಾಗಲಿ ಕೊಡತಕ್ಕವನೂ ನೀನಲ್ಲದೆ ಬೇರೆಯಲ್ಲ. ದುಷ್ಕರ್ಮವನ್ನು ನಡೆಸಿದವರಿಗೆ ಯಾವಾಗಲೂ ಎಂತಹ ಸುಖವೂ ಇಲ್ಲದಂತೆ ಮಾಡಿ, ನರಕದಲ್ಲಿ ತಳ್ಳತಕ್ಕವನೂ ನೀನೇ! ಓ ದೇವಾ! ನಿನ್ನ ಪಾದದಲ್ಲಿ ತಮ್ಮ ಮನಸ್ಸನ್ನಿರಿಸಿ, ಸಮಸ್ತಭೂತಗಳನ್ನೂ ಪರಮಾತ್ಮಭಾವದಿಂದ ನೋಡತಕ್ಕ ಮಹಾತ್ಮರಲ್ಲಿ, ರೋಷವೆಂಬುದು ಇತರ ಮೂರ್ಖಜನರ ವಿಷಯದಲ್ಲಿ ಹೇಗೋಹಾಗೆ ತನ್ನ ಶಕ್ತಿಯನ್ನು ತೋರಿಸಲಾರದು. ನಿನ್ನ ಪಾದಾಶ್ರಿತರೇ ಹಾಗೆ ಕೋಪವನ್ನು ನಿಗ್ರಹಿಸಬಲ್ಲರಾಗಿರುವಾಗ,ಇನ್ನು ನಿನ್ನ ವಿಷಯವನ್ನು ಹೇಳಬೇಕಾದುದೇನು?ಲೋಕದಲ್ಲಿ ಸಮಸ್ತವೂ ಬ್ರಹ್ಮಾತ್ಮಕವೆಂಬುದನ್ನು ತಿಳಿಯದೆ, ದೇವಮನುಷ್ಯಾದಿಭೇದಗಳನ್ನಿಟ್ಟುಕೊಂಡು, ಸ್ವತಂತ್ರಬುದ್ಧಿಯುಳ್ಳವರಾಗಿ, ಕೇವಲ ಕರ್ಮಪ್ರವಣರಾಗಿರುವ ದುಷ್ಟಮನಸ್ಸುಳ್ಳವರು ಇತರರ ಮೇಲ್ಮೆಯನ್ನುಕಂಡು ಅಸೂಯೆಪಟ್ಟು ಅನವರತವೂ ಸಂಕಟಪಡುವುದಲ್ಲದೆ, ಅಂತಹ ಮಹನೀಯರನ್ನು ದುರ್ವಾಕ್ಯಗಳಿಂದ ನಿಂದಿಸುವುದಕ್ಕೂ

ತೊಡಗುವರು. ಆದರೆ ಎಣೆಯಿಲ್ಲದ ದಯಾಸ್ವಭಾವವುಳ್ಳ ನಿನ್ನಂತವರಾದ ರೋ, ಅಂತಹ ದುರಾತ್ಮರ ತಿರಸ್ಕಾರವನ್ನು ಸ್ವಲ್ಪಮಾತ್ರವೂ ಮನಸ್ಸಿಗೆ ತಂದುಕೊಳ್ಳರು. ಅವರ ದುಷ್ಕೃತ್ಯಕ್ಕಾಗಿ ದೈವಸಂಕಲ್ಪದಿಂದ ಅವರಿ ಗುಂಟಾಗುವ ಮುಂದಿನ ಹಾನಿಯನ್ನು ಚಿಂತಿಸಿ ಅದಕ್ಕಾಗಿ ತಾವೇ ಪಶ್ಚಾ ತ್ತಾಪಪಡುವರು. ಲೋಕದಲ್ಲಿ ಸತ್ಕಾರ್ಯವನ್ನು ಮಾಡಬೇಕಾದರೂ, ಅಸತ್ಕಾರ್ಯವನ್ನು ಮಾಡಬೇಕಾದರೂ, ದೈವಪ್ರೇರಣೆಯಿಂದಲ್ಲದೆ ಯಾ ವುದೂ ನಡೆಯದು. ನೀನು ಇತರಜೀವಿಗಳಂತೆ ಪರಮಾತ್ಮನ ಮಾಯೆ ಗೊಳಪಡದೆ, ಅವನನ್ನೇ ಮರೆಹೊಕ್ಕು,ಅವನ ಅನುಗ್ರಹಕ್ಕೆ ಪಾತ್ರನಾಗಿ, ಸರ್ವಜ್ಞನೆನಿಸಿಕೊಂಡಿರುವುದರಿಂದ, ಹೀಗೆ ಮಾಯೆಯಿಂದ ಮರುಳಾಗಿ ಕ ರ್ಮಾನನುಗುಣವಾದ ಕಾರ್ಯವನ್ನು ನಡೆಸತಕ್ಕ ಇತರಚೇತನರಲ್ಲಿ ಅನುಗ್ರ ಹವನ್ನು ತೋರಿಸಬೇಕಾದುದೇ ನಿನ್ನ ಕಾರ್ಯವು.ಆದುದರಿಂದ ದಕ್ಷನು ನಿ ನ್ನಲ್ಲಿ ತಪ್ಪಿನಡೆದ ಅಪರಾಧವನ್ನು ನೀನು ಮನಸ್ಸಿನಲ್ಲಿಡಕೂಡದು. ನಿನ್ನಿಂದ ಕೆಡಿಸಲ್ಪಟ್ಟ ಆತನ ಯಜ್ಞವು ಪೂರ್ತಿಯಾಗುವಂತೆಯೂ ಅನುಗ್ರಹಿಸಬೇ ಕು. ಯಜ್ಞಕ್ರಮವನ್ನು ತಿಳಿಯದ ಆ ದಕ್ಷನು, ನಿನಗೆ ಅತ್ಯವಶ್ಯವಾಗಿ ಸಲ್ಲಿಸ ಬೇಕಾದ ಯಜ್ಞಭಾಗವನ್ನು ಸಲ್ಲಿಸದೆ ಹೋದುದು ಎಂದಿಗೂ ಯುಕ್ತವಲ್ಲ. ಇದರಿಂದಲೇ ಅವನ ಯಜ್ಞವು ಪೂರ್ತಿಹೊಂದದಂತಾಯಿತು. ನೀನೇ ತಿ ರುಗಿ ಆ ಯಜ್ಞವನ್ನು ಪೂರ್ತಿಗೊಳಿಸಬೇಕಲ್ಲದೆ,ಆ ದಕ್ಷನನ್ನೂ ಬದುಕಿಸಬೇ ಕು. ಮತ್ತು ನಿನ್ನ ಅನುಚರರು ಭಗನ ಕಣ್ಣುಗಳನ್ನು ಕೀಳಿಸಿರುವರು.ಪೂ ಷಣನ ಹಲ್ಲುಗಳನ್ನು ಥರಿಸಿರುವರು.ಭೃಗುವಿನ ಮೀಸೆಗಳನ್ನು ಕಿತ್ತು ಹಾಕಿ ರುವರು. ಇವರೆಲ್ಲರಿಗೂ ತಿರುಗಿ ಆಯಾ ಅವಯವಗಳು ಮೊದಲಿನಂತೆ ಹುಟ್ಟುವಹಾಗೆ ಅನುಗ್ರಹಿಸಬೇಕು. ನಿನ್ನ ಸೈನಿಕರ ಪ್ರಹಾರದಿಂದ ಮೈಮುರಿದು ಬಿದ್ದಿರುವ ಈ ಋತ್ವಿಕ್ಕುಗಳೆಲ್ಲರಿಗೂ ಆಯಾ ಅಂಗಗಳು ಪೂರ್ಣವಾಗುವಂತೆಯೂ ಅನುಗ್ರಹಿಸಬೇಕು.ಓ ರುದ್ರಾ! ಈ ಯಾಗದಲ್ಲಿ ಉಪಯೋಗಿಸಿ ಮಿಕ್ಕಿರುವ ಯಾವಯಾವ ಯಜ್ಞಸಾಮಗ್ರಿಗಳುಂಟೋ, ಅವೆಲ್ಲವೂ ನಿನಗೆ ಸೇರತಕ್ಕ ಭಾಗವಾಗಲಿ!" ಎಂದನು. ಇಲ್ಲಿಗೆ ಆರನೆಯ ಅಧ್ಯಾಯವು.

---

ತಿರುಗಿ ದಕ್ಷನು ಯಾಗವನ್ನಾರಂಭಿಸಿದಾಗ, ಶ್ರೀವಿಷ್ಣುಮೂರ್ತಿಯು ಆವಿರ್ಭವಿಸಿ, ಬ್ರಹ್ಮರುದ್ರಾದಿಗಳಿಂದ ಸ್ತುತಿಸಲ್ಪಡುತ್ತ, ದಕ್ಷನಿಂದ ಯಜ್ಞವನ್ನು ಪೂರ್ತಿಗೊಳಿಸಿದುದು.

ವಿದುರಾ ಕೇಳು! ಹೀಗೆ ಬ್ರಹ್ಮನ ಸಮಾಧಾನವಾಕ್ಯವನ್ನು ಕೇಳಿ ರುದ್ರನು ಸಂತೋಷಗೊಂಡು, ಮಂದಹಾಸಪೂರ್ವಕವಾಗಿ ಬ್ರಹ್ಮನನ್ನು ಕುರಿತು, "ಓ ಪ್ರಜೇಶಾ! ನೀನು ಹೇಳಿದಂತೆ ಜನರು ಭಗವನ್ಮಾಯೆಯಿಂದ ಮೋಹಿತರಾಗಿ ಬುದ್ಧಿಗೆಟ್ಟಾಗಲೇ ಪಾಪಕಾರ್ಯಗಳನ್ನು ನಡೆಸುವರು. ಅರಿಯದ ಮಕ್ಕಳಂತೆ ಬುದ್ಧಿಯಿಲ್ಲದೆ ಮಾಡಿದ ಇಂತವರ ತಪ್ಪನ್ನು ನಾನು ಬಾಯಿಂದಲೂ ಎತ್ತಿ ನುಡಿಯುವವನಲ್ಲ. ಕೊನೆಗೆ ಮನಸ್ಸಿನಿಂದಲಾದರೂ ಸ್ಮರಿಸತಕ್ಕವನಲ್ಲ. ಆದರೆ ಅವರವರ ತಪ್ಪಿತಕ್ಕಾಗಿ ದಂಡಿಸಬೇಕಾದುದು ನನ್ನ ಕೃತ್ಯವೆಂದು ನಾನು ಈ ಕಾರ್ಯವನ್ನು ಮಾಡಿದೆನು ಈಗಲೂ ಚಿಂತೆಯಿಲ್ಲ! ನೀನು ಹೇಳಿದಂತೆಯೇ ಆಗಲಿ! ದಕ್ಷನಿಗೆ ಮೊದಲಿದ್ದ ತಲೆಯು ಅಗ್ನಿಯಲ್ಲಿ ದಗ್ಧವಾಗಿ ಹೋಗಿರುವುದರಿಂದ, ಮುಂದೆ ಅವನಿಗೆ ಆಡಿನಮುಖವುಳ್ಳ ತಲೆಯುಂಟಾಗಲಿ! ಮಿತ್ರನಿಗೂ ಅದೇವಿಧವಾದ ಶಿರಸ್ಸುಂಟಾಗಲಿ! ಭಗನು ತಿರುಗಿ ಕಣ್ಣುಗಳನ್ನು ಪಡೆದು ತನ್ನ ಯಜ್ಞಭಾಗವನ್ನು ನೋಡುವುದಕ್ಕೆ ಸಮರ್ಥನಾಗಲಿ! ಪೂಷನಿಗೆ ತಿರುಗಿ ಹಲ್ಲುಗಳು ಮೊಳೆತು, ಯಾಗದಲ್ಲಿ ಯಜಮಾನನು ಕೊಡತಕ್ಕ ಪಿಷ್ಟರೂಪವಾದ ಹವಿಸ್ಸನ್ನು ಅವನು ಆ ತನ್ನ ಹೊಸಹಲ್ಲುಗಳಿಂದ ಮೆಲ್ಲುತ್ತಿರಲಿ! ಮತ್ತು ಆ ಯಜ್ಞದಲ್ಲಿ ಮೈಮುರಿದು ಬಿದ್ದ ದೇವತೆಗಳಲ್ಲಿ ಯಾರುಯಾರು ನನಗೆ ಯಜ್ಞಶೇಷವನ್ನು ಕೊಡುವುದಕ್ಕೆ ಸಮ್ಮತಿಸಿದರೋ, ಅವರೆಲ್ಲರಿಗೂ ತಿರುಗಿ ಮೊದಲಿನಂತೆ ಸರ್ವಾಂಗಗಳೂ ಸರಿಯಾಗಿ ಹುಟ್ಟಲಿ! ಆ ಯಾಗದಲ್ಲಿ ತೋಳುಮುರಿದು ಬಿದ್ದ ಅಧ್ವರ್ಯುಗಳಿಗೂ, ಋತ್ವಿಕ್ಕುಗಳಿಗೂ, ಅಶ್ವಿನೀದೇವತೆಗಳ ತೋಳುಗಳಿಂದಲೂ ಪೂಷನ ಹಸ್ತಗಳಿಂದಲೂ ಆ ಅಂಗಗಳು ಪೂರ್ಣವಾಗಲಿ! ಭೃಗುವಿಗೆ ತಿರುಗಿ ಆಡಿನಂತೆ ಮೀಸೆಗಳು ಬೆಳೆಯಲಿ" ಎಂದನು. ರುದ್ರನ ಈ ಮಾತನ್ನು ಕೇಳಿ ಅಲ್ಲಿದ್ದ ಭೂತಗಳೆಲ್ಲವೂ "ಭಲೆ! ಭಲೆ! !" ಎಂದು ಕೊಂಡಾಡಿದುವು. ಆಮೇಲೆ ಇಂದ್ರಾದಿದೇವತೆಗಳೂ, ಮಹರ್ಷಿಗಳೂ, ದಕ್ಷಯಜ್ಞವನ್ನು ಪೂ

ತಿರ್ಗೊಳಿಸುವುದಕ್ಕಾಗಿ, ಆ ರುದ್ರನನ್ನೇ ಒಪ್ಪಿಸಿ, ಬ್ರಹ್ಮರುದ್ರರಿಬ್ಬರನ್ನೂ ಮುಂದಿಟ್ಟುಕೊಂಡು ಯಜ್ಞಶಾಲೆಗೆ ಬಂದರು. ಅಲ್ಲಿ ರುದ್ರಾಜ್ಞೆಯಿಂದ ದಕ್ಷನಿಗೆ ಮುರಿದುಹೋದ ಕೈಕಾಲುಗಳೆಲ್ಲವನ್ನೂ ಪುನಃ ಜೋಡಿಸಿ, ಆಮೇಲೆ ಯಜ್ಞಪಶುವಾಗಿದ್ದ ಆಡಿನ ತಲೆಯನ್ನು ತಂದು ಅದಕ್ಕಂಟಿಸಿದರು. ಹೀಗೆ ಸರ್ವಾವಯವಗಳೂ ಪೂರ್ಣವಾದಮೇಲೆ, ರುದ್ರನು ಪ್ರಸನ್ನದೃಷ್ಟಿಯಿಂದ ಆ ಶರೀರವನ್ನು ಕಣ್ಣಿಟ್ಟು ನೋಡಿದನು. ಒಡನೆಯೇ ದಕ್ಷನು ನಿದ್ರೆಯಿಂದೆದ್ದವನಂತೆ ಮೇಲಕ್ಕೆದ್ದು, ತನ್ನ ಮುಂದಿದ್ದ ಶಂಕರನನ್ನು ಕಂಡನು. ಹಿಂದೆ ತಾನು ಆ ಮಹಾತ್ಮನನ್ನು ನಿಂದಿಸಿ ಅವನನ್ನು ವಿರೋಧಿಸಿಕೊಂಡುದಕ್ಕಾಗಿ ಪಶ್ಚಾತ್ತಾಪಪಡುತ್ತ, ಆತನ ದಯಾದೃಷ್ಟಿಯಿಂದಲೇ ಆ ಪಾಪಕ್ಕೆ ಪ್ರಾಯಶ್ಚಿತ್ತವನ್ನೂ ಹೊಂದಿದವನಾಗಿ, ಶರತ್ಕಾಲದ ಮಡುವಿನಂತೆ ಶುದ್ಧನಾದನು. ಮಹಾತ್ಮನಾದ ಆ ರುದ್ರನನ್ನು ಸ್ತೋತ್ರಮಾಡಬೇಕೆಂದು ಪ್ರಯತ್ನಿಸಿ ಬಾಯತ್ತುವಷ್ಟರಲ್ಲಿ, ಅವನಿಗೆ ತನ್ನ ಮಗಳಾದ ಸತೀದೇವಿಯ ಮರಣವು ನೆನಪಿಗೆ ಬಂದು, ಕಣ್ಣುಗಳಲ್ಲಿ ಪಳಪಳನೆ ನೀರು ತುಂಬಿತು! ಆ ವಿರಹದುಃಖದಿಂದ ಮಾತಾಡುವುದಕ್ಕೂ ಸಾಧ್ಯವಿಲ್ಲದಂತಾಯಿತು. ಹಾಗಿದ್ದರೂ ಪ್ರಯತ್ನಪೂರ್ವಕವಾಗಿ ತನ್ನ ಮನಸ್ಸನ್ನು ಸಮಾಧಾನಪಡಿಸಿಕೊಂಡು, ನಿಷ್ಕಪಟವಾದ ಹೃದಯದಿಂದ ರುದ್ರನನ್ನು ಹೀಗೆಂದು ಸ್ತೋತ್ರಮಾಡುವನು. “ಓ ಮಹಾತ್ಮಾ! ನಿನ್ನಲ್ಲಿ ನಾನು ಮಹಾಪರಾಧವನ್ನು ನಡೆಸಿಬಿಟ್ಟೆನು. ಅದಕ್ಕಾಗಿ ನೀನು ನನಗೆ ಮಾಡಿದ ಶಿಕ್ಷೆಯು ಯುಕ್ತವಾಗಿಯೇ ಇರುವುದು. ಈ ಶಿಕ್ಷೆಯನ್ನು ನಾನು ಅನುಗ್ರಹವೆಂದೇ ಭಾವಿಸುವೆನೇಹೊರತು ಅವಮಾನವೆಂದು ಭಾವಿಸುವವನಲ್ಲ! ನೀನೂ ಶ್ರೀಮನ್ನಾರಾಯಣನೂ, ದುರ್ಮಾರ್ಗದಲ್ಲಿ ನಡೆಯತಕ್ಕವರನ್ನು ಶಿಕ್ಷಿಸಿ ಸನ್ಮಾರ್ಗಕ್ಕೆ ತರುವುದರಲ್ಲಿ ದೀಕ್ಷೆಯನ್ನು ವಹಿಸಿರತಕ್ಕವರು. ಆ ಉದ್ದೇಶದಿಂದಲೇ ಈಗ ಮಹಾತ್ಮನಾದ ನೀನು, ನಿನ್ನಲ್ಲಿ ದ್ವೇಷಿಸಿದುದಕ್ಕಾಗಿ ನನಗೆ ತಕ್ಕ ಶಿಕ್ಷೆಯನ್ನು ಮಾಡಿದೆ. ಎಲೈ ಪರಮೇಶ್ವರನೆ! ನೀನೇ ಮೊದಲು ಚತುರ್ಮುಖಸ್ವರೂಪನಾಗಿದ್ದು, ಆತ್ಮತತ್ವವನ್ನು ರಕ್ಷಿಸಿಡುವುದಕ್ಕಾಗಿ ಲೋಕದಲ್ಲಿ ವಿದ್ಯೆ, ತಪಸ್ಸು, ವರ್ಣಾಶ್ರಮಧರ್ಮಗಳು ಮುಂತಾದ ಸತ್ಕರ್ಮಗಳನ್ನು ಪ್ರವರ್ತಿಸ

ತೆಕ್ಕೆ ಬ್ರಾಹ್ಮಣರನ್ನು ನಿನ್ನಮುಖದಿಂದ ಸೃಷ್ಟಿಸಿದೆ ! ಆ ಬ್ರಾಹ್ಮಣರು ದಾರಿತಪ್ಪಿ ನಡೆದಾಗ ಪಶುಪಾಲಕನು ದಾರಿತಪ್ಪಿ ಹೋಗುವ ಗೋವುಗಳನ್ನು ದಂಡದಿಂದ ಶಿಕ್ಷಿಸುತ್ತ, ತಿರುಗಿ ಅವುಗಳಿಗೆ ಹುಲ್ಲು ನೀರು ಮುಂತಾದ ಆಹಾರಗಳನ್ನು ಕೊಟ್ಟು ಪೋಷಿಸುವಂತೆ,ಅವರನ್ನು ಸನ್ಮಾರ್ಗಕ್ಕೆ ತಂದು ಅಪಾಯವಿಲ್ಲದೆ ರಕ್ಷಿಸುತ್ತಿರುವೆ! ಈ ತತ್ವಜ್ಞಾನವಿಲ್ಲದ ನಾನು ಹಿಂದೆ ಬ್ರಹ್ಮಸಭೆಯಲ್ಲಿ ನಿನ್ನನ್ನು ತೃಣೀಕರಿಸಿ ಕ್ರೂರವಾಕ್ಯಗಳೆಂಬ ಬಾಣಗಳಿಂದ ನೋಯಿಸಿದೆನು.ಆ ಮಹಾಪಾತಕವು ನನ್ನನ್ನು ಅತಿನೀಚವಾದ ಅಧೋಗತಿಗೆತಂದು ಸೇರಿಸದೆ ಬಿಡುತ್ತಿರಲಿಲ್ಲ!ಈಗ ನಿನ್ನಿಂದ ನನಗೆ ಆ ಮಹಾವಿಪತ್ತು ತಪ್ಪಿ,ಈ ಸ್ವಲ್ಪಶಿಕ್ಷೆಯಲ್ಲಿಯೇ ಪರ್ಯವಸನ್ನವಾಯಿತು! ಆ ನನ್ನ ಮಹಾಪರಾಧವನ್ನೂ ಮನ್ನಿಸಿ ಕಾಪಾಡಿದ ನಿನ್ನ ಸತ್ಕಾರ್ಯಕ್ಕಾಗಿ, ನಿನ್ನಲ್ಲಿ ನೀನೇ ಸಂತೋಷಿಸಬೇಕೇಹೊರತು, ಈ ಮಹೋಪಕಾರಕ್ಕೆ ನಾನು ಯಾವ ಪ್ರತ್ಯುಪಕಾರವನ್ನೂ ಮಾಡಲಾರೆನು. ಇದೋ!ನಿನ್ನ ಪಾದಾರವಿಂದಗಳಿಗೆ ನಮಸ್ಕರಿಸುವೆನು"ಎಂದನು. ದಕ್ಷನು ಹೀಗೆಂದು ಹೇಳಿ ಆ ರುದ್ರನ ಮತ್ತು ಬ್ರಹ್ಮನ ಅನುಮತಿಯನ್ನು ಪಡೆದು, ತಿರುಗಿ ಋತ್ವಿಕ್ಪುರೋಹಿತರೊಡಗೂಡಿ ಯಜ್ಞವನ್ನಾರಂಭಿಸಿದನು. ಈ ಯಜ್ಞವನ್ನಾರಂಭಿಸಿದೊಡನೆ ಕೆಲವು ಬ್ರಾಹ್ಮಣೋತ್ತಮರು, ತಿರುಗಿ ಯಾವ ವಿಘ್ನವೂ ಇಲ್ಲದೆ ಅದನ್ನು ನಿರ್ವಿಘ್ನವಾಗಿ ಸಮಾಪ್ತಿಹೊಂದಿಸುವುದಕ್ಕಾಗಿಯೂ, ಹಿಂದೆ ರುದ್ರಸೈನಿಕರಾದ ಪ್ರಮಥಗಣಗಳ ಸಂಬಂಧದಿಂದುಂಟಾದ ದೋಷಶುದ್ಧಿಗಾಗಿಯೂ, ವಿಷ್ಣುದೇವತಾತ್ಮಕವಾದ ಪುರೋಡಾಶವೆಂಬ ಹವಿಸ್ಸನ್ನು ಕಲ್ಪಿಸಿ, ವಿಧ್ಯುಕ್ತವಾಗಿ ಮೂರು ಕಪಾಲಗಳಲ್ಲಿಟ್ಟು ಸಂಸ್ಕರಿಸಿ, ಸಿದ್ಧಪಡಿಸಿದರು. ದಕ್ಷನು ಆ ಪುರೋಡಾಶವನ್ನು ಭಕ್ತಿಯಿಂದ ತೆಗೆದು ಅಧ್ವರ್ಯುವಾದ ಭೃಗುಮುನಿಯನ್ನು ಮುಂದಿಟ್ಟುಕೊಂಡು, ಶ್ರೀಮನ್ನಾರಾಯಣನನ್ನುದ್ದೇಶಿಸಿ ಅದನ್ನು ಅಗ್ನಿಯಲ್ಲಿ ಹೋಮಮಾಡಿದನು. ಇದನ್ನು ಹೋಮಮಾಡಿದೊಡನೆ ಅದ್ಭುತಕಾಂತಿಯಿಂದಲೂ, ತೇಜಸ್ಸಿನಿಂದಲೂ, ಸಮಸ್ತದಿಕ್ಕುಗಳನ್ನೂ ಬೆಳಗುತ್ತ ಶ್ರೀಮಹಾವಿಷ್ಣುವು ಗರುಡಾರೂಢನಾಗಿ ಆ ಯಜ್ಞಶಾಲೆಯಲ್ಲಿ ಕಾಣಿಸಿಕೊಂಡನು. ಆಃ ! ಆ ಭಗ

ವಂತನ ದಿವ್ಯಾದ್ಭುತರೂಪವನ್ನು ಕೇಳಬೇಕೆ? ಕಾಳಮೇಘದಂತೆ ಸುಂದರ ಶ್ಯಾಮಲವಾದ ದೇಹಕಾಂತಿ! ತಲೆಯಲ್ಲಿ ಸೂರ್ಯನಂತೆ ದೇದೀಪ್ಯಮಾನ ವಾದ ರತ್ನಕಿರೀಟಪ್ರಭೆ! ಕೆನ್ನೆಗಳಲ್ಲಿ ಭ್ರಮರಪಙ್ತಿಯಂತೆ ತೂಗಾಡು ತ್ತಿರುವ ಚಪ್ಪಾದ ಮುಂಗುರುಳು! ಕಿವಿಯಲ್ಲಿ ದಿವ್ಯಕುಂಡಲಗಳು! ನಡು ವಿನಲ್ಲಿ ಬಂಗಾರದ ಉಡಿನೂಲು! ಪುಷ್ಪಗಳಿಂದ ತುಂಬಿದ ಕರ್ಣಿಕಾರ ವೃಕ್ಷದ ಕೊಂಬೆಗಳಂತೆ ಮೊದಲಿಂದ ಕೊನೆಯವರೆಗೂ,ತೋಳ್ಬಳೆ,ಕೈಬಳೆ ಮುಂತಾದ ಸುವರ್ಣಾಭರಣಗಳಿಂದ ಭೂಷಿತನಾಗಿ, ಕೇವಲಸುವರ್ಣ ದಂಡಗಳಂತೆಯೇ ಕಾಣುವ ನೀಡಿದ ಅಷ್ಟಭುಜಗಳು! ಆ ಭುಜಾಗ್ರಗ ಳಲ್ಲಿ ಶಂಖ, ಚಕ್ರ, ಗದೆ, ಪದ್ಮ, ಚರ್ಮ, ಖಡ್ಗ, ಧನುಸ್ಸು, ಬಾಣಗಳೆಂಬ ಎಂಟು ದಿವ್ಯಾಯುಧಗಳು! ಎದೆಯಲ್ಲಿ ಶ್ರೀಮಹಾಲಕ್ಷ್ಮಿ! ಕಂಠದಲ್ಲಿ ವನ ಮಾಲಿಕೆ! ಸ್ತನಾಂತರದಲ್ಲಿ ಶ್ರೀವತ್ಸವೆಂಬ ಮಚ್ಚೆ! ಉಭಯಪಾರ್ಶ್ವಗ ಳಲ್ಲಿಯೂ ರಾಜಹಂಸದಂತೆ ತೂಗಾಡುತ್ತಿರುವ ಬಿಳೀ ಚಾಮರಗಳು! ತಲೆ ಯಮೇಲೆ ಚಂದ್ರಬಿಂಬಸಮಾನವಾದ ಬಿಳೀಕೊಡೆ! ಮುಖದಲ್ಲಿ ಸಮಸ್ತ ಲೋಕವನ್ನೂ ಉಲ್ಲಾಸಗೊಳಿಸತಕ್ಕ ಮುಗುಳ್ನಗೆ!ಇಂತಹ ದಿವ್ಯಾದ್ಭುತ ಸೌಂದರ್ಯ ವಿಶಿಷ್ಟನಾದ ಶ್ರೀಮಹಾವಿಷ್ಣುವು, ಗರುಡಾರೂಢನಾಗಿ ಬಂ ದು, ಸಭಾಮಧ್ಯದಲ್ಲಿ ನಿಂತನು. ಇದನ್ನು ಕಂಡೊಡನೆ, ಅಲ್ಲಿ ನೆರದಿದ್ದ ಬ್ರಹ್ಮರುದ್ರಾದಿದೇವತೆಗಳೂ, ಮಹರ್ಷಿಗಳೂ ಥಿಗ್ಗನೆ ಮೇಲಕ್ಕೆದ್ದು, ಜಯ ಜಯಶಬ್ದದೊಡನೆ ಮುಂದೆ ಬಂದು, ಆ ಭಗವಂತನ ಪಾದಪದ್ಮಗಳಿಗೆ ನಮಸ್ಕರಿಸಿದರು. ಮತ್ತು ಅಲ್ಲಿ ತಮ್ಮೆಲ್ಲರ ತೇಜಸ್ಸನ್ನೂ ತಿರಸ್ಕರಿಸುವಂತೆ ಕಾಂತಿಯಿಂದ ಬೆಳಗುತ್ತಿರುವ ಆ ಭಗವಂತನ ದಿವ್ಯಾಕೃತಿಯನ್ನು ಕಂಡೊ ಡನೆ, ಅವರೆಲ್ಲರೂ ಭಯಭಕ್ತಿಗಳಿಂದ ಮೈಮರತು, ಬಾಯೆತ್ತಿ ಮಾತಾಡ ಲಾರದೆ, ತಲೆಯಮೇಲೆ ಕೈಜೋಡಿಸಿ ಸ್ವಲ್ಪಹೊತ್ತಿನವರೆಗೆ ಹಾಗೆಯೇ ಸ್ತಬ್ಧರಾಗಿ ನಿಂತಿದ್ದರು. ಮನಸ್ಸಿನಿಂದ ಯೋಚಿಸಿ ತಿಳಿಯುವುದಕ್ಕೂ ಸಾಧ್ಯವಲ್ಲದ ಅಪಾರಮಹಿಮೆಯುಳ್ಳ ಆ ಭಗವಂತನು, ಆಶ್ರಿತರಕ್ಷಣೆಕ್ಕಾಗಿ ತಮ್ಮ ಕಣ್ಣಿದಿರಿಗೆ ಪ್ರತ್ಯಕ್ಷನಾಗಿ ಬಂದು ನಿಂತಿರುವುದನ್ನು ಕಂಡು,ಬ್ರಹ್ಮ ರುದ್ರಾದಿಗಳಲ್ಲಿ ಒಬ್ಬೊಬ್ಬರೂ ಕ್ರಮವಾಗಿ ಅವನನ್ನು ತಮಗೆ ತೋರಿದ

ಮಟ್ಟಿಗೆ ಸ್ತುತಿಸಲಾರಂಭಿಸಿದರು. ಅವರಲ್ಲಿ ಮೊದಲು ದಕ್ಷನು ಉತ್ತಮವಾದ ಪೂಜಾಸಾಮಗ್ರಿಗಳನ್ನು ತಂದು, ತಾನು ಇದುವರೆಗೆ ಪ್ರಯತ್ನಪೂರ್ವಕವಾಗಿ ಸಂಗ್ರಹಿಸಿದ ಧರ್ಮಸಾಧನಗಳಿಗಿಂತಲೂ ಉತ್ತಮಸಾಧನಭೂತನಾಗಿಯೂ, ಸೃಷ್ಟಿಕರ್ತರಾದ ಮರೀಚ್ಯಾದಿಗಳಿಗೂ ನಿಯಾಮಕನಾಗಿಯೂ, ಯಜ್ಞಪತಿಯಾಗಿಯೂ, ಸುನಂದ ನಂದಾದಿ ಮೊದಲಾದ ಅನುಚರರಿಂದ ಪರಿವೃತನಾಗಿಯೂ ಇದ್ದ ಆ ಭಗವಂತನಮುಂದೆ ಬಂದು ಬದ್ಧಾಂಜಲಿಯಾಗಿ ನಿಂತು ಸ್ತುತಿಸುವನು. “ಓ ದೇವಾ! ನೀನು ನಿನ್ನ ನಿಜಸ್ವರೂಪದಲ್ಲಿ ಮಾಯೆಯನ್ನು ನಿಗ್ರಹಿಸಿ ಕೇವಲ ಶುದ್ಧನಾಗಿರತಕ್ಕವನು. ಪುಣ್ಯಪಾಪರೂಪವಾದ ಕರ್ಮಸಂಬಂಧವಿಲ್ಲದವನು ಸ್ವತಂತ್ರನು! ರಾಗದ್ವೇಷಾದಿಮನೋವಿಕಾರಗಳಿಲ್ಲದ ಕೇವಲ ಶುದ್ಧಜ್ಞಾನಮಯನು. ತಾಪತ್ರಯಾದಿ ಭಯವಿಲ್ಲದವನು. ಹೀಗಿದ್ದರೂ ನೀನು, ಆಗಾಗ ಸ್ವೇಚ್ಛೆಯಿಂದ ಆ ಮಾಯೆಯನ್ನು ಪರಿಗ್ರಹಿಸಿ, ರಾಮಕೃಷ್ಣಾದಿರೂಪಗಳಿಂದ ಪುರುಷಾಕಾರವನ್ನು ಹೊಂದುವೆ! ನೀನು ಸ್ವತಂತ್ರನಾಗಿದ್ದರೂ ಆ ಮಾಯೆಯಲ್ಲಿ ಪ್ರವೇಶಿಸಿದಾಗ, ನೋಡುವವರಿಗೆ ಕರ್ಮಕ್ಕೆ ಕಟ್ಟುಬಿದ್ದವನಂತೆ ಕಾಣುವೆ! ವಾಸ್ತವದಲ್ಲಿ ನೋಡಿದರೆ ಆ ಪ್ರಕೃತಿದೋಷಗಳೊಂದಕ್ಕೂ ನೀನು ಈಡಾಗತಕ್ಕವನಲ್ಲ. ಇಂತಹ ಸರ್ವಶಕ್ತನಾದ ನಿನಗೆ ನಮಸ್ಕಾರವು, “ಎಂದು ನಮಸ್ಕರಿಸಿದನು.

ಆಮೇಲೆ ಋತ್ವಿಕ್ಕುಗಳು ಬದ್ಧಾಂಜಲಿಗಳಾಗಿ ಬಂದು ನಿಂತು, “ನಿಷ್ಕಳಂಕನಾದ ಓ ಪರಮಪುರುಷಾ! ನಾವು ನಂದೀಶ್ವರನ ಶಾಪದಿಂದ ಹೀಗೆ ಕರ್ಮಾನುಷ್ಠಾನದಲ್ಲಿ ವಿಶೇಷವಾದ ಆತುರವುಳ್ಳವರಾಗಿ, ನಿನ್ನ ವಿಷಯವಾದ ತತ್ವಜ್ಞಾನವನ್ನೇ ಮರೆತು ಬುದ್ಧಿಮೋಹಗೊಂಡಿರುವೆವು. ಅದರೇನು ? ಸತ್ವರಜಸ್ತಮೋಗುಣಗಳನ್ನನುಸರಿಸಿ, ವೇದಗಳಲ್ಲಿ ಹೇಳಲ್ಪಟ್ಟ ಯಾಗಾದಿಕರ್ಮಗಳಲ್ಲಿ ನಾವು ಪ್ರವರ್ತಿಸಿದರೂಕೂಡ, ನೀನೇ ಆಯಾ ಕರ್ಮಗಳಿಂದ ಆಯಾ ದೇವತೆಗಳ ಸ್ವರೂಪದಲ್ಲಿ ಆರಾಧಿಸಲ್ಪಡುತ್ತ, ಆಯಾ ಕರ್ಮಗಳಿಗೆ ತಕ್ಕ ಫಲವನ್ನೂ ಕೊಡುತ್ತಿರುವೆ. ಹೀಗೆ ಸರ್ವದೇವತಾತ್ಮಕನಾದ ನಿನ್ನಲ್ಲಿ ಮರೆಹೊಕ್ಕಿರುವೆವು”ಎಂದರು.

ಆಮೇಲೆ ಸಭಾಸದರು ಮುಂದೆ ಬಂದು ಕೈಮುಗಿದು, “ಎಲೈ ಲೋಕಶರಣ್ಯನೆ ! “ತಾನು, ತನ್ನದೆಂಬ” ದುರಭಿಮಾನಕ್ಕೆ ಪಾತ್ರಗಳಾದ ದೇಹವನ್ನೂ, ಪರಿವಾರಗಳನ್ನೂ ಹೊರಲಾರದ ತಲೆಹೊರೆಯಾಗಿ ಹೊತ್ತು ಕೊಂಡು, ನಡುನಡುವೆ ದುಃಖಸುಖಗಳೆಂಬ ಹಳ್ಳತಿಟ್ಟುಗಳಲ್ಲಿ ಬಿದ್ದೇಳುತ್ತ, ಸಂಸಾರಮಾರ್ಗದಲ್ಲಿ ತೊಳಲುವ ಮೂಢಜೀವಿಗಳ ದುರವಸ್ಥೆಯನ್ನು ಕೇಳಬೇಕೆ ? ಆ ಸಂಸಾರಮಾರ್ಗದಲ್ಲಿ ನಡುನಡುವೆ ಮಹಾವಿಪತ್ತುಗಳೆಂಬ ದುರ್ಗಗಳು ಅಡ್ಡಬರುವುವು! ಒಂದುಕಡೆಯಲ್ಲಿ ಯಮನೆಂಬ ಭಯಂಕರ ವಾದ ವಿಷಸರ್ಪವು ನುಂಗುವುದಕ್ಕೆ ಕಾದಿರುವುದು. ವಿಷಯಗಳೆಂಬ ಬಿಸಿ ಲೊದ್ದೆಗಳು ಮನಸ್ಸನ್ನು ಮೋಹಗೊಳಿಸಿ ತನ್ನ ಕಡೆಗೆ ಸೆಳೆದು ದಾರಿ ತಪ್ಪಿ ಸುತ್ತಿರುವುವು ದುರ್ಜನರೆಂಬ ಹುಲಿ, ಸಿಂಹ, ಕರಡಿ ಮುಂತಾದ ಕ್ರೂರ ಮೃಗಗಳು ಕಿತ್ತು ತಿನ್ನುವುದಕ್ಕಾಗಿ ಕಣ್ಣಿಟ್ಟು ಹೊಂಚುಹಾಕುತ್ತಿರುವುವು. ದುಃಖವೆಂಬ ದಾವಾಗ್ನಿಯು ಸುತ್ತಲೂ ಭಯಂಕರವಾಗಿ ವ್ಯಾಪಿಸಿ ಬರು ತ್ತಿರುವುದು ! ನಿನ್ನಲ್ಲಿ ವಿಮುಖರಾಗಿ, ಇಂತಹ ಭಯಂಕರವಾದ ಮಾರ್ಗ ದಲ್ಲಿ ಸಿಲ್ಲುವುದಕ್ಕೆ ನೆಳಲಿಲ್ಲದೆ ತೊಳಲುತ್ತಿರುವ ಮೂಢಾತ್ಮರಿಗೆ, ನಿನ್ನ ಪಾದಚ್ಛಾಯೆಯೆಂಬ ಕಲ್ಪವೃಕ್ಷದ ನೆಳಲು ಯಾವಾಗ ಸಿಕ್ಕುವುದೋ ಕಾಣೆವು” ಎಂದರು.

ಆಮೇಲೆ ರುದ್ರನು ಮುಂದೆ ಬಂದು ಬದ್ಧಾಂಜಲಿಯಾಗಿ “ಎಲೈ ವರಪ್ರದನೆ! ಕಾಮಿಗಳಿಗೆ ಸರ್ವಾಭೀಷ್ಟಗಳನ್ನೂ ಕೊಡತಕ್ಕುದಾಗಿಯೂ, ಸಮಸ್ತಜನಗಳಿಂದಲೂ ಪೂಜಿತವಾಗಿಯೂ, ಮೋಕ್ಷಾಪೇಕ್ಷೆಯುಳ್ಳ ಮಹ ನೀಯರಿಗೆ ಮೋಕ್ಷಪ್ರದವಾಗಿಯೂ ಇರುವ ನಿನ್ನ ಪಾದಪದ್ಮವೊಂದನ್ನೇ ನಂಬಿ, ಇತರಕರ್ಮಗಳಲ್ಲಿ ಮನಸ್ಸಿಡದ ನನ್ನನ್ನು ನೋಡಿ, ತಿಳಿಯದ ಮೂಢರು ಆಚಾರಹೀನನೆಂದು ನಿಂದಿಸುತ್ತಿರುವರು. ಹಾಗಿದ್ದರೂ ಅವರ ಪರಿಹಾಸವಾಕ್ಯಗಳಿಗೆ ನಾನು ಲಕ್ಷ್ಯಕೊಡತಕ್ಕವನಲ್ಲ ಆಶ್ರಿತವತ್ಸಲನಾದ ನಿನ್ನನ್ನು ಹಿಂಬಾಲಿಸುವುದೇ ನನಗೂ ಕರ್ತವ್ಯವಾದುದರಿಂದ, ನನ್ನಲ್ಲಿ ದ್ವೇಷಿಸತಕ್ಕವರನ್ನೂ, ನಾನು ಅನುಗ್ರಹಬುದ್ಧಿಯಿಂದಲೇ ನೋಡಬೇಕು.

ಹೀಗೆ ಸರ್ವವಿಧದಿಂದಲೂ ನಿನ್ನನ್ನೇ ನಂಬಿ, ನಿನ್ನಮಾರ್ಗವನ್ನೇ ಅನುಸರಿಸುತ್ತಿರುವ ನಮ್ಮಲ್ಲಿ ಪ್ರಸನ್ನನಾಗು!" ಎಂದನು.

ಆಮೇಲೆ ಭೃಗುಮಹರ್ಷಿಯು ಮುಂದೆ ಬಂದು ಕೈಜೋಡಿಸಿ, "ಓದೇವಾ ! ಬ್ರಹ್ಮಾದಿಸಮಸ್ತಜೀವಿಗಳೂ ನಿನ್ನ ಮಾಯೆಯಿಂದ ಮರೆಸಲ್ಪಟ್ಟು, ಆತ್ಮತತ್ವವನ್ನು ಮರೆತು, ತಮಸ್ಸಿನ ಕಾರ್ಯಗಳಾದ ಜನನಮರಣಾದಿಗಳಿಂದ ತುಂಬಿದ ಸಂಸಾರದಲ್ಲಿ ಪ್ರವರ್ತಿಸುತ್ತಿರುವರು.ಅಂತಹ ಬ್ರಹ್ಮಾದಿಗಳೇ ನಿನ್ನ ಮಾಯೆಯಿಂದ ಮೋಹಿತರಾಗಿ, ನಿನ್ನಸ್ವರೂಪವನ್ನು ತಿಳಿಯಲಾರದ ಮೇಲೆ, ನಮ್ಮಂತಹ ಅಲ್ಪರ ಪಾಡೇನು ? ಇದೋ! ನಿನ್ನ ಪಾದಗಳಿಗೆ ನಮಸ್ಕರಿಸುವೆನು! ಆಶ್ರಿತರ ತಪ್ಪನ್ನು ಮನ್ನಿಸಿ ಅವರ ದುಃಖವನ್ನು ನಿವಾರಿಸತಕ್ಕ ನೀನು, ನಮ್ಮ ಅಪರಾಧವನ್ನು ಮನ್ನಿಸಿ, ನನ್ನಲ್ಲಿ ಪ್ರಸನ್ನನಾಗಬೇಕು" ಎಂದನು.

ಆಮೇಲೆ ಬ್ರಹ್ಮನು ಮುಂದೆ ಬಂದು "ಹೇ ದೇವಾ ! ನಿನ್ನ ಈ ಸ್ವರೂಪವು ವಾಕ್ಕುಗಳಿಗಾಗಲಿ, ಮನಸ್ಸಿಗಾಗಲಿ ಅಗೋಚರವು. ಜೀವನು ಪ್ರಾಪಂಚಿಕವಾದ ಇತರಪದಾರ್ಥಗಳಲ್ಲಿರುವ ಪರಸ್ಪರಭೇದವನ್ನುಮಾತ್ರ ಗ್ರಹಿಸುವುದಕ್ಕೆ ಸಮರ್ಥಗಳಾದ ತನ್ನ ಇಂದ್ರಿಯಗಳಿಂದ ಇದನ್ನು ಕಂಡುಕೊಳ್ಳಲಾರನು. ಏಕೆಂದರೆ, ಜೀವನು ಮಾಯೆಯ ಸಂಬಂಧವಾದ ಇಂದ್ರಿಯಗಳಿಗೂ, ಶಬ್ದಾದಿವಿಷಯಗಳಿಗೂ, ಅವೆರಡಕ್ಕೂ ಕಾರಣಗಳಾದ ಸತ್ವಾದಿಗುಣಗಳಿಗೂ ಆಶ್ರಯವಾದ ದೇಹದಲ್ಲಿ ಕಟ್ಟುಬಿದ್ದಿರುವನು ನೀನಾದರೋ ಅಸತ್ತಾದ ಆ ದೇಹಾದಿಗಳಿಗಿಂತಲೂ, ಆ ದೇಹಸಂಬಂಧವುಳ್ಳ ಜೀವನಿಗಿಂತಲೂ ಬೇರ್ಪಟ್ಟವನು. ಹೀಗೆ ಪ್ರಕೃತಿಪುರುಷವಿಲಕ್ಷಣನಾದ ನಿನ್ನನ್ನು, ಪ್ರಾಕೃತವಾದ ಯಾವ ಇಂದ್ರಿಯದಿಂದಲೂ ಗ್ರಹಿಸುವುದು ಸಾಧ್ಯವಲ್ಲ!" ಎಂದನು.

ಆಮೇಲೆ ಇಂದ್ರನು ಮುಂದೆ ಬಂದು "ಹೇ ಅಚ್ಯುತಾ ! ಲೋಕದಲ್ಲಿ ದುಷ್ಟರನ್ನು ನಿಗ್ರಹಿಸಿ ಧರ್ಮಸಂಸ್ಥಾಪನವನ್ನು ಮಾಡುವುದೇ ನಿನ್ನ ಮುಖ್ಯವ್ರತವು. ನೀನು ನಮ್ಮ ವೈರಿಗಳಾದ ರಾಕ್ಷಸರನ್ನು ನಿಗ್ರಹಿಸುವುದಕ್ಕಾಗಿ, ಒಂದೊಂದುಭುಜದಲ್ಲಿ ಒಂದೊಂದಾಯುಧವನ್ನು ಹಿಡಿದು, ಅಷ್ಟ

ಭುಜಗಳಿಂದ ಕೂಡಿದ್ದರೂ, ನಮ್ಮೆಲ್ಲರಕಣ್ಣುಗಳಿಗೂ ಮನಸ್ಸಿಗೂ ಮೇಲೆ ಮೇಲೆ ಆನಂದವನ್ನೇ ಹೆಚ್ಚಿಸುತ್ತಿರುವೆ! ಹೀಗೆ ಧರ್ಮಸಂಸ್ಥಾಪನೆಗಾಗಿ ನಾನಾರೂಪಗಳನ್ನು ಧರಿಸತಕ್ಕ ನಿನ್ನ ಪಾದಗಳನ್ನು ಮರೆಹುಗುವೆನು" ಎಂದನು.

ಆಮೇಲೆ ಅಲ್ಲಿದ್ದ ಋತ್ವಿಕ್ಪತ್ನಿಯರು ಮುಂದೆ ಬಂದು ಕೈಮುಗಿದು "ಹೇದೇವಾ! ನೀನೇ ಯಜ್ಞಸ್ವರೂಪನು. ನಮ್ಮ ಪಿತಾಮಹನಾದ ಈ ಚತುರ್ಮುಖನು ನಿನ್ನ ಆರಾಧನಕ್ಕಾಗಿಯೇ ಈ ಯಜ್ಞವನ್ನು ಏರ್ಪಡಿಸಿರುವನು. ಅದರಂತೆ ನಿನ್ನ ಪ್ರೀತ್ಯರ್ಥವಾಗಿ ಉಪಕ್ರಮಿಸಿದ ಈ ಯಜ್ಞವನ್ನು, ರುದ್ರನು ತನ್ನ ಮಾವನಾದ ದಕ್ಷನಲ್ಲಿ ಕೋಪದಿಂದ ಅರ್ಧದಲ್ಲಿ ಕೆಡಿಸಿ ಬಿಟ್ಟಿರುವನು ಆ ರುದ್ರನ ಕೋಪಕ್ಕೀಡಾಗಿ ಶ್ಮಶಾನಭೂಮಿಯಂತೆ ಹಾಳುಬಿದ್ದು ಕಳೆಗುಂದಿರುವ ಈ ಯಜ್ಞಶಾಲೆಯನ್ನು, ನೀನು ಕಮಲದಳದಂತಿರುವ ನಿನ್ನ ಕರುಣಾವಲೋಕನದಿಂದ ನೋಡಿ, ಪವಿತ್ರಮಾಡಿ,ನಮ್ಮನ್ನುದ್ಧರಿಸಬೇಕು. ಯಜ್ಞರೂಪಿಯಾದ ನಿನ್ನಲ್ಲಿ ಮರೆಹುಗುವೆವು." ಎಂದರು.

ಆಮೇಲೆ ಋಷಿಗಳೆಲ್ಲರೂ ಮುಂದೆ ಬಂದು ಕೈಮುಗಿದು. "ಓ ಭಗವಂತಾ! ನಿನ್ನ ಆಶ್ಚರ್ಯಚರಿತ್ರಗಳನ್ನು ನಾವು ಹೀಗೆಂದು ನಿರ್ಣಯಿಸಲಾರೆವು! ನೀನು ಆಗಾಗ ಜೀವನಂತೆ ಬೇರೆಬೇರೆ ಶರೀರಗಳಲ್ಲಿ ಪ್ರವೇಶಿಸಿ, ಪುಣ್ಯಪಾಪರೂಪಗಳಾದ ಕರ್ಮಗಳನ್ನು ನಡೆಸುತಿದ್ದರೂ, ಅದರ ಫಲಗಳಿಗೆ ಮಾತ್ರ ಭಾಗಿಯಾಗದಿರುವೆ. ಬ್ರಹ್ಮಾದಿದೇವತೆಗಳೂ ಕೂಡ ಉತ್ತಮಪದವಿಯನ್ನಪೇಕ್ಷಿಸಿ ಯಾವಳ ಅನುಗ್ರಹಲೇಶಕ್ಕಾಗಿ, ಎಷ್ಟೋಪ್ರಮಪಟ್ಟು ಸೇವಿಸುತ್ತಿರುವರೋ, ಅಂತಹ ಮಹಾಲಕ್ಷ್ಮಿಯು ತಾನಾಗಿಯೇ ಬಂದು ನಿನ್ನ ಕಾಲುಗಳನ್ನೊತ್ತಿ, ನಿನ್ನನ್ನು ಅನುವರ್ತಿಸಿ, ಸೇವಿಸುತಿದ್ದರೂ,ಪೂರ್ಣಕಾಮನಾದ ನೀನು ಅವಳನ್ನೂ ಆದರಿಸದಿರುವೆ ! ಇಂತಹ ಆಶ್ಚರ್ಯಚರಿತ್ರವುಳ್ಳ ನಿನ್ನಪಾದಗಳನ್ನು ಮರೆಹುಗುವೆವು," ಎಂದರು.

ಆಮೇಲೆ ಸಿದ್ಧರು ಮುಂದೆ ಬಂದು ಬದ್ಧಾಂಜಲಿಗಳಾಗಿ ನಿಂತು "ದೇವಾ! ಈ ನಮ್ಮ ಮನಸ್ಸೆಂಬ ಮದಿಸಿದ ಕಾಡಾನೆಯು,ಇದುವರೆಗೆ ಎಷ್ಟೋ ಕ್ಲೇಶಗಳೆಂಬ ಕಾಡುಗಿಚ್ಚಿನಲ್ಲಿ ಸಿಕ್ಕಿ ಬೆಂದು, ಬಾಯಾರಿಕೆಯಿಂದ ನೊಂದು,ಈಗ ನಿನ್ನ ಪುಣ್ಯಕಥೆಗಳೆಂಬ ಅಮೃತನದಿಯಲ್ಲಿ ಮುಳುಗಿರುವುದು,

ಈಗ ಸಂಸಾರತಾಪವೆಂಬ ಆ ಕಾಡುಗಿಚ್ಚಿನ ಬೇಗೆಯನ್ನು ಮರೆತು,ಅಲ್ಲಿಂದ ಹಿಂತಿರುಗುವುದಕ್ಕೆ ಇಷ್ಟವಿಲ್ಲದೆ, ಬ್ರಹ್ಮಾನಂದವನ್ನನುಭವಿಸುವಂತೆ ಸುಖದಿಂದಿರುವುದು. ಇಂತಹ ಪುಣ್ಯಶ್ಲೋಕನಾದ ನಿನ್ನ ಪಾದಗಳನ್ನು ಮರೆಹೊಗುವೆವು." ಎಂದರು.

ಆಮೇಲೆ ದಕ್ಷಪತ್ನಿಯು ಮುಂದೆ ಬಂದು ಕೈಮುಗಿದು. "ಓ ಸರ್ವೇಶ್ವರಾ ! ನಿನಗೆ ಸುಖಾಗಮನವಾಗಲಿ! ನನ್ನಲ್ಲಿ ಪ್ರಸನ್ನನಾಗು! ಹೇ ಶ್ರೀನಿವಾಸಾ ! ತಲೆಯಿಲ್ಲದೆ ಮುಂಡದಿಂದ ಮಾತ್ರವೇ ಉಳಿದಿರುವ ಪುರುಷನಂತೆ, ಈ ಯಜ್ಞದಲ್ಲಿ ಬೇರೆ ಅಂಗಗಳೆಲ್ಲವೂ ಪೂರ್ಣವಾಗಿದ್ದರೂ ನೀನಿಲ್ಲದೆ ಇದು ಶೋಭಿಸಲಾರದು. ಆದುದರಿಂದ ನೀನು ಲಕ್ಷ್ಮೀಸಮೇತನಾಗಿ ಇಲ್ಲಿಯೇ ನಿಂತು ಯಜ್ಞವನ್ನು ಪೂರ್ತಿಗೊಳಿಸಿ ನಮ್ಮನ್ನುದ್ಧರಿಸಬೇಕು." ಎಂದಳು.

ಆಮೇಲೆ ಲೋಕಪಾಲಕರೆಲ್ಲರೂ ಮುಂದೆ ಬಂದು ಕೈಮುಗಿದು "ದೇವಾ!ನಿನ್ನ ಸೌಲಭ್ಯಗುಣವನ್ನು ನಾವೇನೆಂದು ಹೇಳಲಿ!ನಿನ್ನ ಸ್ವರೂಪಸ್ವಭಾವಗಳು ಕಣ್ಣಿಗಾಗಲಿ ಮನಸ್ಸಿಗಾಗಲಿ ಗೋಚರಿಸತಕ್ಕವುಗಳಲ್ಲ.ಅಂತಹ ನೀನು ಕೇವಲಚರ್ಮಮಯವಾದ ಈ ನಮ್ಮ ಕಣ್ಣುಗಳಮುಂದೆ ಗೋಚರಿಸಿದೆಯಲ್ಲವೆ? ಇದಕ್ಕೆ ಆಶ್ರಿತಸುಲಭನಾದ ನಿನ್ನ ಸಂಕಲ್ಪವು ಕಾರಣವೇ ಹೊರತು,ನಮ್ಮ ಶಕ್ತಿಯಲ್ಲ!ಪ್ರಾಣಿಗಳು ದೇಹದಲ್ಲಿಯೂ,ಇತರ ಪರಿವಾರಗಳಲ್ಲಿಯೂ "ನಾನು,ನನ್ನದು"ಎಂಬ ಅಹಂಕಾರಮಮಕಾರಗಳನಿಟ್ಟು, ದೇಹವನ್ನೇ ಆತ್ಮವೆಂದು ಭ್ರಮಿಸುವುದಕ್ಕೂ ನಿನ್ನ ಮಾಯೆಯೇ ಕಾರಣವು ! ಮತ್ತು ಪ್ರಕೃತಿಪುರುಷರಿಗಿಂತಲೂ ವಿಲಕ್ಷಣನಾದ ನೀನು, ಪಂಚಭೂತಾತ್ಮಕವಾದ ದೇಹದಲ್ಲಿ ಸೇರಿ, ಜೀವನಂತೆ ತೋರುವುದಕ್ಕೂನಿನ್ನಮಾಯೆಯೇ ಕಾರಣವು. ಹೀಗೆ ಸರ್ವವಿಧದಲ್ಲಿಯೂ ಸತ್ಯಸಂಕಲ್ಪನಾದ ನಿನ್ನನ್ನು ಮರೆಹುಗುವೆವು" ಎಂದರು.

ಆಮೇಲೆ ಯೋಗೀಶ್ವರರು ಮುಂದೆ ಬಂದು ಕೈಮುಗಿದು "ಹೇ ಪ್ರಭೂ ! ನೀನು ಸಮಸ್ತಚೇತನಾಚೇತನಗಳಲ್ಲಿಯೂ ಒಳಹೊಕ್ಕಿರುವವನು. ಹಾಗಿದ್ದರೂ ಅವುಗಳ ದೋಷವನ್ನಂಟಿಸಿಕೊಳ್ಳದೆ ಅವುಗಳಿಗಿಂತಲೂ ವಿಲಕ್ಷಣನಾಗಿ, ಅವುಗಳನ್ನು ಧರಿಸಿಕೊಂಡಿರತಕ್ಕವನು. ಯಾವ ಚೇತ

ನನು ಈ ತತ್ವವನ್ನು ತಿಳಿದು, ತನಗಿಂತಲೂ ನೀನು ಬೇರ್ಪಟ್ಟವನಲ್ಲವೆಂದೂ, ತನ್ನಲ್ಲಿ ನೀನು ಅಂತರಾತ್ಮನೆಂದೂ,ನಿನಗೆ ತಾನು ಅಧೀನನಾಗಿಯೂ, ಶರೀರವಾಗಿಯೂ ಇರುವೆನೆಂದೂ ಎಣಿಸುವನೋ, ಅಂತವನೇ ತತ್ವಜ್ಞಾನವುಳ್ಳ ಯೋಗಿಯೆನಿಸುವನು. ಅಂತಹ!ಯೋಗಿಗಿಂತಲೂ ನಿನಗೆ ಪ್ರಿಯತಮನಾದವನು ಬೇರೊಬ್ಬನಿಲ್ಲ. ಈನಿಜಸ್ಥಿತಿಯನ್ನು ತಿಳಿಯದೆ,ಯಾರು ತನಗಿಂತಲೂ ನಿನ್ನನ್ನು ಬೇರೆಯಾಗಿ ಭಾವಿಸಿ, ನಿನ್ನನ್ನು ಸ್ವಾಮಿಯೆಂದೂ, ತನ್ನನ್ನು ಭೃತ್ಯನೆಂದೂ ಭಾವಿಸುವರೋ, ಇಂತವರನ್ನು ತತ್ವಜ್ಞರಲ್ಲವೆಂದು ಹೇಳಬಹುದು. ಈ ಸ್ವಾಮಿಭೃತ್ಯಭಾವದಿಂದ ಕಾಣುವವರನ್ನುಕೂಡ ನೀನು ಅನುಗ್ರಹಿಸದೆ ಬಿಡಲಾರೆ ! ಇದಕ್ಕೆ ನಿನ್ನ ಆಶ್ರಿತವಾತ್ಸಲ್ಯವೇ ಕಾರಣವು. ಇಂತಹ ಕೃಪಾಳುವಾದ ನೀನು ನಮ್ಮನ್ನು ರಕ್ಷಿಸಬೇಕು. ಹೇ ದೇವಾ ! ನೀನು ನಿನ್ನ ಸಂಕಲ್ಪದಿಂದಲೇ ಸತ್ವಾದಿಗುಣಗಳನ್ನು ಮುಂದಿಟ್ಟುಕೊಂಡು, ಬ್ರಹ್ಮರುದ್ರಾದಿರೂಪದಿಂದ ಲೋಕದ ಸೃಷ್ಟಿಸಂಹಾರಾದಿಗಳನ್ನು ನಡೆಸತಕ್ಕವನು. ಸತ್ವಾದಿಗುಣಗಳ ತಾರತಮ್ಯದಿಂದ ದೇವಮನುಷ್ಯಾದಿಗಳಂತೆಯೂ, ಪಶುಪಕ್ಷಿ ಮೊದಲಾದುವಂತೆಯೂ, ಗಿಡಬಳ್ಳಿಗಳಂತೆಯೂ ಪರಿಣಮಿಸಿರುವ ಪ್ರಕೃತಿಯ ಭೇದಗಳೆಲ್ಲವೂ,ನಿನ್ನ ಸಂಕಲ್ಪದಿಂದಲೇ ಉಂಟಾಗಿ, ನಿನಗೆ ಶರೀರವಾಗಿರುವುವು. ಹೀಗೆ ನೀನು ನಿನ್ನ ಸಂಕಲ್ಪದಿಂದ ನಿನ್ನಲ್ಲಿಯೇ ಅನೇಕರೂಪ ಭೇದಗಳನ್ನು ತೋರಿಸಿ,ಅವುಗಳೊಳಗೆಲ್ಲಾ ಅಂತರ್ಯಾಮಿಯಾಗಿದ್ದರೂ, ಆ ಭೇದಭ್ರಾಂತಿಯನ್ನು ಹುಟ್ಟಿಸತಕ್ಕ ತಮಸ್ಸು, ರಜಸ್ಸು ಮೊದಲಾದ ಗುಣಗಳಿಗೆ ಈಡಾಗದೆ ವರ್ತಿಸುತ್ತಿರುವೆ. ಇಂತಹ ನಿರ್ದುಷ್ಟನಾದ ನಿನಗೆ ನಮಸ್ಕಾರವು.” ಎಂದರು.

ಆಮೇಲೆ ಶಬ್ದಬ್ರಹ್ಮವೆಂದೆನಿಸಿಕೊಳ್ಳುವ ವೇದಪುರುಷನು ಮುಂದೆ ಬಂದು “ಹೇ ದೇವಾ! ನೀನೇ ಮೊದಲು ಬ್ರಹ್ಮನಿಗೆ ವೇದಗಳನ್ನುಪದೇಶಿಸಿ ಆಮೂಲಕವಾಗಿ ಧರ್ಮಾರ್ಥಗಳೇಮೊದಲಾದಪುರುಷಾರ್ಥಗಳನ್ನು ಪ್ರಕಾಶಗೊಳಿಸಿದವನು.ಮತ್ತು ನೀನು ಹೇಯಗುಣವಿಲ್ಲದೆ,ಸಮಸ್ತಕಲ್ಯಾಣಗುಣಗಳಿಂದ ತುಂಬಿದವನು. ನಾವಾಗಲಿ, ಬ್ರಹ್ಮಾದಿದೇವತೆಗಳಾಗಲಿ, ನಿನ್ನ ಗು

ಣಾತಿಶಯಗಳನ್ನು ಹೀಗೆಂದು ನಿರ್ಣಯಿಸಲಾರೆವು. ಇಂತಹ ಅಪಾರಮಹಿಮೆಯುಳ್ಳ ನಿನ್ನ ಪಾದಗಳಿಗೆ ವಂದಿಸುವೆವು.” ಎಂದನು.

ಆಮೇಲೆ ಅಗ್ನಿಯು ಮುಂದೆ ಬಂದು “ದೇವಾ! ನಿನ್ನ ತೇಜಸ್ಸಿನಿಂದಲೇ ನಾನು ಬೆಳಗುತ್ತಿರುವೆನು. ಮತ್ತು ನಿನ್ನ ಆಜ್ಞಾಧೀನನಾಗಿ ಯಜ್ಞದಲ್ಲಿ ದೇವತೆಗಳಿಗಾಗಿ ಹೋಮಮಾಡಿದ ಹವಿಸ್ಸನ್ನು ಅವರವರಿಗೆ ಸಲ್ಲಿಸುತ್ತಿರುವೆನು. ಯಜ್ಞಗಳಲ್ಲಿ (ಆಶ್ರಾವಯ, ಅಸ್ತುಶ್ರೌಷಟ್, ಯಜ, ಯೇಯಜಾಮಹೇ, ವಷಟ್) ಎಂಬ ಐದು ಬಗೆಯ ಯಜ್ಞಮಂತ್ರಗಳಿಂದ ಪೂಜಿಸಲ್ಪಡತಕ್ಕವನೂ ನೀನೇ! ಮತ್ತು ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ, ಸಭ್ಯ, ಅವಸಥ್ಯವೆಂಬ ಪಂಚಾಗ್ನಿಗಳೂ ನೀನಲ್ಲದೆ ಬೇರೆಯಲ್ಲ! ಇಂತಹ ಯಜ್ಞಸ್ವರೂಪನಾದ ನಿನಗೆ ವಂದಿಸುವೆನು” ಎಂದನು.

ಆಮೇಲೆ ದೇವತೆಗಳು ಮುಂದೆ ಬಂದು ಕೈಮುಗಿದು “ಹೇ ದೇವಾ! ನೀನು ಸೃಷ್ಟಿಗೆ ಮೊದಲು ಕಲ್ಪಾಂತದಲ್ಲಿ, ಇದೋ! ಇಲ್ಲಿ ನಿನ್ನಿಂದ ಚಿತ್ರವಿಚಿತ್ರವಾಗಿ ಸೃಷ್ಟಿಸಲ್ಪಟ್ಟಿರುವ ಈ ಸಮಸ್ತಪ್ರಪಂಚವನ್ನೂ ಜಠರದಲ್ಲಿ ಅಡಗಿಸಿಟ್ಟುಕೊಂಡು, ಸಮುದ್ರಮಧ್ಯದಲ್ಲಿ ಶೇಷಶಾಯಿಯಾಗಿ ಮಲಗಿದ್ದವನು. ಜಗತ್ಕಾರಣನಾದ ಈ ನಿನ್ನ ಸ್ವರೂಪವನ್ನು ತಿಳಿಯಬೇಕೆಂದರೆ ಯೋಗಸಿದ್ಧರಿಗಲ್ಲದೆ ಇತರರಿಗೆ ಸಾಧ್ಯವಲ್ಲ. ಇಂತಹ ನೀನು ಈಗ ನಮ್ಮ ಕಣ್ಣುಮುಂದೆ ನೀನಾಗಿಯೇ ಬಂದು ನಿಂತೆಯಲ್ಲವೆ! ಇದೇವಿಧವಾದ ಸೌಲಭ್ಯದಿಂದ ಎಂದೆಂದಿಗೂ ನಮ್ಮನ್ನು ಕಾಪಾಡುತ್ತಿರಬೇಕು” ಎಂದರು.

ಆಮೇಲೆ ಗಂಧರ್ವರು ಮುಂದೆ ಬಂದು ಕೈಮುಗಿದು “ದೇವಾ! ಮರೀಚಿ ಮೊದಲಾದ ಪ್ರಜಾಧಿಪತಿಗಳೂ, ಬ್ರಹ್ಮೇಂದ್ರರುದ್ರಾದಿದೇವತೆಗಳೂ ನಿನ್ನ ಅಂಶಾಂಶದಿಂದ ಹುಟ್ಟಿದವರು. ಮತ್ತು ಈ ಬ್ರಹ್ಮಾಂಡವೇವೊತ್ತಕ್ಕೆ ನಿನಗೆ ಕ್ರೀಡಾಸಾಮಗ್ರಿಯಾಗಿರುವುದು. ನೀನು ಈ ಸಮಸ್ತಜಗತ್ತಿನ ಒಳಗೂ ಹೊರಗೂ ವ್ಯಾಪಿಸಿರುವವನು. ಹೀಗೆ ಸರ್ವಜಗತ್ಕಾರಣನಾಗಿ, ಸರ್ವವ್ಯಾಪಿಯಾದ ನಿನಗೆ ನಮಸ್ಕಾರವು” ಎಂದರು.

ಆಮೇಲೆ ವಿದ್ಯಾಧರರು ಮುಂದೆ ಬಂದು "ಹೇ ದೇವಾ! ಜೀವನಿಗೆ ದೇವಮನುಷ್ಯಾದಿ ಶರೀರಗಳೆಲ್ಲವೂ ನಿನ್ನ ಸಂಕಲ್ಪದಿಂದಲೇ ಬರುವುವು. ಆ ಶರೀರವನ್ನು ಹೊಂದಿದೊಡನೆ ಜೀವನು "ನಾನು, ನನ್ನದು"ಎಂಬ ದುರಭಿಮಾನದಿಂದ ಬೀಗಿ ಬೆರೆಯುತ್ತಿರುವನು. ಶಬ್ದಾದಿವಿಷಯಗಳಲ್ಲಿ ಆಸೆಪಟ್ಟು ಅದರಿಂದ ಸುಖದುಃಖಗಳಲ್ಲಿ ತೊಳಲುವನು. ವೇದಮಾರ್ಗಗಳನ್ನೂ,ಲೋಕಮರ್ಯಾದೆಗಳನ್ನೂ ಉಲ್ಲಂಘಿಸುವನು. ಮನಸ್ಸುಬಂದಹಾಗೆ ದುರ್ಮಾರ್ಗದಲ್ಲಿ ಪ್ರವರ್ತಿಸುವ ತನ್ನ ಪರಿವಾರಗಳಿಂದಲೇ ತಾನು ತಿರಸ್ಕಾರ ಹೊಂದುವನು. ತಾನೂ ವಿಷಯಾಭಿಲಾಷೆಯಲ್ಲಿ ಮಗ್ನನಾಗುವನು. ಹೀಗೆ ಸರ್ವವಿಧದಲ್ಲಿಯೂ ಕೆಟ್ಟುಹೋದ ಜೀವನೂಕೂಡ, ಒಂದಾವರ್ತಿ ನಿನ್ನ ಕಥಾಮೃತವನ್ನನುಭವಿಸಿದ ಮಾತ್ರಕ್ಕೆ, ಆ ಶೋಕಮೋಹಾದಿಗಳೊಂದಕ್ಕೂ ಈಡಾಗದೆ,ಉತ್ತಮಸುಖವನ್ನು ಹೊಂದುವನು. ಆಹಾ ! ಇದಲ್ಲವೇ ಆಶ್ಚರ್ಯವು.ಇಂತಹ ಪುಣ್ಯಶ್ಲೋಕನಾದ ನಿನಗೆ ನಮಸ್ಕರಿಸುವೆವು" ಎಂದರು.

ಆಮೇಲೆ ಬ್ರಾಹ್ಮಣರೆಲ್ಲರೂ ಮುಂದೆ ಬಂದು, "ಹೇ ಜಗದೀಶಾ ! ನೀನೇ ಯಜ್ಞಸ್ವರೂಪನು ! ಯಜ್ಞದಲ್ಲಿ ಕೊಡತಕ್ಕ ಹವಿಸ್ಸೂ ನೀನೇ ! ಹೋಮಮಾಡಿದ ಹವಿಸ್ಸನ್ನು ಗ್ರಹಿಸತಕ್ಕ ತ್ರೇತಾಗ್ನಿಯೂ ನೀನೇ! ಯಜ್ಞಮಂತ್ರಗಳೂ ನೀನೇ!ಸಮಿತ್ತು,ದರ್ಭೆ ಮುಂತಾದ ಯಾಗಸಾಮಗ್ರಿಗಳೂ ನೀನೇ!ಈ ಯಾಗಸಭೆಯಲ್ಲಿರುವ ಸಭಿಕರೂ,ಋತ್ವಿಕ್ಕುಗಳೂ,ಯಜ್ಞದೀಕ್ಷಿತರಾದ ದಂಪತಿಗಳೂ ನೀನಲ್ಲದೆ ಬೇರೆಯಲ್ಲ!ಈ ಯಾಗದ ಮೂಲಕವಾಗಿ ಆರಾಧಿಸಲ್ಪಡತಕ್ಕ ದೇವತೆಯೂ ನೀನೇ!ಅಗ್ನಿಹೋತ್ರವೆಂಬ ಹೋಮವೂ ನೀನೇ!ಸ್ವಧೆ, ಸೋಮಲತೆ, ಆಜ್ಯ, ಯಾಗಪಶು, ಮುಂತಾದ ಯಜ್ಞಸಾಧನಗಳೂ ನೀನೇ ! ನೀನು ಕಲ್ಪಾರಂಭದಲ್ಲಿ ಶ್ವೇತವರಾಹರೂಪವನ್ನುತಾಳಿ, ಮದದಾನೆಯು ಕೊಳದಲ್ಲಿರುವ ಕಮಲವನ್ನು ಕಿತ್ತುತರುವಂತೆ ಪಾತಾಳದಿಂದ ಭೂಮಿಯನ್ನುದ್ಧರಿಸಿತಂದು,ಸಮಸ್ತ ಯೋಗಿಗಳಿಂದಲೂ ಕೀರ್ತಿಸಲ್ಪಟ್ಟವನಲ್ಲವೆ?ವೇದಸ್ವರೂಪನಾದ ನೀನಲ್ಲವೇ ಈ ಯಜ್ಞಾದಿ ಕರ್ಮಗಳಿಗೆ ಮುಖ್ಯಸ್ಥಾನವಾದ ಭೂಮಿಯನ್ನುದ್ಧರಿಸಿ ಯಜ್ಞವರಾಹನೆಂಬ ಹೆಸರಿನಿಂದ ಪ್ರಸಿದ್ಧನಾದೆ!ಹೇ ದೇವಾ!ನಿನ್ನ ಪ್ರೀತ್ಯರ್ಥವಾಗಿಯೇ ನಾವು

ಈ ಯಾಗವನ್ನಾರಂಭಿಸಿರುವೆವು. ಈ ಯಾಗಕ್ಕೆ ನಡುವೆ ವಿಘ್ನಗಳುಂಟಾಗಿ ಅದರಿಂದ ಕರ್ಮಭ್ರಷ್ಟರಾಗಿರುವೆವು. ಅದನ್ನು ನಿರ್ವಿಘ್ನವಾಗಿ ನಡೆಸಬೇಕೆಂಬುದಕ್ಕಾಗಿಯೇ ಈಗ ನಿನ್ನ ದರ್ಶನವನ್ನಪೇಕ್ಷಿಸಿದೆವು. ನಮ್ಮ ಕಾರ್ಯವನ್ನು ಪೂರ್ತಿಗೊಳಿಸಿ ರಕ್ಷಿಸಬೇಕು. ನಿನ್ನ ನಾಮೋಚ್ಚಾರಣಮಾತ್ರದಿಂದಲೇ ಯಜ್ಞವಿಘ್ನಗಳೆಲ್ಲವೂ ನಾಶವಾಗುವುವು. ಅಂತಹ ಮಹಾತ್ಮನಾದ ನಿನ್ನನ್ನು ನಾವು ನಮಸ್ಕರಿಸುವೆವು" ಎಂದರು.

ವಿದುರಾ! ಹೀಗೆ ಭಗವಂತನನ್ನು ಒಬ್ಬೊಬ್ಬರೂ ಬದ್ಧಾಂಜಲಿಗಳಾಗಿ ಸ್ತೋತ್ರಮಾಡುತ್ತಿರುವಾಗ, ದಕ್ಷನು ರುದ್ರನಿಂದ ನಷ್ಟವಾದ ಆ ಯಾಗವನ್ನು ಪುನಃ ಆರಂಭಿಸಿ, ರುದ್ರನೇ ಮೊದಲಾದ ಆಯಾ ದೇವತೆಗಳಿಗೆ ಸಲ್ಲಿಸತಕ್ಕ ಹವಿರ್ಭಾಗಗಳೆಲ್ಲವನ್ನೂ ಕ್ರಮವಾಗಿ ಸಲ್ಲಿಸಿ, ಯಜ್ಞವನ್ನು ಪೂರ್ತಿಗೊಳಿಸಿದನು. ಸರ್ವಾಂತರ್ಯಾಮಿಯಾದ ಶ್ರೀಮನ್ನಾರಾಯಣನು, ಅಲ್ಲಿ ಇಂದ್ರಾದಿದೇವತೆಗಳಿಗೆ ಕೊಡತಕ್ಕ ಎಲ್ಲಾ ಹವಿರ್ಭಾಗಗಳನ್ನೂ ತಾನೇ ಭುಜಿಸತಕ್ಕವನಾಗಿದ್ದರೂ, ಆ ಯಜ್ಞದಲ್ಲಿ ತನ್ನ ಹೆಸರಿನಿಂದ ಪ್ರತ್ಯೇಕವಾಗಿ ಕೊಡತಕ್ಕ ತ್ರಿಕಪಾಲವೆಂಬ ಪುರೋಡಾಶವನ್ನುಮಾತ್ರ ಸಂತೋಷಪೂರ್ವಕವಾಗಿ ಕೈಕೊಂಡಂತೆ ನಟಿಸುತ್ತ, ಯಜ್ಞದೀಕ್ಷಿತನಾದ ದಕ್ಷನನ್ನು ಕರೆದು ಹೀಗೆಂದು ಹೇಳುವನು. "ಎಲೈ ಬ್ರಾಹ್ಮಣೋತ್ತಮನೆ! ಒಂದು ಮುಖ್ಯಾಂಶವನ್ನು ನಿನಗೆ ತಿಳಿಸುವೆನು ಕೇಳು. ಇದುವರೆಗೆ ನಿಮ್ಮಿಂದ ಅನೇಕವಿಧವಾಗಿ ಸ್ತುತಿಸಲ್ಪಟ್ಟ ನಾನಾಗಲಿ, ಈ ಬ್ರಹ್ಮನಾಗಲಿ, ಈ ರುದ್ರನಾಗಲಿ ಬೇರೆಯಲ್ಲ. ನಾನೇ ಈ ಬ್ರಹ್ಮನಾಗಿ ಲೋಕವನ್ನು ಸೃಷ್ಟಿಸುವೆನು. ನಾನೇ ಸ್ವಯಮಾಗಿಯೂ, ಇತರರಾಜರ ಮೂಲಕವಾಗಿಯೂ ಲೋಕಗಳನ್ನು ರಕ್ಷಿಸುತ್ತಿರುವೆನು. ಕೊನೆಗೆ ಈ ರುದ್ರನಲ್ಲಿ ಅಂತರ್ಯಾಮಿಯಾಗಿ ಲೋಕಗಳನ್ನು ಸಂಹರಿಸುವೆನು. ಹೀಗೆ ನಾವು ಮೂವರೂ ಸೃಷ್ಟಿಸ್ಥಿತಿ ಸಂಹಾರ ಕಾರ್ಯಗಳಿಂದ ಜಗತ್ಕಾರಣರಾಗಿರುವೆವು.* ನನಗೆ ನಾನೇ ಪ್ರಭುವೇಹೊರತು

* ಇಲ್ಲಿ "ಅಹಂ ಬ್ರಹ್ಮಾ ಚ ವಿಷ್ಣುಶ್ಚ ಜಗತಃ ಕಾರಣಂ ಪರಮ್" ಎಂದು ಮೂಲವು. ಇದರಿಂದ ಬ್ರಹ್ಮರುದ್ರರುಕೂಡ ಜಗತ್ತಿಗೆ ಕಾರಣಭೂತರೆಂದು ಹೇಳಿದ ಮಾತ್ರಕ್ಕೆ ಅವರಿಗೆ ಸರ್ವಶಕ್ತಿತ್ವ ಸರ್ವಜ್ಞತ್ವಾದಿಗಳೆಲ್ಲವೂ ಉಂಟೆಂದು ಭಾವಿಸಬಾ

ನನಗೆ ಮೇಲಾದವನು ಬೇರೊಬ್ಬನಿಲ್ಲ. ಸಮಸ್ತಜೀವಗಳಲ್ಲಿಯೂ ನಾನೇ

ರದು. ಇವರು ವಿಷ್ಣುವಿನ ಅಂಶಭೂತರಾಗಿ, ಅವನಿಂದ ಅನುಗ್ರಹಿಸಲ್ಪಟ್ಟ ಜ್ಞಾನ ವಿಶೇಷದಿಂದಲೇ ಸೃಷ್ಟಿಸಂಹಾರಗಳನ್ನು ನಡೆಸುವರು. ಈ ಅರ್ಥವು “ಅನೇನ ಜೀವೇ ನಾತ್ಮನಾನುಪ್ರವಿಶ್ಯ ನಾಮರೂಪೇವ್ಯಾಕರವಾಣಿ” ‘ಯೋ ಬ್ರಹ್ಮಾಣಂ ವಿಧಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ” “ಏತೌದ್ವೌ ವಿಬುಧಶ್ರೇಷ್ಠೌ ಪ್ರಸಾದ ಕ್ರೋಧಸಂಭವೌ । ಮದಾರ್ಶಿತ ಪಂಥಾನೌ ಸೃಷ್ಟಿಸಂಹಾರ ಕಾರಕೌ” ಇತ್ಯಾದಿ ಶ್ರುತಿಸ್ಮೃತಿ ವಾಕ್ಯಗಳಿಂದ ಸ್ಪಷ್ಟವಾಗುವುದು. ಆದರೆ ರಕ್ಷಣ ಕಾರ್ಯದಿಂದ ವಿಷ್ಣುವು ಜಗತ್ಕಾರಣನಾಗುವಂತೆ ಸೃಷ್ಟಿಸಂಹಾರಕಾರ್ಯಗಳಿಂದ ಬ್ರಹ್ಮರುದ್ರರಿಗೂ ಕಾರಣತ್ವವಿರುವಾಗ ನಾರಾಯಣನೊಬ್ಬನೇ ಕಾರಣನೆಂದು ಹೇಳುವುದು ಹೇಗೆ? ಅಲ್ಲಲ್ಲಿನ ಶ್ರುತಿವಾಕ್ಯಗಳಿಂದ ಇನ್ನೂ ಕೆಲವರಿಗೆ ಕಾರಣತ್ವವಿರುವಂತೆ ಸ್ಪಷ್ಟವಾಗುವುದು. “ಬ್ರಾಹ್ಮಣೋ ವೈ ಸರ್ವಾ ದೇವತಾಃ” “ಸೋಮಃ ಪವತೇ ಜನಿತಾ ಮತೀನಾಂ,ಜನಿತಾ ಪೃಥಿವ್ಯಾ, ಜನಿತಾಗ್ನೇರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ” “ಆಪೋ ವಾ ಇದಂ ಸರ್ವಂ”ಇತ್ಯಾದಿ ವಾಕ್ಯಗಳಿಂದ ಬ್ರಾಹ್ಮಣರೂ, ರುದ್ರನೂ, ಇಂದ್ರನೂ, ಅಗ್ನಿಯೂ, ಸೋಮನೂ, ಸರ್ವೋತ್ತಮರೆಂದೂ, ಜಗತ್ಕಾರಣರೆಂದೂ ಹೇಳಿರುವುದೇಕೆ” ಎಂದು ಶಂಕಿಸಬೇಕಾದುದಿಲ್ಲ. ಏಕೆಂದರೆ, ಮೇಲಿನ ವಾಕ್ಯಗಳಲ್ಲಿ ಬ್ರಾಹ್ಮಣಾದಿಗಳಿಗೆ ಪ್ರಾಶಸ್ತ್ಯವೂ, ಜಗತ್ಕಾರಣತ್ವವೂ ತೋರಿದರೂ, ಅವರವರಿಗೆ ಪರಮಪುರುಷನಿಂದನುಗ್ರಹಿಸಲ್ಪಟ್ಟ ಒಂದೊಂದು ಶಕ್ತಿಯಿಂದ ಒಂದೊಂದು ಭಾಗದಲ್ಲಿ ಆಧಿಕ್ಯವುಂಟೇ ಹೊರತು, ಈ ಸರ್ವವಿಧಶಕ್ತಿಗಳೂ ಆ ಪರಮಾತ್ಮನೊಬ್ಬನಲ್ಲಿಯೇ ಅಡಗಿರುವುದರಿಂದ, ಅವನೇ ಮೂಲಕಾರಣವೆಂದೂ, ಆತನೇ ಧ್ಯೇಯವಸ್ತುವೆಂದೂ ಗ್ರಾಹ್ಯವು. ಈ ಅಭಿಪ್ರಾಯದಿಂದಲೇ ಸೂತ್ರಕಾರರ ಪ್ರಥಮಸೂತ್ರದಲ್ಲಿ “ಜನ್ಮಾದ್ಯಸ್ಯ ಯತಃ” ಎಂಬುದಾಗಿ ಈ ಪ್ರಪಂಚದ ಸೃಷ್ಟ್ಯಾದಿಕಾರ್ಯಗಳೆಲ್ಲವೂ ಯಾವ ಪರಮಾತ್ಮನೊಬ್ಬನಿಂದ ನಡೆಯುವುವೋ ಅವನೇ ಪರಬ್ರಹ್ಮನೆಂದು ಹೇಳಲ್ಪಟ್ಟಿದೆ. ಆದುದರಿಂದ ಆ ನಾರಾಯಣನೊಬ್ಬನೇ ಮುಖ್ಯವಸ್ತುವೆಂದೂ, ಅವನೇ ಬ್ರಹ್ಮರುದ್ರಾದಿ ಶರೀರಗಳಲ್ಲಿ ಅನುಪ್ರವೇಶಮಾಡಿ ಆಯಾ ಕಾರ್ಯಗಳನ್ನು ನಡೆಸುವುದರಿಂದ, ಸೃಷ್ಟಿಸಂಹಾರಕಾರ್ಯಗಳಿಗೂ ಆಯಾ ಶರೀರಾಂತರ್ಯಾಮಿಯಾದ ಪರಮಾತ್ಮನೇ ಕಾರಣನೆಂದೂ ಗ್ರಾಹ್ಯವು. ಸೈನಿಕರ ಜಯಾಪಜಯಗಳು ರಾಜನಿಗೆ ಸಲ್ಲುವಂತೆ, ಬ್ರಹ್ಮರುದ್ರಾದಿಗಳ ಕಾರ್ಯಗಳೂ ಸರ್ವನಿಯಾಮಕನಾದ ಆ ನಾರಾಯಣನಿಗೇ ಸಲ್ಲುವುವು. ಆದುದರಿಂದ ಸೃಷ್ಟ್ಯಾದಿಕಾರ್ಯಗಳೆಲ್ಲಕ್ಕೂ ಸಮುದಾಯಕಾರಣತ್ವವನ್ನು ಆ ನಾರಾಯಣನಲ್ಲಿಯೇ ಗ್ರಹಿಸಬೇಕು.

ಅಂತರಾತ್ಮನಾಗಿದ್ದು, ಆ ಜೀವಾತ್ಮನನ್ನು ಆಯಾ ಕಾರ್ಯಗಳಲ್ಲಿ ನಿಯಮಿಸುತ್ತಿರುವೆನು. ನಾನು ಒಂದೊಂದು ಜೀವನಲ್ಲಿಯೂ ಒಳಹೊಕ್ಕಿದ್ದರೂ, ಆ ದೇವಮನುಷ್ಯಾದಿ ನಾಮಭೇದವಾಗಲಿ, ರೂಪಭೇದವಾಗಲಿ ನನಗೆ ಸಂಭವಿಸಲಾರದು.ಆ ಜೀವಗಳಿಗೆ ದೇಹಸಂಬಂಧದಿಂದುಂಟಾಗತಕ್ಕ ಸುಖದುಃಖಗಳೂಕೂಡ ನನ್ನನ್ನು ಮುಟ್ಟಲಾರವು. ಮೊದಲು ನಾಮರೂಪಗಳೊಂದೂ ಇಲ್ಲದ ಸೂಕ್ಷ್ಮಚೇತನಾಚೇತನಗಳೆರಡನ್ನೂ ಶರೀರವಾಗಿಹೊಂದಿದ್ದ ಮೂಲಕಾರಣವಸ್ತುವೇ ನಾನೆಂದು ತಿಳಿ!ನನ್ನ ಜ್ಞಾನಕ್ಕೆ ಎಂದಿಗೂ ಹೆಚ್ಚುಕಡಿಮೆಯಿಲ್ಲ ಎಲ್ಲವನ್ನೂ ತಿಳಿಯತಕ್ಕ ಶಕ್ತಿಯು ನನಗುಂಟು! ಪ್ರಕೃತಿಯಲ್ಲಿ ಕಾಣತಕ್ಕ ಬೇರೆಬೇರೆ ವಿಕಾರಗಳಾಗಲಿ, ಅದಕ್ಕೆ ಸಹಜವಾದ ಜಡಸ್ವಭಾವವಾಗಲಿ,ನನಗೆ ಸಂಬಂಧಿಸಲಾರದು. ಜೀವನಿಗೆ ಕರ್ಮಸಂಬಂಧದಿಂದುಂಟಾಗತಕ್ಕ ಜ್ಞಾನಸಂಕೋಚವಾಗಲಿ, ಸುಖದುಃಖಗಳಾಗಲಿ, ನನಗೆ ಸಂಭವಿಸಲಾರವು!ಎಲೈ ವಿಪ್ರೋತ್ತಮನೆ! ಸತ್ವ, ರಜಸ್ಸು, ತಮಸ್ಸೆಂಬ ಗುಣಗಳಿಂದ ಕೂಡಿ,ನನಗೆ ಶರೀರವಾಗಿರುವ ಪ್ರಕೃತಿಯಲ್ಲಿ ನಾನೇ ಇಷ್ಟಪಟ್ಟು ಜೀವನಮೂಲಕವಾಗಿ ಪ್ರವೇಶಿಸಿ,ಬ್ರಹ್ಮನೆಂದೂ, ವಿಷ್ಣುವೆಂದೂ, ರುದ್ರನೆಂದೂ ಕರೆಯಲ್ಪಡುತ್ತ, ಸೃಷ್ಟಿಸ್ಥಿತಿ ಸಂಹಾರಗಳನ್ನು ನಡೆಸುವೆನು. ಆದುದರಿಂದ ಸ್ಥೂಲರೂಪವಾಗಿ ಕಾಣುವ ಈ ಪ್ರಪಂಚವೆಂಬ ಕಾರ್ಯವಸ್ತುವೂ ನಾನೇ ! ಸೂಕ್ಷ್ಮಚೇತನಾಚೇತನವಿಶಿಷ್ಟವಾದ ಕಾರಣವಸ್ತುವೂ ನಾನೇ! ನನ್ನನ್ನು ಬಿಟ್ಟ ಬೇರೆವಸ್ತುವಾಗಲಿ,ನನಗೆ ಅಧೀನವಲ್ಲದ ಸ್ವತಂತ್ರವಸ್ತುವಾಗಲಿ ಯಾವುದೊಂದೂ ಇಲ್ಲ.ಹೀಗೆ ಸರ್ವಾಂತರ್ಯಾಮಿಯಾಗಿ, ಸರ್ವನಿಯಾಮಕನಾಗಿ, ನಿರ್ದೋಷನಾಗಿ, ಎಣೆಯಿಲ್ಲದವನಾಗಿ, ಸಮಸ್ತಕಲ್ಯಾಣಗುಣಗಳಿಗೂ ನೆಲೆಯಾಗಿರುವ ನನ್ನಲ್ಲಿಯೇ, ಸಮಸ್ತಭೂತಗಳೂ ನೆಲೆಗೊಂಡಿರುವುವು. ಹೀಗೆ ನಾನೇ ಸಮಸ್ತಭೂತಸ್ವರೂಪನಾಗಿರುವಾಗಲೂ, ದೇಹವನ್ನೇ ಆತ್ಮವೆಂದು ಭ್ರಮಿಸತಕ್ಕ ಮೂಢಾತ್ಮರು,ಇತರ ಭೂತಗಳನ್ನು ನನಗಿಂತಲೂ ಬೇರೆಯಾದ ಸ್ವತಂತ್ರವಸ್ತುಗಳೆಂದು ಭ್ರಮಿಸುವರು. ಹೀಗೆ ದೇಹವನ್ನೇ ಆತ್ಮವೆಂದೂ, ತಾನೇ ಸ್ವತಂತ್ರನೆಂದೂ ಭ್ರಮಿಸುವುದೇ, ಇತರಭೂತಗಳನ್ನು ಪರಮಾತ್ಮ

ನಿಗಿಂತಲೂ ಬೇರೆಯಾಗಿ ಭ್ರಮಿಸುವುದಕ್ಕೂ ಕಾರಣವಾಗುವುದು. ಮನುಷ್ಯನು ತನ್ನ ದೇಹದಲ್ಲಿಯೇ ಸೇರಿರತಕ್ಕ ಕೈ, ಕಾಲು,ಮೊದಲಾದ ಅವಯವಗಳಲ್ಲಿ, ಕೆಲವನ್ನಾದರೂ ಮತ್ತೊಬ್ಬರದೆಂದು ಹೇಗೆ ಭಾವಿಸಲಾರನೋ, ಹಾಗೆಯೇ ನನ್ನಲ್ಲಿ ನಟ್ಟಮನಸ್ಸುಳ್ಳವನು, ಇತರ ಭೂತಗಳನ್ನು ನನ್ನನ್ನು ಬಿಟ್ಟು ಬೇರೆಯಾಗಿರತಕ್ಕ ಸ್ವತಂತ್ರವಸ್ತುವೆಂದು ಭಾವಿಸಲಾರನು. ಓ ದಕ್ಷಾ! ನನ್ನ ಸಂಕಲ್ಪದಿಂದಲೇ ಬ್ರಹ್ಮರುದ್ರಾದಿಗಳೆಲ್ಲರೂ ಅವರವರ ನೆಲೆಯಲ್ಲಿ ನಿಂತಿರುವರು! ಯಾವನು ಬ್ರಹ್ಮ, ವಿಷ್ಣು, ರುದ್ರರೆಂಬ ತ್ರಿಮೂರ್ತಿಗಳಲ್ಲಿ ಭೇದಬುದ್ಧಿಯಿಲ್ಲದೆ, ನನ್ನ ರೂಪದಿಂದ ನೋಡುವನೋ, ಅಂತವನೇ ಮೋಕ್ಷವನ್ನೂ ಹೊಂದುವನು" ಎಂದನು.

ವಿದುರಾ! ಹೀಗೆ ಶ್ರೀಮನ್ನಾರಾಯಣನು ದಕ್ಷಪ್ರಜಾಪತಿಗೆ ತತ್ವವನ್ನುಪದೇಶಿಸಿದೊಡನೆ, ಆ ದಕ್ಷನು ಪರಮಸಂತೋಷಗೊಂಡವನಾಗಿ,ತಾನು ಪ್ರಾರಂಭಿಸಿದ ಯಾಗದಿಂದ ಆ ಭಗವಂತನನ್ನಾರಾಧಿಸಿ, ಆ ಮೂಲಕವಾಗಿ ಸಮಸ್ತದೇವತೆಗಳನ್ನೂ, ಬ್ರಾಹ್ಮಣರನ್ನೂ ತೃಪ್ತಿಪಡಿಸಿದನು. ರುದ್ರನಿಗೆ ಸಲ್ಲಿಸಬೇಕಾದ ಹವಿರ್ಭಾಗವನ್ನೂ ಮನಃಪೂರ್ವಕವಾಗಿ ಸಲ್ಲಿಸಿ ಅವನನ್ನೂ ಪೂಜಿಸಿದನು. ಯಾಗದ ಕೊನೆಯಲ್ಲಿ ನಡೆಸಬೇಕಾದ ಸಮಾಪ್ತಿಕರ್ಮವನ್ನೂ ಮುಗಿಸಿ, ಸೋಮಪಾನಮಾಡತಕ್ಕ ದೇವತೆಗಳನ್ನೂ, ಇತರ ದೇವತೆಗಳನ್ನೂ ಆರಾಧಿಸಿದನು. ಕೊನೆಗೆ ಸಮಸ್ತ ಋತ್ವಿಕ್ಕುಗಳೊಡನೆ ಅವಭೃತಸ್ನಾನವನ್ನು ಮಾಡಿದನು. ಹೀಗೆ ಯಾಗಸಿದ್ಧಿಯನ್ನು ಹೊಂದಿದ ದಕ್ಷನ ವಿಷಯದಲ್ಲಿ, ಸಮಸ್ತದೇವತೆಗಳೂ ಪ್ರಸನ್ನರಾಗಿ, ಅವನಿಗೆ ಮೇಲೆ ಮೇಲೆ ಧರ್ಮದಲ್ಲಿಯೇ ಬುದ್ಧಿಯು ಹೆಚ್ಚಾಗಿ ಪ್ರವರ್ತಿಸುವಂತೆ ಅನುಗ್ರಹಿಸಿ, ತಮ್ಮ ಸ್ಥಾನವಾದ ಸ್ವರ್ಗಲೋಕವನ್ನು ಸೇರಿದರು. ವಿದುರಾ!ಅತ್ತಲಾಗಿ ದಕ್ಷಪುತ್ರಿಯಾದ ಸತೀದೇವಿಯು, ತನ್ನ ದೇಹವನ್ನು ಯೋಗಾಗ್ನಿಯಲ್ಲಿ ಭಸ್ಮಮಾಡಿದಮೇಲೆ, ತಿರುಗಿ ಹಿಮವಂತನೆಂಬ ಪರ್ವತರಾಜನ ಪತ್ನಿಯಾದ ಮೇನೆಯ ಗರ್ಭದಲ್ಲಿ ಹುಟ್ಟಿದಳೆಂದು ಕೇಳಿರುವೆವು. ಹೀಗೆ ಪರ್ವತರಾಜಕುಮಾರಿಯಾಗಿ ಹುಟ್ಟಿದಮೇಲೆಯೂಕೂಡ, ಅವಳು ಬೇರೊಬ್ಬರಲ್ಲಿ ಮನಸ್ಸಿಡದೆ,ತನ್ನನ್ನೇ ಅನವರತವೂ ಚಿಂತಿಸುತಿದ್ದ ರುದ್ರನನ್ನೇ ಪತಿಯನ್ನಾಗಿ

ವರಿಸಿದಳು. ಪ್ರಳಯಕಾಲದಲ್ಲಿ ಚೇತನಾಚೇತನರೂಪವಾದ ಶಕ್ತಿಗಳೆಲ್ಲ ವೂ ಪರಮಪುರುಷನಲ್ಲಿ ಹೇಗೆ ಮರೆಗೊಳ್ಳುವುವೋ,ಹಾಗೆಯೇ ಅವಳು ಆ ರುದ್ರನಲ್ಲಿಯೇಮರೆಗೊಂಡಳು!ವಿದುರಾ!ದಕ್ಷಯಾಗವನ್ನು ಧ್ವಂಸಮಾಡಿದ ಮಹಾತ್ಮನಾದ ಆ ರುದ್ರನ ಈ ಚರಿತ್ರವನ್ನು ನಾನು ಮೊದಲು ಬೃಹಸ್ಪ ತಿಶಿಷ್ಯನಾದ ಮತ್ತು ಪರಮಭಾಗವತೋತ್ತಮನಾದ ಉದ್ಧವನಿಂದ ಕೇ ಳಿ ತಿಳಿದೆನು. ಭಾಗವತೋತ್ತಮನಾಗಿಯೂ, ಮಹಾತ್ಮನಾಗಿಯೂ ಇರು ವ ಆ ರುದ್ರನ ಚರಿತ್ರವು ಪರಮಪವಿತ್ರವಾದುದು. ಇದನ್ನು ಕೇಳಿದ ಮಾತ್ರದಲ್ಲಿ ಸಮಸ್ತಪಾಪಗಳೂ ನೀಗುವುವು. ಉತ್ತಮವಾದ ಯಶಸ್ಸೂ ವಿಸ್ತರಿಸುವುದು. ಕುರುವಂಶೋತ್ತಮನಾದ ಓ ವಿದುರಾ! ಈ ಪವಿತ್ರ ಕಥೆಯನ್ನು ಯಾವನು ಕಿವಿಯಿಂದ ಕೇಳುವನೋ, ಯಾವನು ಬಾಯಿಂ ದ ಹೇಳುವನೋ, ಅವನು ಭಗವದ್ಭಕ್ತಿಗೆ ವಿರೋಧಿಗಳಾದ ಪಾಪಗಳೆಲ್ಲವ ನ್ನೂ ನೀಗುವನು. ಇಲ್ಲಿಗೆ ಏಳನೆಯ ಅಧ್ಯಾಯವು.

---

## ಧ್ರುವಚರಿತ್ರಾರಂಭವು.

{ಧ್ರುವನು ತನ್ನ ಬಲತಾಯಿಯಾದ ಸುರುಚಿಯ ದುರ್ಭಾಷೆಗಳನ್ನು ಸಹಿಸಲಾರದೆ, ತಪಸ್ಸಿನಿಂದ ಶ್ರೀಮಹಾವಿಷ್ಣುವನ್ನಾರಾಧಿಸಿದುದು.}

ವಿದುರಾ! ಇದುವರೆಗೆ ನಾನು ಸ್ವಾಯಂಭುವಮನುವಿನ ದೌಹಿತ್ರ ಸಂತತಿಯನ್ನು ವಿವರಿಸಿದೆನು. ಮುಂದೆ ಅವನ ಪುತ್ರಸಂತತಿಯಿಂದ ಹೆಚ್ಚಿ ಬಂದ ಪ್ರಜಾವೃದ್ಧಿಕ್ರಮವನ್ನೂ ತಿಳಿಸುವೆನು ಕೇಳು. ಇದರನಡುವೆ ಮ ತ್ತೊಂದು ಸೂಕ್ಷ್ಮವೃತ್ತಾಂತವನ್ನು ತಿಳಿಸಬೇಕಾಗಿರುವುದು. ಬ್ರಹ್ಮನಿಗೆ ಸನಕಾದಿಮುನಿಕುಮಾರರೂ, ಮರೀಚಿ ಮೊದಲಾದ ಪ್ರಜಾಧಿಪತಿಗಳೂ ಮ ಕ್ಕಳಾದರೆಂದು ಹೇಳಿದ್ದೆನಲ್ಲವೆ! ಅವರಲ್ಲಿ ಮರೀಚಿ ಮೊದಲಾದ ವರೆಲ್ಲರೂ ಗೃಹಸ್ಥಾಶ್ರಮವನ್ನವಲಂಬಿಸಿದುದರಿಂದ, ಅವರಿಂದ ಮೇಲೆಮೇ ಲೆ ಸಂತತಿಯು ಹೆಚ್ಚುತ್ತಬಂದಿತು. ಆದರೆ, ಸನಕಸನಂದನರೇ ಮೊದಲಾದ ನಾಲ್ವರು ಮುನಿಕುಮಾರರೂ, ಋಭುವೂ, ಹಂಸನೂ, ಆರುಣಿಯೂ,ಇವ

ರುಮಾತ್ರ ಗೃಹಸ್ಥಾಶ್ರಮದಲ್ಲಿ ಅಕ್ಕರೆಯಿಲ್ಲದೆ,ಇಂದ್ರಿಯಗಳನ್ನು ಜಯಿಸಿ, ವೀರ್ಯವನ್ನು ಪಡೆದು, ಬ್ರಹ್ಮಚರ್ಯದಲ್ಲಿಯೇ ಇದ್ದುಬಿಟ್ಟರು. ಆದುದ ರಿಂದ ಅವರಲ್ಲಿ ವಂಶಾಭಿವೃದ್ಧಿಯಿಲ್ಲದೆ ಹೋಯಿತು. ಬ್ರಹ್ಮನ ಪುತ್ರರಲ್ಲಿ ಒಬ್ಬನಾದ ಅಧರ್ಮನೆಂಬವನು ಮೃಷೆಯೆಂಬ ಭಾರ್ಯೆಯನ್ನು ವರಿಸಿ, ಅವಳಲ್ಲಿ ದಂಭನೆಂಬೊಬ್ಬ ಪುತ್ರನನ್ನೂ, ಮಾಯೆಯೆಂಬ ಕುಮಾರಿಯನ್ನೂ ಪಡೆದನು.ಇವರಿಬ್ಬರನ್ನೂ ನಿಋತಿಯೆಂಬವನು ತನಗೆ ಸಂತಾನವಿಲ್ಲದುದರಿಂ ದ ತನ್ನ ಸ್ವಾಧೀನದಲ್ಲಿರಿಸಿಕೊಂಡು, ಅವರನ್ನೇ ಮಕ್ಕಳಂತೆ ಭಾವಿಸಿಪೋಷಿ ಸುತ್ತ ಬಂದನು. ಇವರಿಬ್ಬರೂ ಒಡಹುಟ್ಟಿದವರಾಗಿದ್ದರೂ, ಅಧರ್ಮ ದಿಂದ ಒಬ್ಬರನ್ನೊಬ್ಬರು ಪ್ರೀತಿಸಿ ವಿವಾಹಮಾಡಿಕೊಂಡರು. ಈ ದಂಪತಿ ಗಳಿಗೆ ಲೋಭನೆಂಬ ಪುತ್ರನೂ, ನಿಕೃತಿಯೆಂಬ ಪುತ್ರಿಯೂ ಹುಟ್ಟಿದರು.ಈ ಮಕ್ಕಳೂಕೂಡ ಒಬ್ಬರನ್ನೊಬ್ಬರು ವಿವಾಹಮಾಡಿಕೊಂಡು ಕ್ರೋಧನೆಂಬ ಪುತ್ರನನ್ನೂ, ಹಿಂಸೆಯೆಂಬ ಕನ್ಯೆಯನ್ನೂ ಪಡೆದರು. ಇವರಿಬ್ಬರೂ ದಂಪತಿ ಗಳಾಗಿ ಕಲಿಯೆಂಬ ಪುತ್ರನನ್ನೂ, ದುರುಕ್ತಿಯೆಂಬ ಕುಮಾರಿಯನ್ನೂ ಪಡೆ ದರು. ಈ ಮಕ್ಕಳೇ ಪರಸ್ಪರವಿವಾಹಿತರಾಗಿ, ಭೀತಿಯೆಂಬ ಮಗಳನ್ನೂ, ಮೃತ್ಯುವೆಂಬ ಕುಮಾರನನ್ನೂ ಪಡೆದರು. ಇವರಿಬ್ಬರೂ ವಿವಾಹಿತರಾ ಗಿ, ಯಾತನೆಯೆಂಬ ಕುಮಾರಿಯನ್ನೂ ನಿರಯನೆಂಬ ಪುತ್ರನನ್ನೂ ಪಡೆದ ರು. ಇದೇ ಅಧರ್ಮನ ವಂಶಕ್ರಮವು. ಮೇಲೆ ಹೇಳಿದ ಮಾಯೆ, ದಂಭ ಮೊದಲಾದವರೆಲ್ಲರೂ ಸಂಸಾರಕಾರಣವಾದ ಅಧರ್ಮವೆಂಬ ವೃಕ್ಷಕ್ಕೆ ಶಾ ಖೆಗಳಂತೆ ಹೆಚ್ಚಿರುವರು. ಮೋಕ್ಷಾಭಿಲಾಷೆಯುಳ್ಳವನು, ಕ್ಷಣಮಾತ್ರವೂ ಇವರ ಸಹವಾಸವನ್ನು ಮಾಡಬಾರದು ಸನ್ಯಾಸಾಶ್ರಮದಲ್ಲಿರತಕ್ಕವನು ಇವರನ್ನು ಕಣ್ಣೆತ್ತಿಯೂ ನೋಡದಂತೆ ಬಹಳ ಜಾಗರೂಕತೆಯಿಂದಿರಬೇ ಕು! ವಿದುರಾ! ಇದುವರೆಗೆ ನಾನು ಹೇಳಿದ ಸೃಷ್ಟಿಕ್ರಮವೆಲ್ಲವೂ ಪ್ರತಿ ಸರ್ಗವೆನಿಸುವುದು. ಅದನ್ನು ನಿನಗೆ ಸಂಗ್ರಹವಾಗಿ ತಿಳಿಸಿರುವೆನು. ಈ ಪ್ರತಿಸರ್ಗದಲ್ಲಿ ಒಂದಾದ ಅಧರ್ಮನ ವಂಶವನ್ನು ಮೂರಾವರ್ತಿ ಕೇಳಿದವ ನು, ತನ್ನ ಪಾಪಸಂಬಂಧವನ್ನು ಬಿಟ್ಟು ಶ್ರೇಯಸ್ಸನ್ನು ಹೊಂದುವನು.ಈ ವಿಷಯವು ಹಾಗಿರಲಿ! ಇನ್ನು ಸ್ವಾಯಂಭುವಮನುವಿನ ಪುತ್ರಸಂತತಿಯನ್ನು

ತಿಳಿಸುವೆನು ಕೇಳು. ಸಾಕ್ಷಾದ್ವಿಷ್ಣುವಿನ ಅಂಶಭೂತನಾದ ಚತುರ್ಮುಖ ನಿಂದಲೇ ಹುಟ್ಟಿ, ಪುಣ್ಯಕೀರ್ತಿಯೆನಿಸಿಕೊಂಡ ಆ ಸ್ವಾಯಂಭುವ ಮನುವಿನ ಚರಿತ್ರವು ಬಹಳ ಪವಿತ್ರವಾದುದು. ಅದನ್ನು ನೀನು ಸಾವಧಾನದಿಂದ ಕೇಳಬೇಕು. ಸ್ವಾಯಂಭುವನಿಗೆ ಶತರೂಪೆಯಲ್ಲಿ ಪ್ರಿಯವ್ರತನೆಂದೂ, ಉ ತ್ತಾನಪಾದನೆಂದೂ ಇಬ್ಬರು ಗಂಡುಮಕ್ಕಳು ಹುಟ್ಟಿದರೆಂದು ಹಿಂದೆಯೇ ಹೇಳಿರುವೆನಷ್ಟೆ? ಅವರಿಬ್ಬರೂ ಶ್ರೀಮಹಾವಿಷ್ಣುವಿನ ಅಂಶದಿಂದಲೇ ಹು ಟ್ಟಿದವರಾಗಿ ರಾಜ್ಯರಕ್ಷಣವನ್ನು ಮಾಡುತಿದ್ದರು. ಅವರಿಬ್ಬರಲ್ಲಿ ಉತ್ತಾನ ಪಾದನು ತನ್ನ ಕಿರಿಯಹೆಂಡತಿಯಾದ ಸುರುಚಿಯನ್ನು ವಿಶೇಷವಾಗಿ ಪ್ರೀ ತಿಸುತಿದ್ದನು. ಸುನೀತಿಯೆಂಬವಳು ಸುರುಚಿಗಿಂತಲೂ ಬಹಳ ಗುಣಾಢ್ಯ ಳಾಗಿದ್ದರೂ, ಅವಳಲ್ಲಿ ರಾಜನಿಗೆ ಅಷ್ಟಾಗಿ ಪ್ರೇಮವಿರಲಿಲ್ಲ. ಈ ಸುನೀತಿ ಯ ಗರ್ಭದಲ್ಲಿ ಧ್ರುವನೆಂಬ ಕುಮಾರನು ಹುಟ್ಟಿದನು. ಸುರುಚಿಗೆ ಉತ್ತ ಮನೆಂಬ ಕುಮಾರನಿದ್ದನು. ಒಮ್ಮೆ ಉತ್ತಾನಪಾದನು, ಸುರುಚಿಯ ಮಗ ನಾದ ಉತ್ತಮನನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು, ಸಿಂ ಹಾಸನದಮೇಲೆ ಕುಳಿತು, ಸುರುಚಿಯೊಡನೆ ಸರಸಸಲ್ಲಾಪಗಳನ್ನು ನಡೆ ಸುತಿದ್ದನು. ಇದೇಸಮಯದಲ್ಲಿ ಸುನೀತಿಯ ಮಗನಾದ ಧ್ರುವನೂಕೂ ಡ, ಆಸೆಯಿಂದ ಮುಂದೆ ಬಂದು, ತನ್ನ ತಂದೆಯ ತೊಡೆಯಮೇಲೆ ಕುಳ್ಳಿರು ವುದಕ್ಕೆ ಹೋದನು. ಆದರೆ ಉತ್ತಾನಪಾದನು ಆ ಮಗುವನ್ನು ಸ್ವಲ್ಪಮಾ ತ್ರವೂ ಆದರಿಸದೆ, ಕಣ್ಣೆತ್ತಿಯೂ ನೋಡದೆ ಮೌನದಿಂದಿದ್ದನು. ತಾನಾಗಿ ಆ ಮಗುವನ್ನೆತ್ತಿ ತೊಡೆಯಲ್ಲಿ ಕುಳ್ಳಿರಿಸಿಕೊಳ್ಳದೆ ಹೋದುದುಮಾತ್ರವಲ್ಲ! ಆ ಧ್ರುವಕುಮಾರನು ತಾನೇ ಪ್ರಯತ್ನಪಟ್ಟುಬಂದರೂ ಅವಕಾಶಕೊಡದೆ ಹೋದನು. ಇಷ್ಟರಲ್ಲಿ ಸಮೀಪದಲ್ಲಿದ್ದ ಸುರುಚಿಯು ತನ್ನ ಸವತಿಯ ಮಗ ನಾದಧ್ರುವನ ಪ್ರಯತ್ನವನ್ನು ನೋಡಿ ಅಸೂಯೆಗೊಂಡು, ಆ ರಾಜನೂ ಕೇ ಳುತ್ತಿರುವಹಾಗೆಯೇ, ಗರ್ವದಿಂದ ಈ ಮಾತನ್ನಾಡುವಳು. "ಮಗೂ! ಬೇಡ ವಪ್ಪಾ! ಹೋಗು! ಈ ರಾಜಪೀಠವನ್ನೇರುವುದಕ್ಕೆ ನಿನಗೆ ಯೋಗ್ಯತೆಯಿಲ್ಲ. ನೀನು ರಾಜನ ಮಗನಾಗಿದ್ದರೂ, ನನ್ನ ಹೊಟ್ಟೆಯಲ್ಲಿಯಾದರೂ ಜನಿಸಿದ್ದ ರೆ, ಇಲ್ಲಿ ಕುಳ್ಳಿರಬಹುದಾಗಿತ್ತು ! ಅಯ್ಯೋ ಪಾಪವೆ? ನಿನ್ನ ತಾಯಿಯು

ಯಾರೆಂದು ಇನ್ನೂ ನಿನಗೆ ತಿಳಿಯದಿರುವುದು ನನಗೆ ಅತ್ಯಾಶ್ಚರ್ಯವಾಗಿದೆ. ನೀನು ಬೇರೆ ಯಾವಳ ಹೊಟ್ಟೆಯಲ್ಲಿಯೋ ಹುಟ್ಟಿದವನೆಂಬುದನ್ನು ಕಾಣೆಯಾ? ಇನ್ನೂ ಸಣ್ಣ ಕೂಸಾದುದರಿಂದ ಇದು ನಿನಗೆ ತಿಳಿಯದಿರಬಹುದು. ಅಯ್ಯೋ! ಹೀಗೆ ಹಿಂದುಮುಂದುತಿಳಿಯದೆ, ದುರ್ಲಭವಾದ ಪದವಿಗೆ ಆಸೆಪಡುವೆಯಲ್ಲಾ? ಒಂದುವೇಳೆ ನಿನಗೆ ಆಸೆಯಿದ್ದರೆ ನಾನು ಹೇಳುವ ಮಾತಿನಂತೆ ನಡೆಸು! ಈಗ ನೀನು ನನ್ನ ಸವತಿಯಾದ ಸುನೀತಿಯ ಗರ್ಭದಲ್ಲಿ ಹುಟ್ಟಿದವನು. ನನ್ನ ಹೊಟ್ಟೆಯಲ್ಲಿ ಹುಟ್ಟಿದವರಿಗಲ್ಲದೆ ಬೇರೆಯವರಿಗೆ ಈ ಸಿಂಹಾಸನವನ್ನೇರುವುದಕ್ಕೆ ಅರ್ಹತೆಯಿಲ್ಲ ! ಹೇಗಿದ್ದರೂ ನಿನಗೆ ಈ ಜನ್ಮದಲ್ಲಿ ಬೇರೆ ಆ ಸುಖವಿರಲಾರದು. ಹೇಗಾದರೂ ನಿನಗೆ ಈ ಸಿಂಹಾಸನವನ್ನೇರಬೇಕೆಂಬ ಆಸೆಯಿದ್ದಪಕ್ಷದಲ್ಲಿ, ತಪಸ್ಸಿನಿಂದ ಭಗವಂತನನ್ನಾರಾಧಿಸಿ, ಮುಂದಿನ ಜನ್ಮಕ್ಕಾದರೂ ನನ್ನ ಹೊಟ್ಟೆಯಲ್ಲಿ ಹುಟ್ಟುವಂತೆ ವರವನ್ನು ಪಡೆದು ಬರಬೇಕೇಹೊರತು ಬೇರೆ ವಿಧಿಯಿಲ್ಲ ! ಆದುದರಿಂದ ಈ ಆಸೆಯನ್ನು ಬಿಡು” ಎಂದಳು. ವಿದುರಾ ! ಮಲತಾಯಿಯು ಹೇಳಿದ ಈ ಗರ್ವದ ಮಾತು, ಆ ಧ್ರುವನ ಕಿವಿಯಲ್ಲಿ ಶೂಲದಂತೆ ನಾಟಿತು. ದಂಡದಿಂದ ಮೆಟ್ಟಿದ ಮಹಾಸರ್ಪದಂತೆ ಕೋಪದಿಂದ ನಿಟ್ಟುಸಿರನ್ನು ಬಿಡುತ್ತಿದ್ದನು. ಸುರುಚಿಯು ಇಷ್ಟು ದುರ್ವಾಕ್ಯಗಳನ್ನಾಡಿ ನೂಕುತಿದ್ದರೂ, ತನ್ನ ತಂದೆಯು ಅವೆಲ್ಲವನ್ನೂ ನೋಡುತ್ತ ಬಾಯೆತ್ತದೆ ಸುಮ್ಮನಿರುವುದನ್ನು ನೋಡಿ ಅವನ ದುಃಖವು ಮತ್ತಷ್ಟು ಹೆಚ್ಚಿತು. ಆ ದುಃಖವನ್ನು ತಡೆಯಲಾರದೆ ಅಳುತ್ತ ಬಂದು, ತನ್ನ ತಾಯಿಯಾದ ಸುನೀತಿಯ ಬಳಿಯಲ್ಲಿ ನಿಂತನು. ಹೀಗೆ ದುಃಖದಿಂದ ನಿಟ್ಟುಸಿರನ್ನು ಬಿಟ್ಟು, ತುಟಿಗಳನ್ನು ನಡುಗಿಸುತ್ತ, ಮುಂದೆ ನಿಂತಿರುವ ಕುಮಾರನನ್ನು ಕಂಡ, ಸುನೀತಿಯು, ಬೆಜ್ಜರಬಿದ್ದು, ಥಟ್ಟನೆ ಬಂದು ಮಗನನ್ನೆತ್ತಿ ತೊಡೆಯಲ್ಲಿ ಕುಳ್ಳಿರಿಸಿಕೊಂಡು, ಅವನ ದುಃಖಕಾರಣವನ್ನು ವಿಚಾರಿಸುತಿದ್ದಳು. ಇಷ್ಟರಲ್ಲಿ ಬೇರಜನರ ಮುಖದಿಂದ ಅವನಿಗೆ ತನ್ನ ಸವತಿಯು ಹೇಳಿದ ಕ್ರೂರವಾಕ್ಯಗಳೆಲ್ಲವೂ ತಿಳಿದು ಬಂದುವು. ಇದರಿಂದ ಆಕೆಯು, ಕಾಡುಗಿಚ್ಚಿನಿಂದ ದಗ್ಧವಾದ ಲತೆಯಂತೆ, ಶೋಕಾಗ್ನಿಯಿಂದ ಬೇಯುತ್ತ ಧೈರ್ಯಗುಂದಿ, ತನ್ನ ಸವತಿಯ ದುರ್ವಾವಾಕ್ಯಗಳನ್ನು ಕ್ಷಣ

ಕ್ಷಣಕ್ಕೂ ನೆನೆಸಿಕೊಂಡು,ದುಃಖದಿಂದ ಕಣ್ಣೀರು ಬಿಟ್ಟು,ತಾನೂ ಅಳುವು ದಕ್ಕೆ ತೊಡಗಿದಳು. ತನ್ನ ಪತಿಯೇ ತನ್ನನ್ನು ತಿರಸ್ಕರಿಸಿದ ಮೇಲೆ ಈ ದುಃ ಖಕ್ಕೆ ಯಾವವಿಧದಲ್ಲಿಯೂ ಪ್ರತೀಕಾರವಿಲ್ಲವೆಂದು ನಿಶ್ಚಯಿಸಿ, ಮನಸ್ಸಂ ಕಟದಿಂದ ನಿಟ್ಟುಸಿರನ್ನು ಬಿಡುತ್ತ, ಕೊನೆಗೆ ತನ್ನ ಮನಸ್ಸನ್ನು ದೃಢಪಡಿಸಿ ಕೊಂಡು, ಆ ಬಾಲಕನನ್ನು ಸಮಾಧಾನಪಡಿಸುತ್ತ ಹೀಗೆಂದು ಹೇಳುವಳು. “ವತ್ಸಾ! ಇನ್ನು ದುಃಖಿಸಿ ಫಲವೇನು? ನಮ್ಮ ದೌರ್ಭಾಗ್ಯಕ್ಕಾಗಿ ನಾವು ಇತರರಮೇಲೆ ತಪ್ಪನ್ನೆಣಿಸಬಾರದು. ಒಂದುವೇಳೆ ಮತ್ತೊಬ್ಬರು ನಮಗೆ ಮನಃಪೂರ್ವಕವಾಗಿ ಕೇಡನ್ನೇ ಬಯಸಿದ್ದರೂ, ನಾವು ಅವರಿಗೆ ಅಶ್ರೇಯ ಸ್ಸನ್ನು ಕೋರಬಾರದು. ಇತರರಿಗೆ ದುಃಖವನ್ನುಂಟುಮಾಡಿದವರು,ತಾವೂ ಅದೇವಿಧವಾದ ದುಃಖವನ್ನು ಕಾಲಾಂತರದಲ್ಲಿಯಾದರೂ ಅನುಭವಿಸದೆ ಹೋಗಲಾರರು. ವತ್ಸಾ! ನಾವು ಜನ್ಮಾಂತರದಲ್ಲಿ ಯಾರಿಗೆ ಯಾವವಿಧ ವಾದ ದುಃಖವನ್ನುಂಟು ಮಾಡಿದ್ದೆವೋ,ಈಗ ಅದರ ಫಲವನ್ನನುಭವಿಸು ವೆವು ನೋಡು! ಸುರುಚಿಯು ಹೇಳಿದ ಮಾತೇ ನಿಜವು. ಮಂದಭಾಗ್ಯಳಾದ ನನ್ನ ಹೊಟ್ಟೆಯಲ್ಲಿ ಹುಟ್ಟಿದುದರಿಂದಲೇ ನೀನು ಈ ದುಃಖಕ್ಕೆ ಗುರಿಯಾಗ ಬೇಕಾಯಿತು! ಪುಣ್ಯಹೀನೆಯಾದ ನನ್ನ ಸ್ತನ್ಯಪಾನವನ್ನು ಮಾಡಿ ಬೆಳೆದು ದಕ್ಕೆ ಇದೇ ಫಲವು. ನಿನ್ನ ತಂದೆಯು ನನ್ನನ್ನು ಭಾರ್ಯೆಯೆಂದು ಹೇಳಿ ಕೊಳ್ಳುವುದಕ್ಕೂ ನಾಚುತ್ತಿರುವನು. ಇನ್ನು ನನ್ನಲ್ಲಿ ಹೇಗೆ ತಾನೇ ಪ್ರೀತಿಯು ಹುಟ್ಟುವುದು? ಹೀಗೆ ನನ್ನ ಸಂಬಂಧದಿಂದ ದುರ್ಭಾಗ್ಯನಾದ ನೀನು, ಆ ಸುರುಚಿಯ ಮಾತಿಗೆ ಕೋಪಿಸಿಕೊಳ್ಳದೆ, ಅವಳು ಹೇಳಿದಂ ತೆಯೇ ನಡೆಸುವುದು ಮೇಲು! ಪರಮಪುರುಷನನ್ನಾರಾಧಿಸಿ ಇನ್ನೊಂದು ಜನ್ಮಕ್ಕಾದರೂ ತನ್ನ ಗರ್ಭದಲ್ಲಿ ಜನಿಸೆಂದು ಹೇಳಿದಳಲ್ಲವೆ? ಆಮಾತನ್ನು ನೀನು ದೋಷವೆಂದೆಣಿಸಬೇಡ! ಅದನ್ನೇ ಬುದ್ಧಿವಾದವೆಂದು ನಂಬು! ಆ ಉತ್ತಮನಂತೆ ನಿನಗೂ ರಾಜಪೀಠದಲ್ಲಿ ಕುಳ್ಳಿರಬೇಕೆಂಬ ಆಸೆಯಿದ್ದರೆ, ಆ ಭಗವಂತನ ಪಾದಪದ್ಮಗಳನ್ನೇ ಆರಾಧಿಸುತ್ತಿರು! ನಿನ್ನ ಕೋರಿಕೆಯು ಕೈಗೂಡುವುದರಲ್ಲಿ ಸಂದೇಹವಿಲ್ಲ.ಲೋಕರಕ್ಷಣಾರ್ಥವಾಗಿ ಆಗಾಗ ಅನೇಕ ದಿವ್ಯರೂಪಗಳನ್ನು ಧರಿಸತಕ್ಕ ಆ ಭಗವಂತನ ಪಾದಾರವಿಂದವನ್ನು, ಆರಾ

ಧಿಸಿದುದರಿಂದಲ್ಲವೇ ಚತುರ್ಮುಖಬ್ರಹ್ಮನುಕೂಡ, ಹದಿನಾಲ್ಕುಲೋಕಗಳಿಗೂ ಮೇಲಾದ ಸತ್ಯಲೋಕದಲ್ಲಿ, ಪಾರಮೇಷ್ಠ್ಯವೆಂಬ ಉತ್ತಮಪದವಿಯನ್ನು ವಹಿಸಿ ಪ್ರಪಂಚವನ್ನಾಳುತ್ತಿರುವನು. ಭಗವಂತನ ಪಾದಾರವಿಂದಗಳ ಮಹಿಮೆಯನ್ನು ಮಹಾತ್ಮರಲ್ಲದೆ ಬೇರೆಯವರು ತಿಳಿಯಲಾರರು. ಅದು ಮನಸ್ಸನ್ನೂ, ಇಂದ್ರಿಯಗಳನ್ನೂ ಜಯಿಸಿದ ಯೋಗೀಶ್ವರರಿಗೆಮಾತ್ರವೇ ಧ್ಯಾನವಿಷಯವಾಗುವುದು. ಅಷ್ಟೇಕೆ? ನಿನ್ನ ಪಿತಾಮಹನಾದ ಮನುವೂ ಕೂಡ, ಎಣೆಯಿಲ್ಲದ ಭಕ್ತಿಯಿಂದ ಆ ಭಗವಂತನನ್ನು ಪೂಜಿಸುವುದಕ್ಕಾಗಿ, ಬಹು ದಕ್ಷಿಣೆಗಳುಳ್ಳ ಎಷ್ಟೋ ಯಾಗಗಳನ್ನು ನಡೆಸಿರುವನು. ಅದರ ಫಲದಿಂದಲೇ ಇತರರಿಗೆ ದುರ್ಲಭವಾದ ಇಹಲೋಕಸುಖಗಳನ್ನೂ, ಪರಲೋಕಸುಖಗಳನ್ನೂ ಅನುಭವಿಸಿ, ಕೊನೆಗೆ ಮೋಕ್ಷಲಕ್ಷ್ಮಿಯನ್ನೂ ಕೈವಶಮಾಡಿಕೊಂಡಿರುವನು! ಆದುದರಿಂದ ಎಲೈ ವತ್ಸನೆ! ಭಕ್ತವತ್ಸಲನಾದ ಆ ಭಗವಂತನನ್ನೇ ಶರಣುಹೊಂದು! ಸರ್ವೋತ್ತಮಸುಖವಾದ ಮೋಕ್ಷವನ್ನು ಬಯಸತಕ್ಕವರೂಕೂಡ ಆತನ ಪಾದಚ್ಛಾಯೆಯನ್ನೇ ಹುಡುಕುತ್ತಿರುವರು. ದೃಢವಾದ ಭಕ್ತಿಯೊಂದಲ್ಲದೆ ಬೇರೆ ಯಾವ ಉಪಾಯವೂ ಆ ಭಗವಂತನನ್ನು ವಶೀಕರಿಸಲಾರದು. ಆದುದರಿಂದ ನೀನು ಉತ್ಕೃಷ್ಟವಾದ ತಪಸ್ಸಿನಿಂದ ಆ ಭಗವಂತನನ್ನೇ ಸಂತೋಷಪಡಿಸು! ಅದರಿಂದ ನಿನ್ನ ಕೋರಿಕೆಯು ಈಡೇರುವುದರಲ್ಲಿ ಸಂದೇಹವಿಲ್ಲ. ಆಶ್ರಯಿಸಿದರೂ, ಭಕ್ತವತ್ಸಲನಾಗಿಯೂ, ಉತ್ತಮಸುಖಪ್ರದನಾಗಿಯೂ ಇರುವ ಆ ಪರಮಪುರುಷನನ್ನಾಶ್ರಯಿಸಬೇಕೇ ಹೊರತು, ಬೇರೆ ಸಾಮಾನ್ಯದೇವತೆಗಳನ್ನು ಭಜಿಸಿ ಲಾಭವಿಲ್ಲ! ಅಘಟಿತಘಟನಾಸಾಮರ್ಥ್ಯವು ಅವನೊಬ್ಬನಿಗಲ್ಲದೆ ಬೇರೆಯವರಿಗೆ ಸಲ್ಲದು. ಆತನೇ ಸರ್ವಾಭೀಷ್ಟಪ್ರದನು. ಆತನೇ ಸರ್ವಲೋಕಾಧಿಪತಿಯು! ಆದುದರಿಂದ ನೀನು ಆ ಮಹಾನುಭಾವನಲ್ಲಿಯೇ ನಿನ್ನ ಮನಸ್ಸನ್ನು ನೆಲೆಗೊಳಿಸಿ, ನಿಜಧರ್ಮವನ್ನು ಬಿಡದೆ, ಅವನನ್ನೇ ಹೃದಯದಲ್ಲಿರುವ ಪರಮಾತ್ಮನನ್ನಾಗಿ ಭಾವಿಸಿ, ನಿಶ್ಚಲವಾದ ಭಕ್ತಿಯಿಂದ ಉಪಾಸನೆಮಾಡುತ್ತಿರು! ಪುಂಡರೀಕಾಕ್ಷನಾದ ಆ ನಾರಾಯಣನಲ್ಲದೆ ನಿನ್ನನ್ನು ಈ ದುಃಖದಿಂದ ಬಿಡಿಸತಕ್ಕವರು ಬೇರೊಬ್ಬರಿಲ್ಲ. ವತ್ಸಾ! ಅಷ್ಟೇಕೆ

ಬ್ರಹ್ಮರುದ್ರಾದಿದೇವತೆಗಳೂಕೂಡ ತಮ್ಮತಮ್ಮ ಕೋರಿಕೆಗಳನ್ನು ಪಡೆಯುವುದಕ್ಕಾಗಿ ಯಾವ ಲಕ್ಷ್ಮೀದೇವಿಯನ್ನು ಹುಡುಕುತ್ತಿರುವರೋ, ಆ ಮಹಾಲಕ್ಷ್ಮಿಯೇ ಕೈದೀಪದಂತೆ ಕೈಯಲ್ಲಿ ಕಮಲವನ್ನು ಹಿಡಿದು ಆತನನ್ನು ಹುಡುಕುತ್ತಿರುವಳಲ್ಲವೆ! ಇಂತಹ ಮಹಾಮಹಿಮೆಯುಳ್ಳ ಭಗವಂತನನ್ನು ನೀನು ಭಕ್ತಿಯಿಂದ ಆರಾಧಿಸಬೇಕಾದುದೇ ಉತ್ತಮಮಾರ್ಗವು. ಕುಮಾರಾ! ನಿನ್ನ ಸವತಿತಾಯಿಯು ಹೇಳಿದ ಕ್ರೂರವಾಕ್ಯವನ್ನೇ ಹಿತವಾಕ್ಯವನ್ನಾಗಿ ಭಾವಿಸಿ, ಆ ಪರಮಪುರುಷನ ಅನುಗ್ರಹವನ್ನು ಸಂಪಾದಿಸಿ ಬಾ! ಹೋಗು" ಎಂದಳು.

ತನ್ನ ತಾಯಿಯು ಹೀಗೆ ವ್ಯಸನಪೂರ್ವಕವಾಗಿ ಹೇಳಿದ ಬುದ್ಧಿವಾದವನ್ನು ಕೇಳಿ ಧ್ರುವನು, ತನ್ನ ಮನಸ್ಸನ್ನು ತಾನೇ ಪ್ರಯತ್ನಪೂರ್ವಕವಾಗಿ ನಿಗ್ರಹಿಸಿಕೊಂಡು,ಆಕ್ಷಣವೇ ತನ್ನ ತಂದೆಯಪಟ್ಟಣವನ್ನು ಬಿಟ್ಟುಹೊರಟುಬಿಟ್ಟನು. ಇಷ್ಟರಲ್ಲಿ ನಾರದನು ಈ ವೃತ್ತಾಂತವನ್ನು ಕೇಳಿ,ಅವನ ಉದ್ದೇಶವೇನೆಂಬುದನ್ನು ತನ್ನ ಜ್ಞಾನದೃಷ್ಟಿಯಿಂದ ತಿಳಿದು, ಆ ಧ್ರುವನಬಳಿಗೆ ಬಂದು, ಪಾಪಪರಿಹಾರಕವಾದ ತನ್ನ ಕೈಯನ್ನು ಅವನ ತಲೆಯಮೇಲಿಟ್ಟು "ಆಹಾ! ಇದಲ್ಲವೇ ಆಶ್ಚರ್ಯವು! ಕ್ಷತ್ರಿಯತೇಜಸ್ಸು ಸಲ್ಪಮಾತ್ರವೂಮಾನಭಂಗವನ್ನು ಸಹಿಸಲಾರದು. ಇವನು ಇಷ್ಟು ಸಣ್ಣಬಾಲನಾಗಿದ್ದರೂ ತನ್ನ ಮಲತಾಯಿಯು ಹೇಳಿದ ಕ್ರೂರವಾಕ್ಯವನ್ನೇ ಮನಸ್ಸಿನಲ್ಲಿಟ್ಟು ಈ ಸಾಹಸಕ್ಕೆ ಪ್ರಯತ್ನಿಸಿದನಲ್ಲಾ" ಎಂದು ತನ್ನೊಳಗೆ ತಾನೇ ಆಶ್ಚರ್ಯಪಡುತ್ತ ಆ ಧ್ರುವನನ್ನು ಕುರಿತು "ವತ್ಸಾ! ನೀನೊಬ್ಬನೇ ಎಲ್ಲಿಗೆ ಹೋಗುತ್ತಿರುವೆ?ಸಮಸ್ತಸೌಭಾಗ್ಯಗಳಿಂದಲೂ ತುಂಬಿದ ನಿನ್ನ ಅರಮನೆಯನ್ನೂ ಬಿಟ್ಟುಹೀಗೆ ಏಕಾಕಿಯಾಗಿ ಹೊರಟುಬಂದುದೇಕೆ? ಮಗೂ! ನೀನು ನಿನ್ನ ಸ್ವಜನದಲ್ಲಿ ಏನೋ ಅವಮಾನಪಟ್ಟು ದುಃಖಿತನಾಗಿ ಬಂದಂತೆ ಕಾಣುವುದು! ಸಂಗತಿಯೇನು! ಹೇಳು"! ಎಂದನು. ಅದಕ್ಕಾಧ್ರುವನು "ಎಲೈ ಪೂಜ್ಯನೆ!ಇದೇನಾಶ್ಚರ್ಯವು! ನನ್ನ ವೃತ್ತಾಂತವು ನಿನಗೆ ಹೇಗೆ ತಿಳಿಯಿತು? ಪರೋಕ್ಷವ್ಯಾಪಾರಗಳನ್ನೂ ಯೋಗಮಹಿಮೆಯಿಂದಲೇ ತಿಳಿಯಬಲ್ಲ ನಿನಗೆ ಇದು ಧ್ಯಾನದೃಷ್ಟಿಯಿಂದಲೇ ತಿಳಿದಿರಬೇಕು. ಓ ಮಹಾತ್ಮಾ! ನೀನು ಹೇಳಿದುದೇ ನಿಜವಾದ

ಸಂಗತಿಯು! ನನ್ನ ಮಲತಾಯಿಯಾದ ಸುರುಚಿಯ ದುರ್ವಾಕ್ಯದಿಂದ ನಾನು ಬಹಳವಾಗಿ ನೊಂದು ಆ ಅವಮಾನವನ್ನು ಸಹಿಸಲಾರದೆ ಹೊರಟುಬಂದೆನು" ಎಂದನು. ಅದಕ್ಕಾ ನಾರದನು-"ಓ ಪುತ್ರಾ! ಒಳ್ಳೆಯದು! ನಿನ್ನ ಸಾಹಸಕ್ಕಾಗಿ ನಾನು ಸಂತೋಷಪಟ್ಟೆನು! ಆದರೆ ನೀನಾದರೋ ಇನ್ನೂ ಬಾಲನು. ಯಾವಾಗಲೂ ಆಟಪಾಟಗಳಲ್ಲಿ ಕಾಲವನ್ನು ಕಳೆಯತಕ್ಕವನು. ಇಷ್ಟು ಸಣ್ಣವಯಸ್ಸಿನಲ್ಲಿರುವ ನಿನಗೆ ಈಗಾಗಲೇ ಮಾನಾವಮಾನಗಳನ್ನು ತಿಳಿಯುವಷ್ಟು ಶಕ್ತಿಯೇ? ನಿನ್ನಂತಹ ಸಣ್ಣಮಕ್ಕಳು ಮಾನಾವಮಾನಗಳೊಂದನ್ನೂ ಅರಿಯದೆ, ಆಟವಾಡುವುದರಲ್ಲಿಯೇ ಹೊತ್ತನ್ನು ಕಳೆಯಬೇಕಾದುದು ಸಹಜವು. ಒಂದುವೇಳೆ ಆ ಮಾನಾವಮಾನಗಳನ್ನು ತಿಳಿದುಕೊಳ್ಳತಕ್ಕ ಶಕ್ತಿಯು ನಿನಗಿದ್ದರೆ, ಅದರೊಡನೆ ವಿವೇಕವೂ ಹುಟ್ಟಿರಬೇಕಲ್ಲವೆ? ನಿನಗೆ ಇನ್ನೂ ಆ ವಿವೇಕವು ಹುಟ್ಟಿದಂತಿಲ್ಲ! ಏಕೆಂದರೆ, ಮನುಷ್ಯನಿಗೆ ಮೋಹರೂಪವಾದ ಅಜ್ಞಾನದಿಂದಲ್ಲದೆ ಬೇರೆ ಯಾವಕಾರಣದಿಂದಲೂ ಮನಸ್ಸಿಗೆ ಅತೃಪ್ತಿಯೆಂಬುದು ತೋರಲಾರದು. ಈ ಮೋಹವೇ ಅಸಂತೋಷಕ್ಕೆ ಮುಖ್ಯಕಾರಣವು. ಲೋಕದಲ್ಲಿ ಸುಖವಾಗಲಿ, ದುಃಖವಾಗಲಿ ಅವರವರ ಕರ್ಮಗಳನ್ನನುಸರಿಸಿ ಬರುವುವು. ಆದುದರಿಂದ ವಿವೇಕಿಯಾದವನು ಆ ಸುಖದುಃಖಗಳಿಗೆ ಎಂದಿಗೂ ಲಕ್ಷ್ಯಕೊಡಲಾರನು. ಮೋಹದಿಂದ ವಿವೇಕಹೀನನಾದವನೇ ಹಾಗೆ ದುಃಖಕ್ಕೂ ಒಳಗಾಗುವನು. ನಿನಗೆ ಮಾನಾವಮಾನಗಳನ್ನು ನಿರ್ಣಯಿಸುವಷ್ಟು ಶಕ್ತಿಯಿದ್ದಪಕ್ಷದಲ್ಲಿ, ಅದರೊಡನೆ ಈ ವಿವೇಕವೂ ಹುಟ್ಟಿರಬೇಕಲ್ಲವೆ? ನೀನು ವಿವೇಕಿಯಾಗಿದ್ದಪಕ್ಷದಲ್ಲಿ ಈ ಸುಖದುಃಖಗಳನ್ನು ಕುರಿತು ಚಿಂತಿಸುತ್ತಲೇ ಇರಲಿಲ್ಲ. ಮಾನಾವಮಾನಗಳ ಸ್ವರೂಪವನ್ನು ತಿಳಿಯುವಷ್ಟು ಶಕ್ತಿಯು ನಿನಗಿರುವಪಕ್ಷದಲ್ಲಿ, ಅದರೊಡನೆ ವಿವೇಕವನ್ನೂ ಹೊಂದಿ, ಸುಖದುಃಖಗಳೆಲ್ಲವೂ ಕರ್ಮಾಧೀನವೆಂದು ತಿಳಿದು, ಅದಕ್ಕಾಗಿ ಲಕ್ಷ್ಯಕೊಡದೆ ಹೋಗುತಿದ್ದೆಯಲ್ಲವೆ? ಹಾಗಿಲ್ಲದೆ ನೀನು ನಿನ್ನ ಮಲತಾಯಿಯ ಮಾತಿಗೆ ಕೋಪಗೊಂಡು ಬಂದಿರುವುದರಿಂದ, ನಿನ್ನ ಬುದ್ಧಿಯು ಇನ್ನೂ ಪರಿಪಕ್ವವಾಗಿಲ್ಲವೆಂದೇ ಎಣಿಸಬೇಕಾಗಿದೆ. ದೇಹವನ್ನೇ ಆತ್ಮ

ವೆಂದು ಭ್ರಮಿಸುವುದರಿಂದುಂಟಾಗುವ ಮನೋವಿಕಾರವೇ ಮೋಹಕ್ಕೆ ಕಾರಣವೆನಿಸುವುದು. ಸಮಸ್ತಚೇತನಗಳೂ ಜ್ಞಾನವೆಂಬ ಒಂದೇ ಆಕಾರದಿಂದಿದ್ದರೂ, ಆ ಚೇತನಗಳಿಗೆ ದೇವಮನುಷ್ಯಾದಿ ಭೇದಗಳೆಲ್ಲವೂ ಕರ್ಮಾಧೀನವಾಗಿ ಬರುವುದು. ದೇಹವನ್ನೇ ಆತ್ಮವೆಂದು ಭ್ರಮಿಸತಕ್ಕವರಿಗೆ ಆ ಬುದ್ಧಿಯು ಹುಟ್ಟಲಾರದು. ಆ ವಿಧವಾದ ಭ್ರಮದಿಂದಲೇ ಸುಖದುಃಖಗಳೂ ಅವರ ಮನಸ್ಸಿಗೆ ತೋರುವುವು. ಆದುದರಿಂದ ವಿವೇಕಿಯಾದವನು, ಈಶ್ವರಾಜ್ಞೆಯನ್ನು ನಂಬಿ, ದೈವಾನುಕೂಲ್ಯವಿಲ್ಲದಿದ್ದಪಕ್ಷದಲ್ಲಿ ನಮ್ಮ ಪ್ರಯತ್ನಗಳೊಂದೂ ಫಲಿಸಲಾರವೆಂದು ತಿಳಿದು, ಇದ್ದುದರಲ್ಲಿ ಸಂತೋಷಪಡಬೇಕೇಹೊರತು ಹೆಚ್ಚು ಸುಖಕ್ಕೆ ಅಪೇಕ್ಷಿಸಬಾರದು.

ವತ್ಸಾ! ಒಂದುವೇಳೆ ನೀನು ನಿನ್ನ ತಾಯಿಯಮಾತಿನಮೇಲೆ ಪ್ರಯತ್ನಪೂರ್ವಕವಾಗಿ ಆ ಭಗವದನುಗ್ರಹವನ್ನೇ ಸಂಪಾದಿಸಬೇಕೆಂದುಹೊರಟು ಬಂದಿರಬಹುದು? ಆವಿಷಯದಲ್ಲಿಯೂ ನೀನು ದೂರಾಲೋಚನೆಯಿಲ್ಲದವನೇ! ಇದನ್ನು ತೋರಿಸಿಕೊಡುವುದಕ್ಕಾಗಿ ಒಂದೆರಡುಮಾತುಗಳನ್ನು ಹೇಳುವೆನು ಕೇಳು. ನಿನ್ನ ತಾಯಿಯು ಹೇಳಿದಂತೆ ಭಗವಂತನನ್ನು ಯೋಗಮಾರ್ಗದಿಂದ ಉಪಾಸನೆಮಾಡುವುದು ಕಷ್ಟವೋ, ಸುಲಭವೋ ಎಂಬುದನ್ನು ಆಗ ನೀನೇ ತಿಳಿಯಬಹುದು. ಬಾಲಕಾ!ಸರ್ವೇಶ್ವರನಾದ ಆ ಭಗವಂತನ ಅನುಗ್ರಹವನ್ನು ಪಡೆಯುವುದು ಸುಲಭವೆಂದು ತಿಳಿಯುವೆಯಾ?ಅಯ್ಯೋ! ಹುಚ್ಚಾ ! ಅನೇಕಜನ್ಮಗಳವರೆಗೆ ತಪಸ್ಸಿನಿಂದಲೂ, ಯೋಗಾಭ್ಯಾಸದಿಂದಲೂ ಆ ಭಗವಂತನನ್ನಾರಾಧಿಸಿ, ಎಡೆಬಿಡದೆ ಅವನನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತ, ಸರ್ವಸಂಗಪರಿತ್ಯಾಗಮಾಡಿದ ಯೋಗೀಶ್ವರರೂಕೂಡ ಆತನ ಸ್ವರೂಪವನ್ನು ಸರಿಯಾಗಿ ತಿಳಿಯಲಾರದೆ ಮೋಸಹೋಗಿರುವರು.ಹಾಗೆಎಷ್ಟೋಜನ್ಮಗಳನ್ನು ಕಳೆದಮೇಲೆಯೇ ಅವನ ಅನುಗ್ರಹವನ್ನು ಪಡೆಯಬೇಕಾಗಿರುವುದು. ಒಂದುಜನ್ಮದಲ್ಲಿ ಮಾಡಿದ ತಪಸ್ಸು ಮೊದಲಾದ ಸತ್ಕಾರ್ಯಗಳಿಂದ ಅದು ಲಭಿಸತಕ್ಕುದಲ್ಲ!ಇದನ್ನು ನಾನು ಬಹಳಅನುಭವದಿಂದಹೇಳುವೆನೇಹೊರತು,ಸುಮ್ಮನೆ ಬಾಯಿಮಾತಿಗಾಗಿ ಹೇಳುವೆನೆಂದೆಣಿಸಬೇಡ! ಹೀ

ಗೆ ಮಹಾತ್ಮರಾದ ಯೋಗೀಶ್ವರರೇ ಆ ಭಗವಂತನ ದಾರಿಯನ್ನು ಕಂಡು ಕೊಳ್ಳಲಾರದಿರುವಾಗ! ಇನ್ನೂ ಸಣ್ಣಹುಡುಗನಾದ ನೀನು ಹೇಗೆ ತಾನೇ ಆಕಾರ್ಯವನ್ನು ಸಾಧಿಸಬಲ್ಲೆ? ನೀನೇ ಯೋಚಿಸಿನೋಡು. ಆದುದರಿಂದ ಎಲೆ ವತ್ಸ! ಕಾಡಿನಲ್ಲಿ ಹೋಗಿ ಕುಳಿತಮಾತ್ರಕ್ಕೆ ಭಗವದನುಗ್ರಹವನ್ನು ಸಂಪಾದಿಸಿಬಿಡಬಹುದೆಂದು ತಿಳಿಯಬೇಡ. ಅದನ್ನು ಪಡೆಯುವುದು ನಿನ್ನಿಂದ ಸಾಧ್ಯವಲ್ಲ. ಈ ಪ್ರಯತ್ನವನ್ನು ಬಿಡು! ಇದರಿಂದ ನಿನಗೆ ದೇಹಶ್ರಮವೇಹೊರತು ಫಲವಿಲ್ಲ. ಆದರೆ "ಪುರುಷಪ್ರಯತ್ನವಿಲ್ಲದೆ ಶ್ರೇಯಸ್ಸನ್ನು ಹೊಂದುವುದು ಹೇಗೆ? ಆದುದರಿಂದ ನನ್ನಿಂದಾದಷ್ಟು ಪ್ರಯತ್ನಮಾಡಿ ನೋಡುವೆ"ನೆಂದು ಹೇಳುವೆಯಾ? ಅದೇನೋ ನಿಜವು. ಆದರೆ ಶುಭಕಾಲವು ಸಮೀಪಿಸಿ ಬಂದಾಗ ನೀನು ಪ್ರಯತ್ನಿಸಬಹುದು. ಆಗ ಸ್ವಲ್ಪಪ್ರಯತ್ನದಿಂದಲೇ ನಿನ್ನ ಉದ್ದೇಶವೂ ಕೈಗೂಡಬಹುದು. ಆ ಪ್ರಯತ್ನಕ್ಕೆ ಇದು ಕಾಲವಲ್ಲ. ಆದುದರಿಂದ ಪ್ರಕೃತಕ್ಕೆ ಈ ನಿನ್ನ ಪ್ರಯತ್ನವನ್ನು ನಿಲ್ಲಿಸಿಡು.

ಇದಲ್ಲದೆ ಈಗ ನೀನು, ನಿನಗೆ ಬಂದೊದಗಿದ ಈ ಕಷ್ಟಕ್ಕಾಗಿ ಸಂತೋಷಿಸಬೇಕೇಹೊರತು ದುಃಖಿಸಬಾರದು. ಏಕೆಂದು ಕೇಳುವೆಯಾ? ಮನುಷ್ಯನಿಗೆ ಸುಖವಾಗಲಿ ದುಃಖವಾಗಲಿ ಕರ್ಮಸಂಬಂಧದಿಂದಲೇ ಉಂಟಾಗುವುವು. ಆ ಸುಖದುಃಖಗಳನ್ನನುಭವಿಸುವುದರ ಮೂಲಕವಾಗಿಯೇ ಇವನ ಕರ್ಮಗಳೆಲ್ಲವೂ ಕ್ಷೀಣಿಸುತ್ತಬರಬೇಕಾಗಿರುವುವು. ಆ ಕರ್ಮಕ್ಷಯವಾದಹೊರತು ಮನುಷ್ಯನಿಗೆ ಮೋಕ್ಷವಿಲ್ಲ. ಆದುದರಿಂದ ತಾನು ಈ ಲೋಕದಲ್ಲಿ ಸುಖದುಃಖಗಳನ್ನನುಭವಿಸುತ್ತ ಬಂದಷ್ಟೂ, ತನ್ನ ಪುಣ್ಯಾಪಾಪಕರ್ಮಗಳು ಕ್ಷಯಿಸುತ್ತ ಬರುವುದರಿಂದ, ಮನುಷ್ಯನು, ಆ ದುಃಖಾನುಭವಕ್ಕಾಗಿ ಸಂತೋಷಿಸಬೇಕು. ಹೀಗೆ ತೃಪ್ತನಾದವನು ಕ್ರಮಕ್ರಮವಾಗಿ ತನ್ನ ಕರ್ಮಗಳೆಲ್ಲವನ್ನೂ ಅನುಭವದಿಂದಲೇ ಕಳೆದು,ಕೊನೆಗೆ ಪ್ರಕೃತಿಮಂಡಲಕ್ಕಿಂತಲೂ ಹೊರಗಿರುವ ವಿಷ್ಣುಪದವನ್ನು ಅನಾಯಾಸವಾಗಿಯೇ ಸೇರಬಹುದು. ವತ್ಸಾ! ಇದಲ್ಲದೆ ಮನುಷ್ಯನು ತನಗಿಂತಲೂ ಉತ್ತಮಸ್ಥಿತಿಯಲ್ಲಿರುವವರನ್ನು ನೋಡಿ ಸಂತೋಷಪಡಬೇಕೇಹೊರತು ಅಸೂಯೆಪಡಬಾರದು. ತನಗಿಂತಲೂ ಹೀನಸ್ಥಿತಿಯಲ್ಲಿರುವವರನ್ನು ನೋಡಿ ಪಶ್ಚಾತ್ತಾಪಪಡಬೇಕೇಹೊರ

ತು ಪರಿಹಾಸ್ಯಮಾಡಬಾರದು. ತನಗೆ ಸಮಾನರಾದವರಲ್ಲಿ ಪ್ರೀತಿಯಿಂದ ಸ್ನೇಹವನ್ನು ಬೆಳೆಸಬೇಕೇಹೊರತು, ಅವರೊಡನೆ ಸ್ಪರ್ಧೆಮಾಡಬಾರದು. ಈ ನಿಯಮದಿಂದ ನಡೆಯತಕ್ಕವನು ಎಂದಿಗೂ ಆಧ್ಯಾತ್ಮಿಕಾದಿತಾಪತ್ರಯ ಗಳಲ್ಲಿ ಸಿಕ್ಕಿ ಸಂಕಟಪಡಲಾರನು" ಎಂದನು.

ಅದಕ್ಕಾ ಧ್ರುವನು ನಾರದನನ್ನು ನೋಡಿ "ಓ ಮಹಾತ್ಮಾ! ಸುಖ ದುಃಖಗಳಿಂದ ಕದಲಿದ ಮನಸ್ಸುಳ್ಳ ನಮ್ಮಂತಹ ಮೂಢರಿಗೆ ತಿಳಿಯಲಸಾ ಧ್ಯವಾದ ಈ ತತ್ವೋಪದೇಶವನ್ನು ತಿಳಿಸಿ, ಮನಶ್ಶಾಂತಿಗೆ ಉಪಾಯವನ್ನೂ ತೋರಿಸಿ, ಸನ್ಮಾರ್ಗಕ್ಕೆ ತರುತ್ತಿರುವ ನಿನ್ನ ಕೃಪಾಗುಣಕ್ಕಾಗಿ ನಾನು ಸರ್ವವಿಧದಿಂದಲೂ ಕೃತಜ್ಞನಾಗಿರುವೆನು. ಆದರೇನು? ಕ್ಷತ್ರಜಾತಿಯ ಸ್ವಭಾವವನ್ನು ನೀನು ಕಾಣೆಯಾ? ಕ್ಷತ್ರಿಯರು ಯಾವಾಗಲೂ ಹಟವಾದಿ ಗಳು!ಸ್ವಲ್ಪಮಾತ್ರವೂ ವಿನಯವಿಲ್ಲದವರು! ಇಂತಹ ತತ್ವೋಪದೇಶಗಳಿಗೆ ಅವರ ಮನಸ್ಸು ತಗ್ಗುವುದಲ್ಲ! ನಾನೂ ಆ ಜಾತಿಯಲ್ಲಿ ಹುಟ್ಟಿದವನಾದು ದರಿಂದ, ಜಾತಿಗುಣಕ್ಕೆ ತಕ್ಕಂತೆ ನನ್ನ ಮನಸ್ಸೂ ಆ ಮೂರ್ಖಸ್ವಭಾವ ದಲ್ಲಿಯೇ ಪ್ರವರ್ತಿಸುತ್ತಿರುವುದು. ನನ್ನ ಮಲತಾಯಿಯಾದ ಸುರುಚಿಯ ವಾಗ್ಬಾಣಗಳಿಂದ ಭಿನ್ನವಾದ ನನ್ನ ಮನಸ್ಸಿನಲ್ಲಿ, ಒಡೆದ ಪಾತ್ರೆಯಲ್ಲಿ ನೀರು ನಿಲ್ಲದಂತೆ, ನೀನು ಹೇಳಿದ ಉಪದೇಶಗಳೊಂದೂ ನಿಲ್ಲಲಾರವು. ನಾನೇನು ಮಾಡಲಿ! ಓ ಮಹಾತ್ಮಾ! ನಾನು ನಿನ್ನ ಮಾತನ್ನುಲ್ಲಂಘಿಸುವೆನೆಂದು ಕೋಪಿಸಬಾರದು! ಈಗಲೂ ನಿನ್ನನ್ನು ಬಿಟ್ಟರೆ ನನಗೆ ಗತಿಯಿಲ್ಲ. ನನ್ನ ಇಷ್ಟಾನುಸಾರವಾಗಿ ಹೋಗುವುದಕ್ಕೂ ನೀನೇ ದಾರಿಯನ್ನು ತೋರಿಸಿಕೊಡ ಬೇಕು. ಆದುದರಿಂದ ಓ ಮಹರ್ಷೀ! ನನ್ನ ತಂದೆಯ ಸಿಂಹಾಸನವು ಹಾಗಿ ರಲಿ! ಇದುವರೆಗೆ ನಮ್ಮ ವಂಶದ ಹಿರಿಯರಾಗಲಿ, ಬೇರೆ ರಾಜಕುಲದವರಾ ಗಲಿ, ಇತರ ಮಹಾತ್ಮರಾಗಲಿ ಪಡೆಯದಿರತಕ್ಕ ಉತ್ತಮಸ್ಥಾನದಲ್ಲಿ, ತ್ರೈ ಲೋಕ್ಯಕ್ಕಿಂತಲೂ ಮೇಲೆ ಕುಳ್ಳಿರಬೇಕೆಂಬುದು ನನ್ನ ಕೋರಿಕೆ! ಅದಕ್ಕೆ ಉಪಾಯವೇನೆಂಬುದನ್ನು ನೀನೇ ಅನುಗ್ರಹಿಸಬೇಕು! ನಾರದಾ! ನೀನು ಸಾಕ್ಷಾತ್ತಾಗಿ ಚತುರ್ಮುಖನ ದೇಹದಿಂದಲೇ ಜನಿಸಿದವನು! ವೀಣೆಯನ್ನು ನುಡಿಸುತ್ತ ಲೋಕಹಿತಕ್ಕಾಗಿ ಸೂರ್ಯನಂತೆ ಅನವರತವೂ ಸುತ್ತುತ್ತಿರು

ವವನು. ಆದುದರಿಂದ ಈ ಸಮಯದಲ್ಲಿ ನಿನ್ನ ದರ್ಶನವು ನನಗೆ ಲಭಿಸಿದುದು ನನ್ನ ಭಾಗ್ಯವಿಶೇಷವಲ್ಲದೆ ಬೇರೆಯಲ್ಲ. ನನ್ನನ್ನುದ್ಧರಿಸಬೇಕು." ಎಂದನು. ಬಾಲಕನ ಈ ನುಡಿಯನ್ನು ಕೇಳಿ ನಾರದನು, ಅತ್ಯಂತಸಂತೋಷಪಟ್ಟು, ಅವನಲ್ಲಿ ಕನಿಕರಗೊಂಡವನಾಗಿ "ವತ್ಸಾ! ನಿನ್ನ ಧೈರ್ಯಕ್ಕಾಗಿ ನಾನು ಮೆಚ್ಚಿದೆನು. ನೀನು ಶ್ರೇಯಸ್ಸನ್ನು ಪಡೆಯಬೇಕಾದರೆ, ನಿನ್ನ ತಾಯಿಯು ಹೇಳಿದಂತೆ ಭಗವಂತನಾದ ಆ ವಾಸುದೇವನನ್ನು ಭಜಿಸುವುದೇ ಉತ್ತಮವಾದ ಉಪಾಯವು. ಆದುದರಿಂದ ನೀನು ಇದುಮೊದಲು ಏಕಾಗ್ರಚಿತ್ತನಾಗಿ ಅವನನ್ನು ಭಜಿಸುತ್ತಿರು ! ಧರ್ಮ,ಅರ್ಥ,ಕಾಮ, ಮೋಕ್ಷಗಳೆಂಬ ನಾಲ್ಕುಬಗೆಯ ಪುರುಷಾರ್ಥಗಳಲ್ಲಿ ಯಾವುದನ್ನು ಪಡೆಯಬೇಕಾದರೂ,ಶ್ರೀಮನ್ನಾರಾಯಣನ ಪಾದಸೇವೆಯೊಂದಲ್ಲದೆ ಬೇರೆ ಉತ್ತಮವಾದ ಮಾರ್ಗವಿಲ್ಲ. ಆದುದರಿಂದ ಅಪ್ಪ ಮಗು! ಇನ್ನು ನೀನು ಹೊರಡು!ನಿನಗೆ ಮಂಗಳವಾಗಲಿ! ಯಮುನಾನದಿಯ ತೀರದಲ್ಲಿ ಅತಿಪವಿತ್ರವಾದ ಮಧುವನವೆಂಬ ತೋಟವೊಂದಿರುವುದು. ಅಲ್ಲಿ ಭಗವಂತನು ನಿತ್ಯಸಾನ್ನಿಧ್ಯವನ್ನು ಮಾಡುತ್ತಿರುವನು. ಆದುದರಿಂದ ನೀನು ಅಲ್ಲಿಗೆ ಹೋಗಿ,ಯಮುನಾನದಿಯ ಪುಣ್ಯಜಲದಲ್ಲಿ ತ್ರಿಸಂಧ್ಯಾಕಾಲಗಳಲ್ಲಿಯೂ (ತ್ರಿಷವಣ) ಸ್ನಾನವನ್ನು ಮಾಡುತ್ತ ನಡೆಸಬೇಕಾದ * ಉಚಿತಕಾರ್ಯಗಳನ್ನು ನಡೆಸಿದಮೇಲೆ, ದರ್ಭಾಸನದಲ್ಲಿಕುಳಿತು, ರೇಚಕ,ಪೂರಕ,ಕುಂಭಕಗಳೆಂಬ ಮೂರಂಗಗಳುಳ್ಳ ಪ್ರಾಣಾಯಾಮದಿಂದ, ಇಂದ್ರಿಯಗಳನ್ನೂ, ಮನಸ್ಸನ್ನೂ, ಪ್ರಾಣಗಳನ್ನೂ, ಶುದ್ಧಪಡಿಸಿಕೊಂಡು, ಲೋಕಗುರುವಾದ ಆ ಭಗವಂತನನ್ನು ದೃಢಮನಸ್ಸಿನಿಂದಧ್ಯಾನಿಸುತ್ತ ಬರಬೇಕು. ಹೀಗೆ ತಪಸ್ಸನ್ನುಮಾಡುತ್ತ ಬಂದರೆ ತಪ್ಪದೆ ನಿನಗೆ ಇಷ್ಟಸಿದ್ಧಿಯಾಗುವುದು.

ಎಲೆ ವತ್ಸಾ ! ನೀನು ಈ ತಪಸ್ಸಿನಿಂದ ನಿನ್ನ ಮನಸ್ಸಿನಲ್ಲಿ ಧ್ಯಾನವಿಷಯವಾಗಿ ಮಾಡಿಕೊಳ್ಳಬೇಕಾದ ಭಗವಂತನ ಸ್ವರೂಪವೆಂತದೆಂಬು

---

* ಇಲ್ಲಿ ಉಚಿತಕಾರ್ಯಗಳೆಂಬುದರಿಂದ ಯಮನಿಯಮಗಳೂ, ದರ್ಭಾಸನವೆಂಬುದರಿಂದ ಆಸನವೂ, ಮನಸ್ಸು ಮೊದಲಾದುವನ್ನು ಶುದ್ಧಪಡಿಸಬೇಕೆಂಬುದರಿಂದ ಪ್ರಾಣಾಯಾಮ ಪ್ರತ್ಯಾಹಾರಗಳೂ, ಧ್ಯಾನಕ್ರಮವನ್ನು ಹೇಳುವುದರಿಂದ ಧ್ಯಾನಧಾರಣಗಳೂ, ಹೀಗೆ ಅಷ್ಟಾಂಗಯೋಗಗಳೂ ಸೂಚಿಸಲ್ಪಟ್ಟುದಾಗಿ ತಿಳಿಯಬೇಕು.

ದನ್ನು ತಿಳಿಸುವೆನು ಕೇಳು ! ಹೃದಯಕಮಲದಲ್ಲಿ ಗೋಚರಿಸತಕ್ಕ ಆ ಭಗವಂತನ ಮುಖದಲ್ಲಿ,ಯಾವಾಗಲೂ ಭಕ್ತಾನುಗ್ರಹವನ್ನು ಸೂಚಿಸತಕ್ಕ ಮುಗುಳ್ನಗೆ! ಕಣ್ಣುಗಳಲ್ಲಿ ತಿಳಿವು ! ಉಬ್ಬಿ ಎಸೆಳಾದ ಮೂಗು ! ಅಂದವಾದ ಹುಬ್ಬುಗಳು! ನುಣುಪಾದ ಕೆನ್ನೆ ! ದೇವತೆಗಳನ್ನೂ ಮೋಹಗೊಳಿಸತಕ್ಕ ಸೊಬಗು ! ಎಳೆಮಗುವಿನಂತೆ ಮುದ್ದುಬೀರತಕ್ಕ ಬಾಲಾಕೃತಿ ! ಅಂದವಾದ ಅವಯವಗಳು ! ಕಮಲದಳದಂತೆ ಕಣ್ಣುಗಳು ! ತೊಂಡೆಯ ಹಣ್ಣಿನಂತೆ ಕೆಂಪಾದ ತುಟಿಗಳು! ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆ!ಕಾಲಮೇಘದಂತೆ ಕಪ್ಪಾದಮೈ!ಕಂಠದಲ್ಲಿ ವನಮಾಲಿಕೆ!ಶಂಖಚಕ್ರಗದಾಪದ್ಮಗಳಿಂದ ಶೋಭಿತಗಳಾದ ನಾಲ್ಕುಭುಜಗಳು ! ತಲೆಯಿಂದ ಕಾಲಿನವರೆಗೆ ಸರ್ವಾವಯವಗಳಲ್ಲಿಯೂ ಕಿರೀಟಕುಂಡಲಕೇಯೂರಾದಿ ಭೂಷಣಗಳು!ಕಂಠದಲ್ಲಿ ಕೌಸ್ತುಭಮಣಿ!ನಡುವಿನಲ್ಲಿ ಸುತ್ತಿ ಕಟ್ಟಿದ ಪೀತಾಂಬರವೆಂಬ ಪಟ್ಟೆಮಡಿ!ಅದರಮೇಲೆ ರತ್ನಖಚಿತವಾದ ನಡುವಿನ ಪಟ್ಟಿ! ಕಾಲಿನಲ್ಲಿ ಕಾಂತಿಯಿಂದ ಹೊಳೆಯುತ್ತಿರುವ ಕಾಲಂದುಗೆಗಳು ! ನೋಡಿದಷ್ಟೂ ಮೇಲೆಮೇಲೆ ಕಣ್ಣುಗಳಿಗೂ, ಮನಸ್ಸಿಗೂ ಉಲ್ಲಾಸವನ್ನು ಹೆಚ್ಚಿಸಿ ಆಸೆಹುಟ್ಟಿಸತಕ್ಕ ಸೌಂದರ್ಯಸಮೃದ್ಧಿ!ಶಾಂತವಾದ ಆಕೃತಿ!ಇಂತಹ ದಿವ್ಯಸೌಂದರ್ಯದಿಂದೊಪ್ಪುತ್ತ, ಆಶ್ರಿತರ ಭಾಗ್ಯಸಮೃದ್ಧಿಯೋ ಎಂಬಂತಿರುವನು. ಸರ್ವಲೋಕಶರಣ್ಯನಾಗಿಯೂ,ಕರುಣಾಸಾಗರನಾಗಿಯೂ ಇರುವ ಆ ಭಗವಂತನ ಈ ಆಕಾರವನ್ನು ದೃಢವಾಗಿ ಮನಸ್ಸಿನಲ್ಲಿ ನೆಲೆಗೊಳಿಸಿಕೊಳ್ಳಬೇಕು. ಹೀಗೆ ಮುಖದಲ್ಲಿ ಮುಗುಳ್ನಗೆಯನ್ನೂ,ಕಣ್ಣುಗಳಲ್ಲಿ ಭಕ್ತವಾತ್ಸಲ್ಯಸೂಚಕವಾದ ಪ್ರಸನ್ನತೆಯನ್ನೂ ತೋರಿಸುತ್ತ,ನವರತ್ನಗಳ ಕಾಂತಿಯಿಂದ ಹೊಳೆಯುವಪಾದವನ್ನೂರಿ, ಆ ಭಗವಂತನು ತನ್ನ ಹೃದಯಕಮಲದ ಮಧ್ಯದಲ್ಲಿ ನಿಂತಿರುವಂತೆ ಮನಸ್ಸಿನಲ್ಲಿ ಭಾವಿಸಿ,ಆ ರೂಪವನ್ನೇ ಏಕಾಗ್ರಚಿತ್ತದಿಂದ ದೃಢವಾಗಿ ಧ್ಯಾನಿಸುತ್ತಿರಬೇಕು. ಹೀಗೆ ಭಗವಂತನ ದಿವ್ಯಮಂಗಳಸ್ವರೂಪವನ್ನು ಧ್ಯಾನಿಸುತ್ತ ಬರುವವನ ಮನಸ್ಸು, ಒಂದು ವಿಧವಾದ ಎಣೆಯಿಲ್ಲದ ಆನಂದದಲ್ಲಿ ಮುಳುಗಿದಂತಾಗಿ, ಆ ಸುಖವನ್ನು ಬಿಟ್ಟು ಬರಲಾರದೆ, ಅದೇಸ್ಥಿತಿಯಲ್ಲಿ ಬಹಳಹೊತ್ತಿನವರೆಗೆ ನಿಶ್ಚಲವಾಗಿ ನಿಲ್ಲುವುದು. ವತ್ಸ

ಧ್ರುವಾ ! ಇದೇ ಅಷ್ಟಾಂಗಯುಕ್ತವಾದ ಭಕ್ತಿಯೋಗವೆನಿಸುವುದು. ಕುಮಾರಾ! ಈ ಭಕ್ತಿಯೋಗಕ್ಕೆ ಮನಸ್ಸಿನಿಂದ ಮಾಡತಕ್ಕ ಈ ಧ್ಯಾನವು ಮಾತ್ರವೇ ಅಲ್ಲದೆ, ಪೂಜಾದ್ರವ್ಯಗಳನ್ನು ಸಂಗ್ರಹಿಸಿ ತಂದು,ವಾಸುದೇವ ಮಂತ್ರವನ್ನು ಜಪಿಸುತ್ತ, ಆ ಭಗವನ್ಮೂರ್ತಿಯನ್ನು ಅರ್ಚಿಸುವುದೂ ಒಂದು ಮುಖ್ಯಾಂಗವಾಗಿದೆ.ಆವಾಸುದೇವಮಂತ್ರವು ಮಹಾಮಹಿಮೆಯುಳ್ಳದು.ಅದನ್ನು ಬಾಯಿಗೆ ಬಂದಹಾಗೆ ಸಿಕ್ಕಿದ ಕಡೆಯಲ್ಲಿ ಹೇಳದೆ,ಪ್ರಯತ್ನಪೂರ್ವಕವಾಗಿ ಮನಸ್ಸಿನಲ್ಲಿ ರಹಸ್ಯವಾಗಿಟ್ಟುಕೊಳ್ಳಬೇಕು.ಅಪಾತ್ರದಲ್ಲಿ ಅದನ್ನುಪಯೋಗಿಸಬಾರದು. ಆ ಮಂತ್ರವನ್ನು ಏಳುದಿನಗಳವರೆಗೆ ದೃಢವಾಗಿ ಜಪಿಸುತ್ತಬಂದರೆ,ಗಗನಚಾರಿಗಳಾದ ಸಿದ್ಧರನ್ನೂ ಸಾಕ್ಷಾತ್ಕರಿಸಬಹುದು. “ಪ್ರಣವಸ್ವರೂಪನಾದ ಭಗವಂತನಾದ ವಾಸುದೇವನಿಗೆ ನಮಸ್ಕಾರವು” ಎಂಬುದೇ ಆಮಂತ್ರದ ಮುಖ್ಯಾರ್ಥವು.ಈಮಂತ್ರಕ್ಕೆ ವಾಸುದೇವಮಂತ್ರವೆಂದು ಹೆಸರು. ಮೂಲಮಂತ್ರದಲ್ಲಿ ಹನ್ನೆರಡು ವರ್ಣಗಳಿರುವುದರಿಂದ, ಇದನ್ನು ದ್ವಾದಶಾಕ್ಷರಮಂತ್ರವೆಂದೂ ಹೇಳುವರು.ದೇಶಕಾಲಗಳನ್ನರಿತು ಈ ಮಂತ್ರವನ್ನು ಜಪಿಸುತ್ತ,ಬಗೆಬಗೆಯ ಪೂಜಾದ್ರವ್ಯಗಳಿಂದಭಗವನ್ಮೂರ್ತಿಯನ್ನು ಪೂಜಿಸಬೇಕು.ಶುದ್ಧತೀರ್ಥವನ್ನೂ, ಪುಷ್ಪಮಾಲಿಕೆಗಳನ್ನೂ ಕಾಡಿನಲ್ಲಿ ಬೆಳೆದ ಗಡ್ಡೆ,ಗೆಣಸು, ಹಣ್ಣು ಮುಂತಾದುವುಗಳನ್ನೂ, ಉತ್ತಮವಾದ ಗರಿಕೆಯಹುಲ್ಲನ್ನೂ,ಅಂದವಾದ ಚಿಗುರುಗಳನ್ನೂ,ಭುಜಪತ್ರೆ ಮುಂತಾದ ಮರದ ತೊಗಟೆಗಳನ್ನೂ, ಇನ್ನೂ ಉತ್ತಮವಸ್ತುಗಳನ್ನೂ, ಮುಖ್ಯವಾಗಿ ಭಗವಂತನಿಗೆ ಅತ್ಯಂತಪ್ರಿಯತಮವಾದ ತುಲಸೀದಳವನ್ನೂ ಸಂಗ್ರಹಿಸಿಟ್ಟುಕೊಂಡು, ಲೋಕನಾಥನಾದ ಭಗವನ್ಮೂರ್ತಿಯನ್ನರ್ಚಿಸಬೇಕು. ಹೀಗೆ ಪೂಜಾದ್ರವ್ಯಗಳಿಂದ ಅರ್ಚಿಸಿದಮೇಲೆ, ಭೂಮಿ,ನೀರು ಮುಂತಾದುವುಗಳಲ್ಲಿಯೂ ಆ ಭಗವಂತನನ್ನು ಆವಾಹನೆಮಾಡಿ ಆರಾಧಿಸುತ್ತಬರಬೇಕು. ಹೀಗೆ ಭಗವದರ್ಚನೆಯನ್ನು ಮಾಡುವಾಗ,ಶ್ರದ್ಧೆಯಿಂದ ಆ ಭಗವನ್ಮೂರ್ತಿಯಲ್ಲಿಯೇಮನಸ್ಸನ್ನು ನೆಲೆಗೊಳಿಸಿ,ಇಂದ್ರಿಯಗಳನ್ನಡಗಿಸಿ,ಹೆಚ್ಚು ಮಾತುಗಳನ್ನಾಡದೆ, ಕಾಡಿನಲ್ಲಿ ಸಿಕ್ಕುವ ಗಡ್ಡೆಗೆಣಸುಗಳನ್ನು ಮಿತವಾಗಿ ಭುಜಿಸುತ್ತ ಬರಬೇಕು. ಆ ಭಗವಂತನ ರಾಮಾದ್ಯವತಾರಗಳನ್ನುಧ್ಯಾನಿಸು

ವಾಗಲೂ,ಆ ರೂಪವನ್ನು ದೇವಮನುಷ್ಯಾದಿಗಳೊಡನೆ ಸಮಾನವಾಗಿ ಚಿಂತಿಸದೆ,ಪರಮಾತ್ಮನೆಂಬ ಭಾವದಿಂದಲೇ ಧ್ಯಾನಿಸಬೇಕು. ಸ್ವೇಚ್ಛಾಧೀನವಾಗಿ ಆ ಅವತಾರಗಳನ್ನು ಧರಿಸುವನೆಂಬ ಭಾವದಿಂದ, ಆ ಭಗವಂತನನ್ನು ನಮ್ಮ ಹೃದಯಕಮಲದಲ್ಲಿ ಸೇರಿಸಿ ಧ್ಯಾನಮಾಡುತ್ತ, ಹಿಂದೆ ಹೇಳಿದಂತೆ ವಾಸುದೇವಮಂತ್ರಗಳಿಂದ ಪೂಜೆಗಳನ್ನೂ ನಡೆಸುತ್ತ ಬಂದರೆ, ಭಗವಂತನು ಆ ಉಪಾಸಕನ ಇಷ್ಟಾರ್ಥಗಳನ್ನು ತಪ್ಪದೆ ಕೈಗೂಡಿಸುವನು. ವಿರಕ್ತನಾದ ಮನುಷ್ಯನು, ಮೇಲೆ ಹೇಳಿದಪ್ರಕಾರದಲ್ಲಿ, ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ ದೃಢವಾದ ಭಕ್ತಿಯೋಗವನ್ನು ಹಿಡಿದು,ಆ ಭಗವಂತನನ್ನಾರಾಧಿಸುತಿದ್ದಪಕ್ಷದಲ್ಲಿ, ತಪ್ಪದೆ ಮೋಕ್ಷವನ್ನೂ ಹೊಂದಬಹುದು" ಎಂದನು. ಹೀಗೆ ನಾರದನು ತನಗೆ ಉಪದೇಶಿಸಿದ ಮಾರ್ಗವನ್ನು ಕೇಳಿ ಧ್ರುವನು, ಪರಮಸಂತೋಷಗೊಂಡವನಾಗಿ, ಆ ನಾರದನಿಗೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ,ಶ್ರೀಮನ್ನಾರಾಯಣನ ಪಾದಸಂಬಂಧದಿಂದಪವಿತ್ರವಾದ ಮಧುವನವನ್ನು ಕುರಿತು ತಪಸ್ಸಿಗಾಗಿ ಹೊರಟುಹೋದನು.ಇತ್ತಲಾಗಿ ನಾರದನೂ, ಅಲ್ಲಿಂದ ಹೊರಟು, ನೆಟ್ಟಗೆ ಉತ್ತಾನಪಾದನ ಅಂತಃಪುರಕ್ಕೆ ಹೋಗಿ, ಅವನಿಂದ ಯಥೋಚಿತವಾದ ಸತ್ಕಾರವನ್ನು ಪಡೆದು, ಸುಖಾಸೀನನಾಗಿ, ಆ ರಾಜನನ್ನು ಕುರಿತು ಹೀಗೆಂದು ಹೇಳುವನು. "ರಾಜೇಂದ್ರಾ! ಏನಿದು? ನಿನ್ನ ಮುಖವು ಏನೋ ಬಹಳವಾಗಿ ಬಾಡಿದಂತಿದೆ! ನೀನು ಮನಸ್ಸಿನಲ್ಲಿ ಏನನ್ನೋ ಚಿಂತಿಸುವಹಾಗೆ ಕಾಣುತ್ತಿದೆ. ನಿನ್ನ ಚಿಂತೆಗೆ ಕಾರಣವೇನು? ನಿನಗೆ ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳೆಲ್ಲವೂ ಕ್ರಮವಾಗಿ ಕೈಗೂಡಿ ಬರುತ್ತಿರುವುವಷ್ಟೆ ? ಇವುಗಳಲ್ಲಿ ಯಾವುದಕ್ಕೂ ಲೋಪವಿಲ್ಲವಷ್ಟೆ ? ಯಾವುದಕ್ಕಾಗಿ ನೀನು ಹೀಗೆ ಚಿಂತಾಕುಲನಾಗಿರುವೆ?" ಎಂದನು. ಅದಕ್ಕಾ ಉತ್ತಾನಪಾದನು, "ಎಲೈ ಮುನಿಶ್ರೇಷ್ಠನೆ ! ನಾನೇನು ಹೇಳಲಿ ! ದುರ್ಬುದ್ಧಿಯುಳ್ಳ ನಾನು ಸ್ತ್ರೀವಶನಾಗಿ,ಮನಸ್ಸಿನಲ್ಲಿಸ್ವಲ್ಪಮಾತ್ರವೂ ಮರುಕವಿಲ್ಲದೆ, ಐದುವರ್ಷದ ನನ್ನ ಮುದ್ದುಬಾಲನನ್ನು, ಅವನ ತಾಯಿಯೊಡನೆ ಮನೆಯಿಂದ ಹೊರಡಿಸಿಬಿಟ್ಟೆನು.ಹೀಗೆ ದಯಾಶೂನ್ಯನಾದ ನನ್ನ ಜನ್ಮವನ್ನು ಸುಡಬೇಕಲ್ಲವೆ? ಅಯ್ಯೋ! ಎಂತಹ ದುಷ್ಕಾರ್ಯವನ್ನು ಮಾಡಿದೆನು? ಎಷ್ಟು

ಕ್ರೂರಹೃದಯನಾದೆನು! ನೀಚನಾದ ನಾನು, ಎಷ್ಟೋ ಪ್ರೇಮದಿಂದ ತೊಡೆಯನ್ನೇರುವುದಕ್ಕಾಗಿ ಬಂದ ಮುದ್ದುಬಾಲನನ್ನು ಸಮೀಪಕ್ಕೆ ಸೇರಿ ಸದೆ ನಿವಾರಿಸಿದೆನಲ್ಲಾ! ಆ ಬಾಲನೇನು ಸಾಮಾನ್ಯನೆ? ಅಷ್ಟು ಬಾಲ್ಯದಶೆ ಯಲ್ಲಿಯೇ ವಿನಯಾದಿಸಮಸ್ತಗುಣಸಂಪನ್ನನಾಗಿ, ಮಹಾಬುದ್ಧಿಶಾಲಿಯೆನಿ ಸಿಕೊಂಡಿದ್ದನು. ಅಂತಹ ಪುತ್ರನನ್ನು ಸಮೀಪಕ್ಕೆ ಬರಗೊಳಿಸದೆ ನಿರಾಕ ರಿಸಿದ ನನ್ನಂತಹ ಪರಮಪಾಪಿಯು ಲೋಕದಲ್ಲಿ ಬೇರೆ ಯಾರುಂಟು? ಆ ಬಾಲನು ಈಗಾಗಲೇ ಅಡವಿಗೆ ಹೋದುದಾಗಿಯೂ ಕೇಳಿದೆನು. ಅಯ್ಯೋ! ಕಾಡಿನಲ್ಲಿ ದಿಕ್ಕಿಲ್ಲದೆ ಅಲೆಯುತ್ತಿರುವ ಆ ಬಾಲಕನ ಗತಿಯೇನು? ಹೊತ್ತು ಗೊತ್ತಿಗೆ ಅನ್ನನೀರಿಲ್ಲದೆ, ಹಸಿವಿನಿಂದ ಬಳಲಿ, ಮುಖಬಾಡಿ, ಘೋರಾ ರಣ್ಯದಲ್ಲಿ ಅಲೆಯುತ್ತಿರುವ ಆ ಬಾಲನು, ಇನ್ನೆಲ್ಲಿ ಮಲಗುವನೋ! ಯಾವ ಕ್ರೂರಮೃಗಗಳ ಬಾಯಿಗೆ ತುತ್ತಾಗುವನೋ?" ಎಂದು ಬಹಳವಾಗಿ ಪಶ್ಚಾ ತ್ತಾಪಪಟ್ಟು ಕೊರಗುತಿದ್ದನು. ಆಗ ನಾರದನು ರಾಜನನ್ನು ನೋಡಿ "ಓ ರಾಜೇಂದ್ರಾ! ದುಃಖಿಸಬೇಡ! ನಿನ್ನ ಕುಮಾರನಿಗೆ ಯಾವ ವಿಧದ ಲ್ಲಿಯೂ ಭಯವಿಲ್ಲ! ಅನಾಥರಕ್ಷಕನಾದ ಭಗವಂತನೇ ಅವನನ್ನು ಕಾಪಾಡು ವನು. ಆ ಬಾಲನ ಮಹಿಮೆಯನ್ನು ನೀನು ಕಾಣೆ! ಈ ನೆವದಿಂದಲೇ ಅವನ ಕೀರ್ತಿಯು ತ್ರೈಲೋಕ್ಯವನ್ನೂ ವ್ಯಾಪಿಸುವುದೆಂದು ತಿಳಿ! ಆ ನಿನ್ನ ಮಗನು ಬಾಲನಾಗಿದ್ದರೂ, ಇಂದ್ರಿಯಗಳನ್ನು ಜಯಿಸಿ, ಇಂದ್ರಾದಿಲೋಕಪಾಲ ಕರಿಗೂ ಅಸಾಧ್ಯವಾದ ಕರ್ಮವನ್ನು (ತಪಸ್ಸನ್ನು) ಹಿಡಿದು, ತ್ರೈಲೋಕ್ಯ ಕ್ಕಿಂತಲೂ ಮೇಲಾದ ಪದವಿಯನ್ನು ಪಡೆದು, ಶೀಘ್ರದಲ್ಲಿಯೇ ಹಿಂತಿರುಗಿ ಬರುವನು. ಇದರಿಂದ ನಿನಗೂ ಲೋಕದಲ್ಲಿ ವಿಶೇಷವಾದ ಕೀರ್ತಿಯನ್ನು ವಿಸ್ತರಿಸುವನು" ಎಂದನು. ನಾರದನ ಈ ವಾಕ್ಯವನ್ನು ಕೇಳಿಯೂ ಉತ್ತಾನ ಪಾದನು, ತನ್ನ ರಾಜ್ಯಸಂಪತ್ತನ್ನೂ ಅನಾದರಿಸಿ, ತನ್ನ ಮಗನಾದ ಧ್ರು ವನನ್ನೇ ಅನವರತವೂ ಸ್ಮರಿಸಿಕೊಂಡು ದುಃಖಿಸುತಿದ್ದನು. ವಿದುರಾ! ಇಷ್ಟ ರಲ್ಲಿ ಅತ್ತಲಾಗಿ ಧ್ರುವನು, ನಾರದಾಜ್ಞೆಯನ್ನನುಸರಿಸಿ ಮಧುವನಕ್ಕೆ ಹೋದಮೇಲೆ, ಯಮುನಾನದಿಯಲ್ಲಿ ಸ್ನಾನಮಾಡಿ, ಶುಚಿಯಾಗಿ ಬಂದು, ಆ ರಾತ್ರಿಯಲ್ಲಿ ಉಪವಾಸವಿದ್ದು, ಮನಸ್ಸನ್ನು ಬೇರೆ ವಿಷಯಗಳಿಗೆ ಹೋಗ

ದಂತೆ ತಡೆದು, ನಾರದನು ಹೇಳಿದಕ್ರಮದಿಂದ ಪರಮಪುರುಷನನ್ನು ಆರಾಧಿಸತೊಡಗಿದನು. ಈ ಭಗವದುಪಾಸನವನ್ನು ಮಾಡುವಾಗ, ಮೊದಲು ಮೂರು ದಿನಗಳಿಗೊಂದಾವರ್ತಿ ಬೇಲ, ಎಲಚಿ (ಬೋರೆ) ಮುಂತಾದ ಹಣ್ಣುಗಳನ್ನು ತನ್ನ ಜೀವಧಾರಣೆಗೆ ಬೇಕಾದಷ್ಟನ್ನುಮಾತ್ರ ಆಹಾರ ರೂಪವಾಗಿ ತೆಗೆದುಕೊಳ್ಳುತ್ತ, ಇದೇ ಕ್ರಮದಿಂದ ಮೊದಲನೆಯ ತಿಂಗಳನ್ನು ಕಳೆದನು ಆಮೇಲೆ ಆರುದಿನಗಳಿಗೊಂದಾವೃತ್ತಿ, ಹುಲ್ಲು, ಸೊಪ್ಪು ಮುಂತಾದುವುಗಳನ್ನು ಆಹಾರಕ್ಕಾಗಿ ತೆಗೆದುಕೊಳ್ಳುತ್ತ ಎರಡನೆಯ ತಿಂಗಳನ್ನು ಕಳೆದನು. ಆಮೇಲೆ ಒಂಬತ್ತುದಿನಗಳಿಗೊಂದಾವೃತ್ತಿ ಬರೀನೀರನ್ನು ಮಾತ್ರ ಕುಡಿದು ಮೂರನೆಯ ತಿಂಗಳನ್ನು ಕಳೆದನು. ಆಮೇಲೆ ಹನ್ನೆರಡು ದಿನಗಳಿಗೊಮ್ಮೆ ಗಾಳಿಯನ್ನುಮಾತ್ರ ಕುಡಿಯುತ್ತ, ನಾಲ್ಕನೆಯ ತಿಂಗಳನ್ನು ಕಳೆದನು. ಈ ವಾಯುಭಕ್ಷಣವನ್ನು ಮಾಡುವಾಗಲೇ ಕ್ರಮವಾಗಿ ಉಸಿರಾಟವನ್ನೂ ತಡೆಯುತ್ತ ಬಂದನು. ಐದನೆಯ ತಿಂಗಳಲ್ಲಿ ಸಂಪೂರ್ಣವಾಗಿ ಉಚ್ಛ್ವಾಸನಿಶ್ವಾಸಗಳನ್ನು ತಡೆದು, ಮರದ ತುಂಡಿನಂತೆ ಅಲ್ಲಾಡದೆ, ಒಂದೇ ಕಾಲಿನಿಂದ ನಿಂತು, ಪರಮಾತ್ಮನನ್ನು ಧ್ಯಾನಿಸುತಿದ್ದನು. ಶಬ್ದಾದಿವಿಷಯಗಳಲ್ಲಿ ಬೇರೆಬೇರೆಯಾಗಿ ಪ್ರವರ್ತಿಸತಕ್ಕ ಕಿವಿ, ಕಣ್ಣು, ಮೊದಲಾದ ಇಂದ್ರಿಯಗಳೆಲ್ಲವನ್ನೂ, ಅತ್ತಿತ್ತ ಕದಲದಹಾಗೆ ಮನಸ್ಸಿನಲ್ಲಿ ಅಡಗಿಸಿಟ್ಟನು.ಆ ಮನಸ್ಸನ್ನು ಸಂಕಲ್ಪ ವಿಕಲ್ಪಾದಿ ವಿಕಾರಗಳೊಂದಕ್ಕೂ ಈಡಾಗದಂತೆ ತಡೆದು, ತನ್ನ ಹೃದಯಕಮಲದಲ್ಲಿರುವ ಭಗವಂತನ ದಿವ್ಯ ಮಂಗಳವಿಗ್ರಹದಲ್ಲಿ ನೆಲೆಗೊಳಿಸಿಟ್ಟನು. ಹೀಗೆ ಮನಸ್ಸು ಆ ಭಗವತ್ಸ್ವ ರೂಪವೊಂದರಲ್ಲಿಯೇ ನೆಲೆಯಾಗಿ ನಿಂತಹಾಗೆಲ್ಲಾ ಅವನಿಗೆ ಹೊರಗಿನ ವ್ಯಾಪಾರವೊಂದೂ ತಿಳಿಯದಂತಾಯಿತು. ಇದರಿಂದ ಅವನಿಗೆ ಭಕ್ತಿಯೋಗವು ಕೈಗೂಡಿತು. ಹೀಗೆ ಧ್ರುವನು ಮಹತ್ತು ಮೊದಲಾಗಿ ಪೃಥಿವಿಯವರೆಗಿರುವ ಎಲ್ಲಾ ತತ್ವಗಳಿಗೂ ಧಾರಕನಾಗಿಯೂ,ಪ್ರಕೃತಿಪುರುಷರಿಗೆ ನಿಯಾಮಕನಾಗಿಯೂ ಇರುವ ಪರಮಪುರುಷನನ್ನು ತನ್ನಹೃದಯದಲ್ಲಿಟ್ಟುಕೊಂಡು ಧ್ಯಾನಿಸುತ್ತಿದ್ದಾಗ, ಆ ಧ್ರುವನ ತಪೋಜ್ವಾಲೆಯನ್ನು ಸಹಿಸಲಾರದೆ, ತ್ರೈಲೋಕ್ಯವೂ ಭಯದಿಂದ ನಡುಗಿ ತತ್ತಳಿಸಿತು. ಆ ಧ್ರುವಕ್ಕ

ಮಾರನು ಒಂಟೀಕಾಲಿನಿಂದ ನಿಂತುದುವೊಡಲು, ಅವನ ಕಾಲಿನ ಹೆಬ್ಬೆರಳಿನಿಂದ ಮೆಟ್ಟಿದ ಸ್ಥಳದಲ್ಲಿ ನೆಲವು ಕುಗ್ಗಿ, ಆನೆಯನ್ನೇರಿಸಿದ ಹಡಗು ಆಗಾಗ ಎಡಬಲಪಾರ್ಶ್ವಗಳಿಗೆ ಬಳುಕುವಂತೆ ಭಾರದಿಂದ ಬಳುಕುತಿತ್ತು. ಮತ್ತು, ಆ ಧ್ರುವಬಾಲಕನು ಅತ್ತಿತ್ತ ಕದಲದ ದೃಢಚಿತ್ತದಿಂದ, ತನ್ನ ಎಲ್ಲಾ ಇಂದ್ರಿಯದ್ವಾರಗಳನ್ನೂ ತಡೆದು, ಉಸಿರುಕಟ್ಟುತ್ತ ಬಂದಹಾಗೆಲ್ಲಾ, ಬೇರೆ ಎಲ್ಲಾ ಲೋಕಗಳಿಗೂ ಉಸಿರುಕಟ್ಟಿದಂತಾಯಿತು. ಆಗ ಇಂದ್ರಾದಿಲೋಕಪಾಲಕರೆಲ್ಲರೂ ಈ ಶ್ವಾಸಬಂಧನದಿಂದ ಪೀಡಿತರಾಗಿ, ಶ್ರೀಮನ್ನಾರಾಯಣನ ಸನ್ನಿಧಿಗೆ ಬಂದು ಅವನಲ್ಲಿ ಹೀಗೆಂದು ಮೊರೆಯಿಡುವರು. "ಹೇ ಪುರುಷೋತ್ತಮಾ! ಅನಾಥರಾದ ನಮ್ಮನ್ನು ರಕ್ಷಿಸಬೇಕು! ನಮಗೆ ಉಸಿರಾಡುವುದಕ್ಕೆ ಸಾಧ್ಯವಿಲ್ಲದಂತೆ ಪ್ರಾಣವಾಯುವು ತಡೆದು ಹೋಗಿರುವುದು! ಇದಕ್ಕೆ ಕಾರಣವೇನೆಂದು ತಿಳಿಯಲಿಲ್ಲ! ಆಶ್ರಿತವತ್ಸಲನಾದ ನೀನು ಕೃಪೆಯಿಟ್ಟು ನಮಗೆ ಈ ಬಾಧೆಯನ್ನು ತೊಲಗಿಸಬೇಕು. ದೀನಶರಣ್ಯನಾದ ನಿನ್ನನ್ನು ಮರೆಹೊಕ್ಕಿರುವೆವು." ಎಂದರು. ಆಗ ಮಹಾವಿಷ್ಣುವು ಅವರಲ್ಲಿ ಮರುಕಗೊಂಡು, "ಎಲೈ ದೇವತೆಗಳಿರಾ! ಭಯಪಡಬೇಡಿರಿ! ಉತ್ತಾನಪಾದನ ಮಗನಾದ ಧ್ರುವನೆಂಬ ಬಾಲಕನೊಬ್ಬನು ನನ್ನನ್ನು ಕುರಿತು ಘೋರವಾದ ತಪಸ್ಸನ್ನು ಮಾಡುತ್ತಿರುವನು. ಈ ತಪಸ್ಸಿನಲ್ಲಿ ಅವನು ತನ್ನ ಶ್ವಾಸಧಾರಣೆಯನ್ನು ಮಾಡಿರುವುದರಿಂದ, ನಿಮಗೂ ಉಸಿರಾಟಕ್ಕೆ ಅವಕಾಶವಿಲ್ಲದೆ ಶ್ವಾಸವು ಬಂಧಿಸಿರುವುದು. ಇನ್ನು ನೀವು ಇದಕ್ಕಾಗಿ ಚಿಂತಿಸಬೇಕಾದುದಿಲ್ಲ. ನಾನು ಈಗಲೇ ಹೋಗಿ ಅವನಿಗೆ ಇಷ್ಟವಾದ ವರಗಳನ್ನು ಕೊಟ್ಟು, ಅವನ ತಪಸ್ಸನ್ನು ಬಿಡಿಸುವೆನು. ನೀವು ನಿಮ್ಮ ನಿಮ್ಮ ಸ್ಥಳಗಳಿಗೆ ಹೋಗಿ ನಿಶ್ಚಿಂತರಾಗಿರಬಹುದು" ಎಂದನು. ಇಲ್ಲಿಗೆ ಎಂಟನೆಯ ಅಧ್ಯಾಯವು.

---

{ ಶ್ರೀಮನ್ನಾರಾಯಣನು ಧ್ರುವನಿಗೆ ಪ್ರತ್ಯಕ್ಷನಾಗಿ, ವರಗಳನ್ನು ಕೊಟ್ಟುದು. ಧ್ರುವನು ತನ್ನ ಪಟ್ಟಣಕ್ಕೆ ಹಿಂತಿರುಗಿದುದು. }

ವಿದುರಾ! ಭಗವಂತನ ವಾಕ್ಯವನ್ನು ಕೇಳಿ ದೇವತೆಗಳು, ತಮ್ಮ ಮನಸ್ಸಿನಲ್ಲಿದ್ದ ಭಯವನ್ನು ನೀಗಿ, ಅವನನ್ನು ನಮಸ್ಕರಿಸಿ, ನಿಶ್ಚಿಂತರಾಗಿ ತಮ್ಮ

ತಮ್ಮ ನಿವಾಸಗಳಿಗೆ ಹೋಗಿ ಸೇರಿದರು. ಒಡನೆಯೇ ಇತ್ತಲಾಗಿ ಭಗವಂತನು, ತನ್ನ ಭಕ್ತನಾದ ಧ್ರುವನನ್ನು ಅನುಗ್ರಹಿಸುವುದಕ್ಕಾಗಿ ಗರುಡಾರೂಢನಾಗಿ ಮಧುವನಕ್ಕೆ ಬಂದನು. ಇತ್ತಲಾಗಿ ಧ್ರುವನಿಗೆ ನಿಶ್ಚಲಧ್ಯಾನದಿಂದ ಪೂರ್ಣವಾಗಿ ಭಕ್ತಿಯು ಪಕ್ವವಾದಮೇಲೆ, ಅವನು ತನ್ನ ಹೃದಯಕಮಲದಲ್ಲಿಯೇ ಭಗವಂತನ ರೂಪವನ್ನು ಸಾಕ್ಷಾತ್ಕರಿಸಿಕೊಂಡು, ಅದರ ಆನಂದವನ್ನನುಭವಿಸುವಷ್ಟರಲ್ಲಿ;ಒಂದೆರಡು ಮುಹೂರ್ತದಲ್ಲಿಯೇ ಆತನಿಗೆ ಹೃದಯದಲ್ಲಿ ಕಾಣುತಿದ್ದ ಭಗವಂತನ ರೂಪವು, ಮನಸ್ಸಿನಲ್ಲಿ ಮಿಂಚಿನಂತೆ ಹೊಳೆದು, ಇದ್ದಕ್ಕಿದ್ದಹಾಗೆ ಥಟ್ಟನೆ ಕಣ್ಮರೆಯಾಯಿತು. ಒಡನೆಯೇ ಆ ಬಾಲಕನು ಆಶ್ಚರ್ಯದಿಂದ ಕಣ್ಣು ತೆರೆದು ನೋಡಿದಾಗ,ತಾನು ಮನಸ್ಸಿನಲ್ಲಿ ಸಾಕ್ಷಾತ್ಕರಿಸುತಿದ್ದ ಆ ಭಗವಂತನ ರೂಪವು ಆತನ ಕಣ್ಣಿದಿರಿಗೆ ಗೋಚರಿಸಿತು.ಹೀಗೆ ತನ್ನ ಮನಸ್ಸಿನಿಂದ ಹೊರಗೆ ಬಂದು ನಿಂತಿರುವ ಆ ಅದ್ಭುತ ರೂಪವನ್ನು ನೋಡಿ,ಅವನ ಮನಸ್ಸಿಗೆ ಆಕಸ್ಮಿಕವಾದ ಭಯವು ಹುಟ್ಟಿತು. ಭಕ್ತಿಯು ತಲೆಯೇರಿತು. ಒಡನೆಯೇ ಧ್ರುವನು ದಂಡಾಕಾರವಾಗಿ ಕೆಳಗೆ ಬಿದ್ದು ನಮಸ್ಕರಿಸಿದನು. ಅವನಿಗೆ ಮೈಮೇಲೆ ಪ್ರಜ್ಞೆಯಿಲ್ಲದಂತಾಯಿತು. ಹಾಗಿದ್ದರೂ ಪ್ರಯತ್ನಪೂರ್ವಕವಾಗಿ ಮೇಲೆದ್ದುನಿಂತು,ಆ ಭಗವಂತನನ್ನು ಸ್ತೋತ್ರಮಾಡಬೇಕೆಂದು ಬಾಯೆತ್ತುವಷ್ಟರಲ್ಲಿ, ಅವನ ಬುದ್ಧಿಗೆ ಯಾವುದೊಂದೂ ತೋರದಂತಾಯಿತು. ಸುಮ್ಮನೆ ಸ್ತಬ್ಧನಾಗಿ ನಿಂತಿದ್ದನು. ಆಗ ಆ ಬಾಲಕನು ತನ್ನ ಕಣ್ಣುಗಳಿಂದ ಆ ಭಗವಂತನ ಸೌಂದರ್ಯಾಮೃತವನ್ನು ಪಾನಮಾಡುವಂತೆಯೂ, ಬಾಯಿಂದ ಆ ಭಗವನ್ಮೂರ್ತಿಯನ್ನು ಮುತ್ತಿಕ್ಕುವಂತೆಯೂ, ತನ್ನ ತೋಳುಗಳಿಂದ ಆ ಪರಮಪುರುಷನ ದಿವ್ಯಮಂಗಳವಿಗ್ರಹವನ್ನು ಬಿಗಿದಪ್ಪಿಕೊಳ್ಳುವಂತೆಯೂ ಆತುರದಿಂದ ಕಳವಳಿಸುತ್ತಿದ್ದನು. ಹೀಗೆ ಭಕ್ತಿಪರವಶನಾಗಿ, ಬಾಯೆತ್ತಿ ಸ್ತುತಿಸುವುದಕ್ಕೂ ತಿಳಿಯದೆ, ಕೈಮುಗಿದು ಸ್ತಬ್ಧನಾಗಿ ನಿಂತಿದ್ದ ಆ ಬಾಲಕನನ್ನು ನೋಡಿ, ಸರ್ವಹೃದಯಾಂತರ್ವರ್ತಿಯಾದ ಭಗವಂತನು, ಅವನ ಮನೋಭಿಪ್ರಾಯವನ್ನು ತಿಳಿದು, ಥಟ್ಟನೆ ಸಮೀಪಕ್ಕೆ ಬಂದು, ಓಂಕಾರಸ್ವರೂಪವಾದ ತನ್ನ ಪಾಂಚಜನ್ಯವೆಂಬ ಶಂಖವನ್ನು ಆ ಬಾಲಕನ ಕೆನ್ನೆಯ



728. ಶ್ರೀಮಹಾವಿಷ್ಣುವು ಧ್ರುವನಿಗೆ ಪ್ರತ್ಯಕ್ಷನಾದುದು.

ಮೇಲೆ ಸವರಿದನು. ಹೀಗೆ ಭಗವಂತನು ತನ್ನ ಶಂಖವನ್ನು ಅವನ ಕಪೋಲಕ್ಕೆ ಮುಟ್ಟಿಸಿದೊಡನೆ, ಆ ಬಾಲಕನಿಗೆ ಪರಮಪುರುಷನ ಅನುಗ್ರಹದಿಂದ ಮಾತಾಡುವ ಶಕ್ತಿಯುಂಟಾಯಿತು. ಅನೇಕ ವೇದಾರ್ಥಗಳಿಂದ ತುಂಬಿದ ವಾಕ್ಕುಗಳೆಲ್ಲವೂ ಅವನಿಗೆ ವಶವಾದುವು. ಜೀವಾತ್ಮಪರಮಾತ್ಮರಲ್ಲಿರತಕ್ಕ ಸ್ವರೂಪಭೇದವೂ ಅವನಮನಸ್ಸಿಗೆಚೆನ್ನಾಗಿ ಗೋಚರಿಸಿತು. ಅವನ ಮನಸ್ಸಿನಲ್ಲಿದ್ದ ಆತುರವೂ, ಕಳವಳವೂ ಬಿಟ್ಟುಹೋಯಿತು. ಮತ್ತು ಅವನಿಗೆ ಶಾಶ್ವತವಾದ ಉತ್ತಮಪದವಿಯನ್ನು ಪಡೆಯತಕ್ಕಭಾಗ್ಯವೂ ಸಮೀಪಿಸಿತು. ಅವನ ಭಕ್ತಿಯು ಪರಿಪಕ್ವವಾದುದರಿಂದ ಆ ಬಾಲಕನ ಮನಸ್ಸು ತಿಳಿವಾಗಿ, ಭಗವಂತನನ್ನು ಹೀಗೆಂದು ಸ್ತೋತ್ರಮಾಡತೊಡಗಿದನು. "ಓ ದೇವಾ! ಈಗ ನಾನು ನಿನ್ನನ್ನು ಬಾಯೆತ್ತಿ ಸ್ತೋತ್ರಮಾಡಬೇಕೆಂದು ಆತುರಪಡುತ್ತಿದ್ದರೂ, ನನಗೆ ಮಾತು ಹೊರಡದಂತಾಯಿತು! ಹೀಗೆ ನಿಷ್ಫಲವಾಗಿ ಹೋಗುತಿದ್ದ ನನ್ನ ವಾಗಿಂದ್ರಿಯದಲ್ಲಿ, ನೀನು ನಿನ್ನ ಸಂಕಲ್ಪರೂಪವಾದ ಜ್ಞಾನದಿಂದ ಒಳಹೊಕ್ಕು ಅದನ್ನು ಪ್ರೇರಿಸಿದೆ. ಆಹಾ! ಅಘಟಿತಘಟನಾಸಾಮರ್ಥ್ಯವುಳ್ಳ ನಿನ್ನ ಪ್ರೇರಣೆಯಿಲ್ಲದಿದ್ದರೆ, ಬಾಲನಾದ ನಾನು ಹೇಗೆ ತಾನೇ ನಿನ್ನನ್ನು ವರ್ಣಿಸಬಲ್ಲೆನು ? ಮನುಷ್ಯನಿಗೆ ಕೈ, ಕಾಲು, ಮೊದಲಾದ ಅವಯವಗಳೆಲ್ಲವೂ ಪೂರ್ಣವಾಗಿದ್ದರೂ, ನಿನ್ನ ಪ್ರೇರಣೆಯಿಲ್ಲದೆ ಯಾವುದೂ ಕೆಲಸಮಾಡಲಾರದು. ಇಂದ್ರಿಯಗಳಾಗಲಿ, ಪ್ರಾಣಗಳಾಗಲಿ, ನಿನ್ನ ಪ್ರೇರಣೆಯಿಂದಲೇ ತಮ್ಮತಮ್ಮ ಕಾರ್ಯವನ್ನು ನಡೆಸುವುವು. ಅವೂ ನಿನ್ನ ಶರೀರಗಳಲ್ಲದೆ ಬೇರೆಯಲ್ಲ. ನೀನು ಜ್ಞಾನಾದಿಷಡ್ಗುಣಗಳಿಂದ ಪರಿಪೂರ್ಣನಾದವನು. ಪರಮಪುರುಷನಾದ ನಿನ್ನ ಪಾದಗಳಿಗೆ ನಮಸ್ಕರಿಸುವೆನು. ಓ ಭಗವಂತಾ! ನೀನೊಬ್ಬನೇ ಆಗಿದ್ದರೂ, ಇಲ್ಲಿ ಕಾಣುವ ಜಗತ್ತೆಲ್ಲವೂ ನಿನ್ನ ಸ್ವರೂಪವಲ್ಲದೆ ಬೇರೆಯಲ್ಲ. ಯಾವಾಗಲೂ ನಿನ್ನನ್ನಗಲದೆ, ನಿನಗೆ ಶಕ್ತಿರೂಪವಾಗಿರುವ ಮಾಯೆಯೆಂಬ ಪ್ರಕೃತಿಯು, ನಿನ್ನ ಸಂಕಲ್ಪದಿಂದಲೇ ಸತ್ವಾದಿಗುಣಗಳ ಹೆಚ್ಚುಕಡಿಮೆಯಿಂದ, ಕಾರ್ಯಕಾರಣರೂಪದಿಂದಿರುವ ಚಿತ್ರವಿಚಿತ್ರವಾದ ಈ ಪ್ರಪಂಚವಾಗಿ ಹರಡಿರುವುದು. ನೀನು ಜೀವಶರೀರಕನಾಗಿಸಮಸ್ತಪದಾರ್ಥಗಳಲ್ಲಿಯೂಪ್ರವೇಶಿಸಿರತಕ್ಕವ

ನು. ಬೆಂಕಿಯು ತಾನು ಸೇರಿದ ಕಟ್ಟಿಗೆಯ ಆಕಾರವನ್ನನುಸರಿಸಿ, ಸಣ್ಣದಾಗಿಯೂ, ದೊಡ್ಡದಾಗಿಯೂ, ವಕ್ರವಾಗಿಯೂ,ನೇರವಾಗಿಯೂ, ನಾನಾರೂಪದಿಂದ ಕಾಣುವಂತೆ,ವಾಸ್ತವದಲ್ಲಿ ನಿನ್ನ ಸ್ವರೂಪವೊಂದೇ ಆಗಿದ್ದರೂ ಪ್ರಕೃತಿಯ ಮತ್ತು ಜೀವನ ಸಂಬಂಧದಿಂದ ನೀನು ನಾನಾರೂಪವಾಗಿ ಕಾಣಿಸಿಕೊಳ್ಳುವೆ.ಓ ದೇವಾ! ಮೊದಲು ನಿನ್ನಿಂದ ಸಾಕ್ಷಾತ್ತಾಗಿ ಹುಟ್ಟಿದ ಚತುರ್ಮುಖನೂ, ಪ್ರಪಂಚವನ್ನು ಸೃಷ್ಟಿಸುವುದಕ್ಕೆ ತಿಳಿಯದೆ, ಕೊನೆಗೆ ನಿನ್ನನ್ನೇ ಮರೆಹೊಕ್ಕು, ನಿನ್ನಿಂದ ಆ ಜ್ಞಾನವನ್ನು ಸಂಪಾದಿಸಿ, ಆಮೇಲೆ, ನಿದ್ರೆಯಿಂದೆದ್ದವನಂತೆ ಎಚ್ಚರಗೊಂಡು ಸಮಸ್ತ ಲೋಕಗಳನ್ನೂ ಸೃಷ್ಟಿಸಿದನಲ್ಲವೆ? ಹೀಗೆ ಸೃಷ್ಟಿಕರ್ತನಾದ ಬ್ರಹ್ಮನಿಗೂ ಜ್ಞಾನ ಪ್ರದನಾದ ನಿನ್ನಪಾದಗಳನ್ನು ವಂದಿಸುವೆನು. ದೇವಾ,ಈ ನಿನ್ನ ಪಾದಾರವಿಂದವೇ ತಾಪತ್ರಯದಲ್ಲಿ ಸಿಕ್ಕಿನರಳುವವರಿಗೆ ಮೋಕ್ಷವನ್ನು ಕೊಡತಕ್ಕುದು. ನಿನ್ನಿಂದಲೇ ಸಮಸ್ತವೂ ಜೀವಿಸುವುವು.ಪ್ರಾಣಿಗಳೆಲ್ಲಕ್ಕೂ ಜ್ಞಾನಪ್ರದಾನವನ್ನು ಮಾಡತಕ್ಕ ಮಹೋಪಕಾರಿಯೂ ನೀನೇ! ಹೇ ದೀನಬಂಧೋ ! ಈ ತತ್ವವನ್ನು ತಿಳಿದವನೊಬ್ಬನೂ ನಿನ್ನನ್ನು ಮರೆಯಲಾರನು. ಈ ಉಪಕಾರಸ್ಮರಣೆಯಿಲ್ಲದವನು ಕೇವಲಕೃತಘ್ನನು! ಇದಲ್ಲದೆ ನೀನು ಕಲ್ಪವೃಕ್ಷದಂತೆ ಆಶ್ರಿತರ ಕೋರಿಕೆಗಳೆಲ್ಲವನ್ನೂ ಈಡೇರಿಸತಕ್ಕವನು. ಪ್ರಾಣಿಗಳಿಗೆ ಜನನಮರಣಾದಿಗಳನ್ನು ತಪ್ಪಿಸಿ, ನಿರತಿಶಯವಾದ ಮೋಕ್ಷವನ್ನು ಕೊಡುವುದಕ್ಕೂ ನೀನಲ್ಲದೆ ಬೇರೆ ಸಮರ್ಥರಿಲ್ಲ. ಇಂತಹ ನಿನ್ನನ್ನು ,ಈಗ ನನ್ನಹಾಗೆ ಧರ್ಮಾರ್ಥಕಾಮಗಳೆಂಬ ಅಲ್ಪಸುಖಗಳಿಗಾಗಿ ಯಾರು ಭಜಿಸುವರೋ, ಅವರು ನಿನ್ನಮಾಯೆಯಿಂದ ಮೋಹಿತರಾದ ಮೂಢರೆಂಬುದರಲ್ಲಿ ಸಂದೇಹವಿಲ್ಲ. ಮೋಕ್ಷಸುಖದೊಡನೆ ಹೋಲಿಸಿ ನೋಡಿದಪಕ್ಷದಲ್ಲಿ, ಸ್ವರ್ಗಾದಿಸುಖಗಳೆಲ್ಲವೂ ನರಕಪ್ರಾಯಗಳಾಗಿರುವುವು. ಅಂತಹ ಮೋಕ್ಷವನ್ನೇ ಕೊಡಬಲ್ಲವನಾದ ನಿನ್ನನ್ನು ಬೇರೆ ಅಲ್ಪಸುಖಗಳಿಗಾಗಿ ಭಜಿಸತಕ್ಕವರು ಮಂದಭಾಗ್ಯರಾದ ಮೂಢರೆಂದು ಹೇಳುವುದರಲ್ಲಿ ಸಂದೇಹವೇನಿದೆ? ನರಕದಂತಿರುವಸಂಸಾರದಲ್ಲಿ,ಶವಪ್ರಾಯವಾದ ಈ ಶರೀರಕ್ಕಾಗಿ,ವಿಷಯೇಂದ್ರಿಯಗಳ ಸಂಬಂಧದಿಂದ ತೋರುವ ಅಲ್ಪಸುಖವನ್ನು ಬಯಸುವುದುಅವಿವೇಕವಲ್ಲವೆ?

ಈ ಮೋಕ್ಷಸುಖವೂ ಹಾಗಿರಲಿ! ನಿನ್ನ ಪಾದಭಜನೆಯಿಂದಾಗಲಿ, ನಿನ್ನ ಪಾದಾಶ್ರಿತರ ಗುಣಕೀರ್ತನದಿಂದಾಗಲಿ ಯಾವಸುಖವುಂಟೋ ಅದನ್ನು ಜೀವಾತ್ಮನು,ತನಗೆ ಸಹಜವಾದ ಶುದ್ಧಾತ್ಮಸ್ವರೂಪವನ್ನನುಭವಿಸತಕ್ಕ ಕೈವಲ್ಯದಲ್ಲಿಯೂ ಪಡೆಯಲಾರನು. ಹೀಗಿರುವಾಗ ಕೆಲವು ಕಾಲದವರೆಗೆ ಸ್ವರ್ಗದಲ್ಲಿ ಅಲ್ಪಸಲ್ಪವಾಗಿ ಇಂದ್ರಿಯಸುಖಗಳನ್ನನುಭವಿಸುತಿದ್ದು,ತಮ್ಮ ಪುಣ್ಯಫಲವು ತೀರಿದೊಡನೆ, ಅಂತಕವೆಂಬ ಶಸ್ತ್ರದಿಂದ ಹತರಾಗಿ ವಿಮಾನದಿಂದ ಕೆಳಗೆ ಬೀಳತಕ್ಕವರ ಸುಖವೂ ಒಂದು ಸುಖವೆ? ಎಂದಿಗೂ ಅದನ್ನು ಸುಖವನ್ನಾಗಿಯೇ ಎಣಿಸಬಾರದು!ಕೊನೆಮೊದಲಿಲ್ಲದ ಮಹಾಮಹಿಮೆಯುಳ್ಳ ಎಲೈಭಗವಂತನೆ!ನಿನ್ನಲ್ಲಿ ಅಲ್ಪಸುಖಕ್ಕಾಗಿ ಆಸೆಪಟ್ಟು ಬಂದಿದ್ದರೂ,ನನಗೆ ಶುದ್ಧಮನಸ್ಸುಳ್ಳ ನಿನ್ನ ಭಕ್ತರ ಸಂಗವಾದರೂ ಲಭಿಸುವಂತೆ ಅನುಗ್ರಹಿಸಬೇಕು. ಆ ಮಹಾತ್ಮರ ಸಹವಾಸವಾದರೂ ಇದ್ದರೆ, ಅನವರತವೂ ನಿನ್ನ ಗುಣಾಮೃತವನ್ನುಪಾನಮಾಡಿ,ಅದರಿಂದ ತೃಪ್ತನಾಗುತ್ತ, ತಾಪತ್ರಯಗಳನ್ನು ನೀಗಿ,ದುಃಖಪ್ರಚುರವಾದ ಸಂಸಾರಸಮುದ್ರವನ್ನುಶೀಘ್ರದಲ್ಲಿಯೇ ದಾಟಬಹುದು. ಸತ್ಸಹವಾಸವೆಂಬುದು ಶರೀರಾವಸಾನದಲ್ಲಿ ಮೋಕ್ಷಸುಖವನ್ನು ಕೈಗೂಡಿಸುವುದು ಮಾತ್ರವಲ್ಲ! ಜೀವದಶೆಯಲ್ಲಿಯೂಕೂಡ ಅದು ಸಕಲವಿಧದಲ್ಲಿಯೂ ಶ್ರೇಯಸ್ಸಿಗೆ ಕಾರಣವಾಗಿರುವುದು. ಓ ಸರ್ವೇಶ್ವರಾ! ಯಾರು ಈ ಸತ್ಸಹವಾಸವನ್ನು ಮಾಡುವರೋ,ಅವರಿಗೆ ದೇಹದಲ್ಲಿಯಾಗಲಿ, ಆ ದೇಹಕ್ಕೆ ಅನುಬಂಧಿಗಳಾದ ಹೆಂಡಿರು, ಮಕ್ಕಳು, ಮನೆ, ಮಠ, ಮುಂತಾದುವುಗಳಲ್ಲಿಯಾಗಲಿ, ಸ್ವಲ್ಪಮಾತ್ರವೂ ಸ್ಮರಣೆಯೇ ಉಂಟಾಗಲಾರದು. ಇದರಿಂದ ನಿನ್ನ ಪಾದಾರವಿಂದದ ಮಕರಂದಗಂಧದಲ್ಲಿ ಮೋಹಗೊಂಡ ಮನಸ್ಸುಳ್ಳ ಸತ್ಪುರುಷರ ಸಹವಾಸವು, ದೇಹಸಂಬಂಧವಿದ್ದಾಗಲೂ ಸಂಸಾರದುಃಖವನ್ನು ಮರೆಸಿ ಮೋಕ್ಷಾನಂದವನ್ನೇ ಕೊಡುವುದು.ದೇವಾ!ನೀನು ಸ್ಥೂಲರೂಪವಾಗಿಯೂ,ಸೂಕ್ಷ್ಮರೂಪವಾಗಿಯೂ ಕಾಣುವ ಪ್ರಕೃತಿಗಿಂತಲೂ ವಿಲಕ್ಷಣನು! ನಿನಗೆ ಮೇಲಾದವನಾಗಲಿ, ಸಮಾನನಾದವನಾಗಲಿ ಬೇರೊಬ್ಬನಿಲ್ಲ! ನಿನಗೆ ಯಾವವಿಧವಾದ ವಿಕಾರವಾಗಲಿ ಉತ್ಪತ್ತಿಯಾಗಲಿ ಇರುವುದಿಲ್ಲ, ಲೋಕದಲ್ಲಿ ತಿರ್ಯಕ್ಕುಗಳೆಂದೂ, ಮನು

ಷ್ಯರೆಂದೂ,ಪಕ್ಷಿಗಳೆಂದೂ, ಮೃಗಗಳೆಂದೂ, ಕ್ರಿಮಿಗಳೆಂದೂ, ದೇವತೆಗಳೆಂದೂ, ದೈತ್ಯರೆಂದೂ, ಸ್ಥಾವರಗಳೆಂದೂ, ಚಿತ್ರವಿಚಿತ್ರವಾಗಿ ವ್ಯಾಪಿಸಿರುವ ಚಿದಚಿದಾತ್ಮಕವಾದ ಈ ಪ್ರಪಂಚವೆಲ್ಲವೂ, ನಿನ್ನ ಶರೀರವೆಂಬುದನ್ನು ಈಗ ನಾನು ತಿಳಿದೆನು. ಹೀಗೆ ಮಹತ್ತು ಮೊದಲಾಗಿ ಪೃಥಿವಿಯವರೆಗೆ ಹರಡಿರುವ ನಿನ್ನ ಸ್ವರೂಪವನ್ನು ಮಾತ್ರವಲ್ಲದೆ, ಈ ಸ್ಥೂಲರೂಪಕ್ಕಿಂತಲೂ ಬೇರೆಯಾದ ನಿನ್ನ ದಿವ್ಯಮಂಗಳವಿಗ್ರಹವಾವುದುಂಟೋ, ಅದನ್ನೂ ನಾನು ನಿನ್ನ ಅನುಗ್ರಹವಿಶೇಷದಿಂದಲೇ ಸಾಕ್ಷಾತ್ಕರಿಸಿಕೊಂಡೆನು. ಈ ದಿವ್ಯವಿಗ್ರಹಕ್ಕಿಂತಲೂ ಮೇಲೆ, ಸತ್ಯಜ್ಞಾನಾನಂದಸ್ವರೂಪವಾದ ನಿನ್ನ ದಿವ್ಯಾತ್ಮಸ್ವರೂಪವನ್ನೂ ನಾನು ನಿನ್ನ ಅನುಗ್ರಹದಿಂದಲೇ ತಿಳಿಯಬಲ್ಲೆನೆಂಬುದರಲ್ಲಿ ಸಂದೇಹವಿಲ್ಲ. ಆ ನಿನ್ನ ದಿವ್ಯಾತ್ಮಸ್ವರೂಪವೆಂಬ ಸೂಕ್ಷ್ಮರೂಪದಲ್ಲಿ, ಈ ಪ್ರಪಂಚದಲ್ಲಿ ಕಾಣುವ ದೇವಮನುಷ್ಯಾದಿಶರೀರಗಳೊಡನೆ ಯಾವ ಹೋಲಿಕೆಯೂ ಇಲ್ಲವಾದುದರಿಂದ,ಅದು, ತಾನು ಅಪ್ರಾಕೃತವೆಂಬುದನ್ನು ತನ್ನ ಸ್ವರೂಪದಿಂದಲೇ ನಿರ್ವಿವಾದವಾಗಿ ತೋರಿಸುತ್ತಿರುವುದು. ಹೀಗೆ ನಿನ್ನ ಅನುಗ್ರಹಬಲದಿಂದ ನಾನು ಪ್ರಪಂಚರೂಪವಾಗಿ ಹರಡಿರುವ ನಿನ್ನ ವಿಭುಸ್ವರೂಪವನ್ನೂ, ನಿನ್ನ ದಿವ್ಯ ಮಂಗಳವಿಗ್ರಹವನ್ನೂ, ಇವೆರಡಕ್ಕಿಂತಲೂ ವಿಲಕ್ಷಣವಾಗಿ ಸೂಕ್ಷ್ಮವಾಗಿರುವ ನಿನ್ನ ದಿವ್ಯಾತ್ಮಸ್ವರೂಪವನ್ನೂ ಕಾಣುತ್ತಿರುವೆನು.

ದೇವಾ! ನೀನು ಈ ಸಮಸ್ತ ಪ್ರಪಂಚವನ್ನೂ ಪ್ರಳಯಕಾಲದಲ್ಲಿ ನಿನ್ನ ಜಠರದಲ್ಲಿಯೇ ಇರಿಸಿಕೊಂಡು, ಅತ್ಯಾನಂದವನ್ನನುಭವಿಸುತ್ತ, ಆದಿಶೇಷನೊಬ್ಬನನ್ನು ಸಹಾಯವಾಗಿಟ್ಟುಕೊಂಡು, ಅವನಮೇಲೆ ಮಲಗಿ, ಯೋಗನಿದ್ರೆಯನ್ನನುಭವಿಸತಕ್ಕವನು. ಹೀಗೆ ಶೇಷಶಾಯಿಯಾಗಿ ಮಲಗಿದಾಗ ನಿನ್ನ ನಾಭಿಯಲ್ಲಿ ಹುಟ್ಟಿದ ಪ್ರಪಂಚರೂಪವಾದ ಸುವರ್ಣಕಮಲದಲ್ಲಿ, ಮಹಾತೇಜಸ್ವಿಯಾದ ಚತುರ್ಮುಖಬ್ರಹ್ಮನು ಹುಟ್ಟಿರುವನು.ಇಂತಹ ಮಹಾಮಹಿಮೆಯುಳ್ಳ ನಿನ್ನ ಪಾದಗಳಿಗೆ ನಮಸ್ಕರಿಸುವೆನು.ಹೇದೇವಾ! ನೀನು ಸಮಸ್ತಪದಾರ್ಥಗಳಲ್ಲಿಯೂ ನೆಲೆಗೊಂಡಿದ್ದರೂ, ಅವುಗಳ ದೋಷಕ್ಕೆ ಈಡಾಗದೆ, ನಿತ್ಯಮುಕ್ತನೆನಿಸುವೆ. ನೀನು ಜೀವನಂತೆ ಕರ್ಮಾಧೀನವಾದ

ಶರೀರವನ್ನು ಹೊಂದತಕ್ಕವನಲ್ಲ. ನಿನ್ನ ಜ್ಞಾನಕ್ಕೆ ಎಂದಿಗೂ ಸಂಕೋಚವಿಲ್ಲ. ನಿನಗೆ ಎಂದಿಗೂ ಯಾವವಿಧವಾದ ವಿಕಾರವೂ ಇರುವುದಿಲ್ಲ. ಜೀವನು ಸ್ವರೂಪದಲ್ಲಿ ವಿಕಾರವಿಲ್ಲದವನಾದರೂ, ಅವನ ಸ್ವಭಾವಕ್ಕೆ ವಿಕಾರವುಂಟು. ಆದುದರಿಂದ ನೀನು ಜೀವನಿಗಿಂತಲೂ ವಿಲಕ್ಷಣನು. ಮುಕ್ತಜೀವರಲ್ಲಿಯೂ, ಸಿದ್ಧರಲ್ಲಿಯೂ, ಈ ಸ್ವಭಾವವಿಕಾರಕ್ಕೆ ಅವಕಾಶವಿಲ್ಲದಿದ್ದರೂ, ಅವರಿಗೂ ನೀನು ಅಂತರಾತ್ಮನಾಗಿಯೂ, ಆದಿಪುರುಷನೆನಿಸಿಕೊಂಡು ಜಗತ್ಕಾರಣನಾಗಿಯೂ ಇರುವುದರಿಂದ, ಆ ಮುಕ್ತರಿಗಿಂತಲೂ ವಿಲಕ್ಷಣನು. ನೀನು ಷಾಡ್ಗುಣ್ಯಪರಿಪೂರ್ಣನು. ಸತ್ವರಜಸ್ತಮೋಗುಣಗಳಿಗೂ ನೀನೇ ನಿಯಾಮಕನು. ಮತ್ತು ನೀನೇ ಯಜ್ಞಗಳಿಂದ ಆರಾಧಿಸಲ್ಪಡತಕ್ಕವನು. ಆ ಯಜ್ಞಗಳಿಗೆ ತಕ್ಕ ಫಲವನ್ನು ಕೊಡತಕ್ಕವನೂ ನೀನೇ! ಹೀಗೆ ಬದ್ಧಮುಕ್ತನಿತ್ಯರೆಂಬ ಮೂರುಬಗೆಯ ಜೀವರಿಗಿಂತಲೂ, ಪ್ರಕೃತಿಗಿಂತಲೂ ವಿಲಕ್ಷಣನಾದ ನೀನು, ಜಗದ್ರಕ್ಷಣಾರ್ಥವಾಗಿ ಅನೇಕರೂಪಗಳನ್ನು ಕೈಕೊಂಡು, ಯಾವ ವಿಧದಲ್ಲಿಯೂ ತಡೆಯಿಲ್ಲದ ಸಂಕಲ್ಪರೂಪವಾದ ಜ್ಞಾನದಿಂದ, ಸಮಸ್ತಲೋಕವನ್ನೂ ಕಣ್ಣಿಟ್ಟು ಕಾಯುತ್ತ, ಅವುಗಳ ಯೋಗಕ್ಷೇಮವನ್ನು ನಡೆಸುತ್ತಿರುವೆ. ಅಂತಹ ನಿನ್ನ ಪಾದಗಳಿಗೆ ವಂದಿಸುವೆನು. ಬೇರೆಲ್ಲಿಯೂ ಕಾಣಲಾರದ ಜ್ಞಾನಾದಿಶಕ್ತಿಗಳೆಲ್ಲವೂ ನಿನ್ನೊಬ್ಬನಲ್ಲಿ ಕ್ರಮವಾಗಿ ಹೊರಪಡುತ್ತಿರುವುವು. ಮೊದಲು ಜಗತ್ತನ್ನು ಸೃಷ್ಟಿಸುವುದು, ಆ ಸೃಷ್ಟಿಸಿದ ಜಗತ್ತಿನಲ್ಲಿ ಒಳಹೊಕ್ಕು ಅದನ್ನು ನಿಯಮಿಸುವುದು, ಅದನ್ನು ಅಪಾಯವಿಲ್ಲದೆ ಕೆಲವು ಕಾಲದವರೆಗೆ ರಕ್ಷಿಸುತ್ತಿರುವುದು, ಕೊನೆಗೆ ಆ ಲೋಕಗಳೆಲ್ಲವನ್ನೂ ತನ್ನ ಗರ್ಭದಲ್ಲಿಯೇ ಹುದುಗಿಸಿಡುವುದು, ಇವೇ ಮೊದಲಾಗಿ ಬೇರೊಂದು ಕಡೆಯಲ್ಲಿ ಸಂಭವಿಸಲಾರದ ವಿಚಿತ್ರಶಕ್ತಿಗಳೆಲ್ಲವೂ ನಿನ್ನಲ್ಲಿ ಯಾವಾಗಲೂ, ಎಲ್ಲಾ ಸ್ಥಳಗಳಲ್ಲಿಯೂ, ಹೆಚ್ಚುಕಡಮೆಯಿಲ್ಲದೆ ಒಂದೇ ವಿಧವಾಗಿ ನೆಲೆಗೊಂಡಿರುವುವು. ಹೀಗೆ ವಿಚಿತ್ರಶಕ್ತಿಯುಳ್ಳವನಾಗಿ, ಜಗತ್ಕಾರಣನಾಗಿ, ಅದ್ವಿತೀಯನಾಗಿ, ಆದಿಪುರುಷನಾಗಿ, ಜ್ಞಾನಾನಂದಸ್ವರೂಪನಾಗಿ, ಕೊನೆಮೊದಲಿಲ್ಲದೆ ಅನಂತಸ್ವರೂಪನಾಗಿ, ವಿಕಾರರಹಿತನಾಗಿ, ಪರಬ್ರಹ್ಮಶಬ್ದವಾಚ್ಯನಾದ ನಿನ್ನ ಪಾದಗಳನ್ನು ಮರೆಹುಗುವೆನು. ಓ ಭಗವಂ

ತಾ ! ನೀನು ಕೇಳಿದವರಿಗೆ ಕೇಳಿದ ಇಷ್ಟಾರ್ಥಗಳೆಲ್ಲವನ್ನೂ ಕೈಗೂಡಿಸತಕ್ಕವನು. ನಿನ್ನ ಸ್ವರೂಪವೇ ಸ್ವಯಂಪುರುಷಾರ್ಥವೆನಿಸಿರುವುದು. ನೋಡಿದಮಾತ್ರಕ್ಕೆ ಮಹಾನಂದವನ್ನು ಕೊಡತಕ್ಕ ದಿವ್ಯಮಂಗಳವಿಗ್ರಹವುಳ್ಳವನಾದುದರಿಂದ, ನಿನ್ನನ್ನು ಪುರುಷಾರ್ಥಮೂರ್ತಿಯೆಂದೇ ಹೇಳುವರು. ಹೇ ಸ್ವಾಮೀ! ಇಂತಹ ನಿನ್ನ ಪಾದಾರವಿಂದಗಳನ್ನು, ತಮ್ಮತಮ್ಮ ಕೋರಿಕೆಗೆ ತಕ್ಕಂತೆ ಧರ್ಮಾರ್ಥಕಾಮಗಳನ್ನು ಬಯಸಿ ಭಜಿಸುತ್ತಿರುವ ದೀನರಾದ ನಮ್ಮಂತವರನ್ನು, ಆಶ್ರಿತರಕ್ಷಣೆಯಲ್ಲಿ ಆತುರವುಳ್ಳ ನೀನು, ನವಪ್ರಸೂತವಾದ ಧೇನುವು ತನ್ನ ಕರುವನ್ನು ಹೇಗೋಹಾಗೆ ಸರ್ವವಿಷಯದಲ್ಲಿಯೂ, ಕ್ಷೇಮವನ್ನು ಬಯಸಿ ಕಾಪಾಡುವೆ. ಇಂತಹ ನಿನ್ನನ್ನು ಮರೆಹೊಕ್ಕಿರುವೆನು" ಎಂದನು. ಹೀಗೆ ದೃಢಮನಸ್ಸುಳ್ಳವನಾಗಿಯೂ, ಬಹಳ ಬುದ್ಧಿಶಾಲಿಯಾಗಿಯೂ ಇರುವ ಆ ಧ್ರುವನು ಸ್ತುತಿಸುವುದನ್ನು ಕೇಳಿ ಭಕ್ತವತ್ಸಲನಾದ ಭಗವಂತನು, ಪ್ರೀತಿಪೂರ್ವಕವಾಗಿ ಅವನನ್ನುಕುರಿತು ಹೀಗೆಂದು ಹೇಳುವನು. "ಓ ರಾಜಕುಮಾರಾ ! ನಿನ್ನ ಮನಸ್ಸಿನಲ್ಲಿರುವ ಉದ್ದೇಶವನ್ನು ನಾನು ಬಲ್ಲೆನು! ನಿನ್ನ ಕೋರಿಕೆಯು ಬೇರೊಬ್ಬರಿಗೆ ದುರ್ಲಭವಾಗಿದ್ದರೂ, ಬಾಲನಾದ ನೀನು ಇಷ್ಟೊಂದು ಸಾಹಸಮಾಡಿ ದೃಢಸಂಕಲ್ಪನಾಗಿ ಈ ವ್ರತವನ್ನು ಅನುಷ್ಠಿಸಿದುದರಿಂದ, ನಿನ್ನ ಕೋರಿಕೆಯನ್ನು ಕೈಗೂಡಿಸುವೆನು. ವತ್ಸಾ ! ನಿನಗೆ ಮಂಗಳವಾಗಲಿ! ನಿನಗೆ ಇದುವರೆಗೆ ಲೋಕದಲ್ಲಿ ಬೇರೆ ಯಾರೂ ಪಡೆಯದುದಾಗಿಯೂ, ಅತ್ಯಂತಕಾಂತಿವಿಶಿಷ್ಟವಾಗಿಯೂ ಇರುವ ಉತ್ತಮಪದವಿಯನ್ನು ಕೊಟ್ಟಿರುವೆನು. ಸೂರ್ಯಚಂದ್ರಾದಿ ಗ್ರಹಗಳಿಂದಲೂ, ಅಶ್ವಿನಿ ಮೊದಲಾದ ತಾರೆಗಳಿಂದಲೂ, ಇತರ ಸಾಧಾರಣ ನಕ್ಷತ್ರಗಳಿಂದಲೂ ತುಂಬಿದ ಜ್ಯೋತಿರ್ಮಂಡಲವೇ ಅದಕ್ಕೆ ತಗುಲಿಸಲ್ಪಟ್ಟು,ಹೊಲಗಳಲ್ಲಿ ಧಾನ್ಯವನ್ನು ತುಳಿಯುವುದಕ್ಕಾಗಿ ಮೇಟಿಯ ಕಂಬವನ್ನು ಸುತ್ತಿ ತಿರುಗುತ್ತಿರುವ ಎತ್ತುಗಳಂತೆ, ಅದನ್ನು ಸುತ್ತುತ್ತಿರುವುದು. ಅವಾಂತರಪ್ರಳಯಗಳಲ್ಲಿ ನಾಶಹೊಂದುವ ಬೇರೆ ಎಲ್ಲಾ ಲೋಕಗಳಿಗಿಂತಲೂ ಇದು ಉಚ್ಚಸ್ಥಾನದಲ್ಲಿರುವುದರಿಂದ, ಮೂರುಲೋಕಗಳು ನಾಶಹೊಂದುವಾಗಲೂ ಈ ಸ್ಥಾನಕ್ಕೆ ನಾಶವಿಲ್ಲ.

ಧರ್ಮನೂ, ಅಗ್ನಿಯೂ, ಕಶ್ಯಪನೂ, ಶುಕ್ರನೂ, ಮತ್ತು ಸಪ್ತರ್ಷಿ ಮಂಡಲವೂ ನಕ್ಷತ್ರರೂಪದಿಂದ ಈ ಸ್ಥಾನವನ್ನು ಪ್ರದಕ್ಷಿಣಮಾಡು ತ್ತಿರುವರು. ಅಂತಹ ಉಚ್ಚಸ್ಥಾನವನ್ನು ನಿನಗೆ ಕೊಟ್ಟಿರುವೆನು. ಆದರೆ ನೀನು ಕೆಲವುಕಾಲದವರೆಗೆ ನಿನ್ನ ರಾಜ್ಯವನ್ನನುಭವಿಸಿದಮೇಲೆಯೇ ಆ ಸ್ಥಾನವು ನಿನಗೆ ಲಭಿಸುವುದು ! ನೀನು ಈ ಮಧುವನದಿಂದ ನಿನ್ನ ರಾಜ್ಯ ಕ್ಕೆ ಹೋಗಿ ಸೇರಿದೊಡನೆ,ನಿನ್ನ ತಂದೆಯಾದ ಉತ್ತಾನಪಾದನು ನಿನಗೆ ರಾ ಜ್ಯವನ್ನೊಪ್ಪಿಸಿ ಕಾಡಿಗೆ ಹೊರಡುವನು. ನೀನು ಆರಾಜ್ಯವನ್ನು ಪಡೆದಮೇಲೆ, ಇಂದ್ರಿಯಗಳನ್ನು ದುರ್ವಿಷಯಗಳಿಗೆ ಹೋಗದಂತೆ ತಡೆದು, ಇಪ್ಪತ್ತಾರು ಸಾವಿರವರುಷಗಳವರೆಗೆ ಧರ್ಮದಿಂದ ಆ ರಾಜ್ಯವನ್ನಾಳುತ್ತಿರು! ನಿನ್ನ ಒಡ ಹುಟ್ಟಿದವನಾದ ಉತ್ತಮನು, ಬೇಟೆಗಾಗಿ ಕಾಡಿಗೆ ಹೋಗಿ,ಅಲ್ಲಿಯೇ ನಷ್ಟ ನಾಗುವನು. ಅವನಲ್ಲಿ ವಿಶೇಷಪ್ರೇಮವುಳ್ಳ ನಿನ್ನ ಮಲತಾಯಿಯಾದ ಸು ರುಚಿಯೂ, ಅವನನ್ನು ಹುಡುಕುವುದಕ್ಕಾಗಿ ತಾನೂ ಕಾಡಿಗೆ ಹೋಗಿ,ಅಲ್ಲಿ ಕಾಡುಗಿಚ್ಚಿಗೆ ಸಿಕ್ಕಿ ಬೆಂದು ಸಾಯುವಳು. ನಿನ್ನ ದಯಾಸ್ವಭಾವದಿಂದ ಅ ವರಿಗೆ ನೀನಾಗಿ ಕೇಡನ್ನು ಬಯಸದಿದ್ದರೂ, ನನ್ನ ಭಕ್ತನಾದ ನಿನ್ನ ವಿಷಯದಲ್ಲಿ ದ್ರೋಹವನ್ನೆಣಿಸಿದುದಕ್ಕಾಗಿ,ಅವರು ಈ ಶಿಕ್ಷೆಯನ್ನನುಭವಿಸದೆ ತೀರದು!ಕುಮಾರಾ! ನೀನು ರಾಜ್ಯವನ್ನು ನಡೆಸುವಾಗಲೂ ಭೂರಿದಕ್ಷಿಣೆಗಳು ಳ್ಳ ಅನೇಕಯಾಗಗಳಿಂದ ನನ್ನನ್ನಾರಾಧಿಸುತಿದ್ದು,ಬೇಕಾದ ರಾಜ್ಯಭೋಗಗ ಳೆಲ್ಲವನ್ನೂ ಅನುಭವಿಸಿದಮೇಲೆ,ಕೊನೆಗೆ ನನ್ನನ್ನು ಸ್ಮರಿಸು!ಒಡನೆಯೇ ಸಮ ಸ್ತಲೋಕಗಳಿಂದಲೂ ನಮಸ್ಕರಿಸಲ್ಪಡತಕ್ಕ ಆ ಉತ್ತಮಸ್ಥಾನವನ್ನು ನೀ ನು ಸೇರುವೆ!ನನ್ನ ಅನುಗ್ರಹದಿಂದ ಲಭಿಸಿದ ಆಸ್ಥಾನವು, ಸಪ್ತಋಷಿಮಂಡ ಲಕ್ಕಿಂತಲೂ ಮೇಲಾದುದು.ಇಂದ್ರಿಯಗಳನ್ನು ಜಯಿಸಿ, ಯೋಗಬಲದಿಂದ ಆ ಸ್ಥಾನವನ್ನು ಪಡೆದವರೆಲ್ಲರೂ, ಅಲ್ಲಿಂದ ನೆಟ್ಟಗೆ ಮೋಕ್ಷವನ್ನು ಹೊಂದು ವರೇಹೊರತು ಹಿಂತಿರುಗಿ ಬರಲಾರರು” ಎಂದನು. ಹೀಗೆ ಭಗವಂತನು ಬಾಲನಾದ ಆ ಧ್ರುವನಿಗೆ ಮೋಕ್ಷಪ್ರಾಪ್ತಿಯವರೆಗೆ ಇಷ್ಟಾರ್ಥಗಳೆಲ್ಲವ ನ್ನೂ ಕೈಗೂಡಿಸಿ, ಆ ಬಾಲನು ನೋಡುತ್ತಿರುವಹಾಗೆಯೇ ಗರುಡಾರೂಢ ನಾಗಿ ಕಣ್ಮರೆಯಾದನು. ಇತ್ತಲಾಗಿ ಧ್ರುವನು, ಮೊದಲು ತಾನು ಉದ್ದೇ

ಶಿಸಿ ಬಂದಂತೆ ಭಗವದನುಗ್ರಹದಿಂದ ತನ್ನ ಕೋರಿಕೆಯೆಲ್ಲವೂ ಕೈಗೂಡಿದ್ದ ರೂ ಕೂಡ. ಮನಸ್ಸಿನಲ್ಲಿ ಅಷ್ಟಾಗಿ ಸಂತೋಷವಿಲ್ಲದೆ, ಚಿಂತಾಕುಲನಾಗಿಯೇ ತನ್ನ ಪಟ್ಟಣಕ್ಕೆ ಹಿಂತಿರುಗಿದನು. ವಿದುರಾ! ಆ ಬಾಲಕನ ಸ್ಥಿರಸಂಕಲ್ಪವನ್ನು ನೋಡಿದೆಯಾ?" ಎಂದನು. ಮೈತ್ರೇಯನು ಈ ಕಥೆಯನ್ನು ಮುಗಿಸುವಷ್ಟರಲ್ಲಿ, ವಿದುರನು “ಓ ಮಹಾತ್ಮಾ! ಇದೇನಾಶ್ಚರ್ಯವು? ಭಗವಂತನು ಆ ಧ್ರುವನಿಗೆ ಪ್ರತ್ಯಕ್ಷನಾಗಿ, ಬೇರೊಬ್ಬರಿಗೆ ದುರ್ಲಭವಾದ ಉತ್ತಮಪದವಿಯನ್ನೇ ಕೊಟ್ಟನಲ್ಲವೆ? ಆ ಧ್ರುವನೂ ಬಹುದಿನಗಳವರೆಗೆ ಶ್ರಮಪಟ್ಟು, ಆ ಭಗವಂತನ ಪಾದಾರವಿಂದವನ್ನು ದೃಢಮನಸ್ಸಿನಿಂದ ಪೂಜಿಸಿ, ಆ ಪುಣ್ಯಬಲದಿಂದ ತನ್ನ ಕೋರಿಕೆಯೆಲ್ಲವನ್ನೂ ಪಡೆದು ಬಂದನು. ಇಷ್ಟಾದರೂ ಆ ಧ್ರುವನು ಆಶಾಭಂಗಹೊಂದಿದಂತೆ ಮನಸ್ಸಿಗೆ ನೆಮ್ಮದಿಯಿಲ್ಲದೆ, ಹಿಂತಿರುಗಿದನೆಂದು ಹೇಳುವೆಯಲ್ಲವೆ? ಇದಕ್ಕೆ ಕಾರಣವೇನು?" ಎಂದನು. ಅದಕ್ಕಾ ಮೈತ್ರೇಯನು, “ವಿದುರಾ ಕೇಳು! ಮಲತಾಯಿಯಾದ ಸುರುಚಿಯ ವಾಗ್ಬಾಣಗಳಿಂದ ಬಹಳವಾಗಿ ನೊಂದಿದ್ದ ಆ ಧ್ರುವನು, ಆ ಕ್ರೂರವಾಕ್ಯವನ್ನು ಮರೆಯದೆ ಮನಸ್ಸಿನಲ್ಲಿಯೇ ಇಟ್ಟುಕೊಂಡಿದ್ದುದರಿಂದ, ಮೋಕ್ಷಪ್ರದನಾದ ಭಗವಂತನು ತನ್ನ ಕಣ್ಣಮುಂದೆ ಬಂದು ನಿಂತಿರುವಾಗಲೂ, ಅವನಲ್ಲಿ ಮುಕ್ತಿಯನ್ನು ಕೋರದೆ, ಆ ಸುರುಚಿಯಮೇಲಿನ ಕೋಪದಿಂದ ವಿವೇಕಜ್ಞಾನವಿಲ್ಲದೆ, ಅಲ್ಪಫಲಗಳನ್ನೇ ಕೇಳಿಕೊಂಡನು. ಹೀಗೆ ತಾನು ಮೋಸಹೋದುದಕ್ಕಾಗಿ ಅವನ ಮನಸ್ಸಿಗೆ ಪಶ್ಚಾತ್ತಾಪವು ಹುಟ್ಟಿತು ಅಲ್ಲಿಂದ ಹಿಂತಿರುಗುವಾಗ ಈ ಬಾಲಕನು, ತಾನು ಭಗವಂತನಲ್ಲಿ ಮುಖ್ಯವಾಗಿ ಕೇಳಬೇಕಾದ ವರವನ್ನು ಕೇಳದೆ ಬುದ್ಧಿಮೋಹಗೊಂಡು ಮೋಸಹೋದುದಕ್ಕಾಗಿ, ತನ್ನನ್ನು ತಾನೇ ಹೀಗೆಂದು ನಿಂದಿಸತೊಡಗಿದನು.

“ಅಯ್ಯೋ! ನಾನು ಎಂತಹ ಬುದ್ಧಿಯಿಲ್ಲದ ಕಾರ್ಯವನ್ನು ಮಾಡಿದೆನು! ಜಿತೇಂದ್ರಿಯರಾದಸುನಂದಾದಿಗಳೂಕೂಡ, ಎಷ್ಟೋಜನ್ಮಗಳವರೆಗೆಸಮಾಧಿಯೋಗವನ್ನು ಹಿಡಿದಮೇಲೆ, ಆ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡಿರುವರು. ಹೀಗೆ ಮಹಾಯೋಗಿಗಳಿಗೂ ಸುಲಭನಲ್ಲದ ಆ ಭಗವಂತನು, ನನ್ನಲ್ಲಿ

ಅಸಾಧಾರಣವಾದ ಪ್ರೇಮವನ್ನಿಟ್ಟು, ಆರುತಿಂಗಳ ಕಾಲದೊಳಗಾಗಿ ನನ್ನ ಕಣ್ಣಿದಿರಿಗೆ ಬಂದುನಿಂತನಲ್ಲಾ!ಆತನ ದಿವ್ಯಮಂಗಳವಿಗ್ರಹವನ್ನು ಕಣ್ಣಾರೆ ನೋಡುವ ಭಾಗ್ಯವೂ ನನಗೆ ಶೀಘ್ರದಲ್ಲಿಯೇ ಲಭಿಸಿತು.ಸ್ತೋತ್ರಾದಿಗಳಿಂ ದಲೂ ಅವನನ್ನು ಸಂತೋಷಪಡಿಸಿದೆನು. ಅಷ್ಟೇಕೆ?ಕೆಲವು ಕಾಲದವರೆಗೆ ಆತನ ಪಾದಮೂಲವನ್ನು ಹಿಡಿದು,ಅವನ ಸಮೀಪದಲ್ಲಿಯೇ ನಿಂತಿದ್ದೆನು. ಇಂತಹ ಸ್ಥಿತಿಯಲ್ಲಿಯೂ ನಾನು ಅವನಿಂದ ಪಡೆಯಬೇಕಾದ ಅನುಗ್ರಹ ವನ್ನು ಪಡೆಯದೆ ಮೋಸಹೋದೆನಲ್ಲಾ!ದೇಹಾಭಿಮಾನದಿಂದ ಆತನಪಾದ ಚ್ಛಾಯೆಯನ್ನೇ ದೂರೀಕರಿಸಿದೆನು. ಅಕಟಾ ! ನನ್ನಂತಹ ಭಾಗ್ಯಹೀನನು ಬೇರೊಬ್ಬನುಂಟೆ?ನನ್ನ ಅವಿವೇಕಕ್ಕಾಗಿ ಈಗ ನಾನು ಎಷ್ಟು ಕೊರಗಿದರೂ ಸಾಲದು!ತಾನಾಗಿ ನಿಧಿಯು ಕೈಗೆ ಸಿಕ್ಕಿದಾಗ,ಅದರ ಪ್ರಯೋಜನವನ್ನುತಿ ಳಿಯದೆ,ಅದನ್ನು ಹೊರಕ್ಕೆ ಬಿಸಾಡುವ ದುರ್ಭಾಗ್ಯನಂತೆ, ಮಂದಭಾಗ್ಯನಾ ದ ನಾನು, ಸರ್ವಾರ್ಥಪ್ರದನಾದ ಭಗವಂತನು ಕೇಳಿದುದನ್ನು ಕೊಡುವು ದಕ್ಕೆ ಸಿದ್ಧನಾಗಿ ಮುಂದೆ ಬಂದು ನಿಂತಿರುವಾಗಲೂ, ಅವನಿಂದ ಪಡೆಯ ಬೇಕಾದ ಪುರುಷಾರ್ಥವಾವುದೆಂಬುದನ್ನು ತಿಳಿಯದೆ, ಅಶಾಶ್ವತವಾದ ಅಲ್ಪ ಫಲವನ್ನು ಬಯಸಿದೆನು. ಅಮೃತವನ್ನು ತೊರೆದು ಹಾಲಾಹಲವನ್ನು ಬಯ ಸಿದ ಮೂಢನಂತಾದೆನು. ಛೀ!ಮುಖ್ಯವಾಗಿ ದೇವತೆಗಳೇ ನನ್ನ ಬುದ್ಧಿಯ ನ್ನು ಕೆಡಿಸಿ ನನ್ನನ್ನು ವಂಚಿಸಿಬಿಟ್ಟರು. ಆ ದೇವತೆಗಳೆಲ್ಲರೂ ಪುಣ್ಯಕ್ಷಯ ವಾದಮೇಲೆ ಕೆಳಗೆ ಬೀಳತಕ್ಕವರಾದುದರಿಂದ, ನಾನು ಅದಕ್ಕಿಂತಲೂ ಮೇ ಲೆ ಶಾಶ್ವತವಾದ ಉತ್ತಮಗತಿಯನ್ನು ಪಡೆಯಬಾರದೆಂಬ ಅಸೂಯೆಯಿಂದ ನನ್ನ ಬುದ್ಧಿಯನ್ನು ಮರುಳುಮಾಡಿರಬೇಕು ! ನಾರದನು ಹೇಳಿದುದು ಸ ತ್ಯವು ! ಅವನು “ಮಾನಾವಮಾನಗಳನ್ನು ಗಮನಿಸಿದಪಕ್ಷದಲ್ಲಿ, ಅದ ರಿಂದ ಮೋಹವೂ, ದೇಹವೇ ಆತ್ಮವೆಂಬ ಭ್ರಮವೂ ಹುಟ್ಟಿ, ಅದ ರಮೇಲೆ ಅಪಾರವಾದ ದುಃಖವುಂಟಾಗುವುದು” ಎಂದು ಹೇಳಿದ್ದನು. ಈಗ ಅದು ನನ್ನ ಅನುಭವದಲ್ಲಿಯೇ ಕಾಣುತ್ತಿರುವುದು.ದುರ್ಬುದ್ಧಿಯುಳ್ಳ ನಾನು ಆ ನಾರದನ ಮಾತನ್ನು ಕೇಳದೆ ಹೋದೆನು.ನಾನು ಆಗ ಮಾನಾ ವಮಾನಗಳನ್ನು ಗಮನಿಸದಿದ್ದಪಕ್ಷದಲ್ಲಿ,ನನಗೆ ಈ ವಿಧವಾದ ಹಟವಾಗಲಿ,

ದೇಹಾಭಿಮಾನವಾಗಲಿ ಹುಟ್ಟುತ್ತಿರಲಿಲ್ಲ. ನನಗೆ ದೇಹಾಭಿಮಾನವಿಲ್ಲದಿದ್ದಪಕ್ಷದಲ್ಲಿ,ಭಗವಂತನು ನನ್ನಲ್ಲಿ ಪ್ರಸನ್ನನಾಗಿದ್ದಾಗ,ನಾನು ಉತ್ತಮವಾದಮೋಕ್ಷಸುಖವನ್ನಪೇಕ್ಷಿಸುತಿದ್ದೆನೇಹೊರತು ಈ ತುಚ್ಛಸುಖವನ್ನು ಕೋರುತಿದ್ದೆನೆ ? ಮುಖ್ಯವಾಗಿ ಭಗವಂತನ ಮಾಯೆಯನ್ನು ಮೀರುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ ! ನಿದ್ರೆಯಿಂದ ಮೈಮರೆತವನಂತೆ ಆ ಭಗವಂತನ ಮಾಯೆಯಿಂದ ಮರುಳಾಗಿ ನಾನು, ದೇಹಾತ್ಮಾಭಿಮಾನದಿಂದಲೂ,ಸ್ವತಂತ್ರಾಭಿಮಾನದಿಂದಲೂ ಬುದ್ಧಿಗೆಟ್ಟು,ಸಮಸ್ತಭೂತಗಳೂಬ್ರಹ್ಮಾತ್ಮಕವಾಗಿದ್ದರೂ, ನನ್ನ ಮಲತಾಯಿಯನ್ನೂ, ಅವಳ ಮಗನನ್ನೂ ನನಗೆ ಶತ್ರುಗಳೆಂದುಭೇದಬುದ್ಧಿಯನ್ನಿಟ್ಟೆನು.ಆವಿಧವಾದ ಹೃದಯರೋಗವು ಈಗನನ್ನನ್ನು ಬಹಳವಾಗಿ ಪರಿತಪಿಸುತ್ತಿರುವುದು.ನನ್ನ ಶ್ರಮವೆಲ್ಲವೂ ವ್ಯರ್ಥವಾಯಿತು. ಎಷ್ಟೋ ಕ್ರೂರವಾದ ತಪಸ್ಸನ್ನು ಹಿಡಿದು,ಯೋಗಿಗಳಿಗೂ ದುರ್ಲಭನಾದ ಭಗವಂತನನ್ನು ಪ್ರಸನ್ನನಾಗಿಮಾಡಿಕೊಂಡೆನು. ಸಂಸಾರತಾರಕನಾದ ಆಪರಮಾತ್ಮನೇ ಕಣ್ಣೆದುರಿಗೆ ಬಂದು ನಿಂತಾಗ,ಅವನಲ್ಲಿ ಪುನರ್ಜನ್ಮಕ್ಕೆ ಕಾರಣವಾದ ಅಲ್ಪಫಲವನ್ನೇ ಯಾಚಿಸಿದೆನು. ಲೋಕದಲ್ಲಿ ಮೂಢನಾದವನು ದೊಡ್ಡಚಕ್ರವರ್ತಿಯ ಅನುಗ್ರಹವನ್ನು ಸಂಪಾದಿಸಿ,ಅವನು ಕೇಳಿದಷ್ಟು ಹಣವನ್ನುಕೊಡುವುದಕ್ಕೆ ಸಿದ್ಧನಾಗಿದ್ದಾಗಲೂ, ಬೊಗಸೆತುಂಬುವಷ್ಟು ಹೊಟ್ಟನ್ನು ಯಾಚಿಸುವಂತೆ,ಈಗ ನಾನು,ಸ್ವಾರಾಜ್ಯರೂಪವಾದ ಮೋಕ್ಷವನ್ನೇಕೊಡತಕ್ಕ ಭಗವಂತನಲ್ಲಿ ಹೋಗಿ ದೇಹಾಭಿಮಾನವನ್ನು ಯಾಚಿಸಿಕೊಂಡುಬಂದೆನು. ಇದಕ್ಕಿಂತಲೂ ದೌರ್ಭಾಗ್ಯವೇನುಂಟು?" ಎಂದು ಧ್ರುವನು ತಾನು ನಡೆಸಿದ ಕಾರ್ಯಕ್ಕಾಗಿ ಬಹಳ ಪಶ್ಚಾತ್ತಾಪಪಟ್ಟು ಕೊರಗುತ್ತಲೇ ಬಂದನು. ವಿದುರಾ! ಆ ಧ್ರುವಕುಮಾರನು ಬೇರೊಬ್ಬರಿಗೆ ದುರ್ಲಭವಾದ ದೊಡ್ಡಪದವಿಯನ್ನು ಪಡೆದಿರುವಾಗಲೂ ಹೀಗೆ ದುಃಖಿಸುವುದೇನೂ ಆಶ್ಚರ್ಯವಲ್ಲ. ಭೋಗಮೋಕ್ಷಪ್ರದನಾದ ಭಗವಂತನ ಪಾದಾಶ್ರಿತರಾದ ನಿಮ್ಮಂತವರು, ಆ ಭಗವಂತನಲ್ಲಿ ದಾಸ್ಯವೊಂದನ್ನುಹೊರತು, ಬೇರೆ ಯಾವ ಪ್ರಯೋಜನವನ್ನೂ ಅಪೇಕ್ಷಿಸಲಾರರು. ಅಂತವರು ದೈವಾಧೀನವಾಗಿ ತಮಗೆ ಲಭಿಸಿದುದರಲ್ಲಿಯೇ ತೃಪ್ತಿಹೊಂದತಕ್ಕ ಸ್ವಭಾವವುಳ್ಳವರು.

ಅದಕ್ಕಿಂತಲೂ ಹೆಚ್ಚು ಪ್ರಯೋಜನವನ್ನು ಬಯಸಲಾರರು. ಈಗ ಧ್ರುವನಾದರೋ ಇದ್ದುದರಲ್ಲಿ ತೃಪ್ತಿಯಿಲ್ಲದೆ ಉತ್ತಮಪದವಿಗೆ ಆಸೆ ಪಟ್ಟು, ಆ ಆತುರದಲ್ಲಿ, ಮೋಕ್ಷವನ್ನು ಕೇಳದೆಹೋದುದಕ್ಕಾಗಿ. ಮನಸ್ಸಿನಲ್ಲಿ ಕೊರಗುತಿದ್ದನು. ವಿದುರಾ ! ಧ್ರುವನ ಸಂಗತಿಯು ಹೀಗಾಯಿತಷ್ಟೆ? ಇಷ್ಟರಲ್ಲಿ ಅತ್ತಲಾಗಿ ಉತ್ತಾನಪಾದನು, ಪುರಜನರಿಂದ ಧ್ರುವನು ಹಿಂತಿರುಗಿ ಬರುತ್ತಿರುವನೆಂಬ ವೃತ್ತಾಂತವನ್ನು ಕೇಳಿದನು. ಆ ಮಾತನ್ನು ಕೇಳಿದಾಗ ರಾಜನಿಗೆ ದಿಗ್ಭ್ರಮೆಹಿಡಿದಂತಾಗಿ "ಆಹ ! ಏನಿದು ? ಧ್ರುವನು ಹಿಂತಿರುಗಿ ಬರುತ್ತಿರುವನೇ ! ಇದು ಸುಳ್ಳು ! ಧ್ರುವನೆಂಬರೇನು? ಹಿಂತಿರುಗಿ ಬರುವುದೆಂದರೇನು? ಅಂತಹ ಭಾಗ್ಯವು ಪಾಪಿಯಾದ ನನಗೆಲ್ಲಿ! ಆರುತಿಂಗಳ ಕೆಳಗೆ ಕಾಡಿಗೆ ಹೋದಕೂಸು ಹಿಂತಿರುಗಿಬರುವುದೆಂದರೆ, ಸತ್ತವರು ಬದುಕಿಬಂದಂತಲ್ಲವೆ? ಆ ಬಾಲನು ಘೋರಾರಣ್ಯಕ್ಕೆ ಹೋದ ಮೇಲೆ, ಅಲ್ಲಿನ ಕ್ರೂರಮೃಗಗಳ ಬಾಯಿಗೆ ಸಿಕ್ಕದೆ ಬದುಕಿಬರುವುದೆಂದರೇನು? ಅಂತಹ ಕಲ್ಯಾಣಗುಣವುಳ್ಳ ಸತ್ಪುತ್ರನನ್ನು ತಿರುಗಿ ಕಣ್ಣಿಂದನೋಡುವಷ್ಟು ಭಾಗ್ಯವು ನನಗೆತಾನೇ ಹೇಗೆ ಲಭಿಸುವುದು?" ಎಂದು ಆ ಜನರಮಾತಿನಲ್ಲಿ ನಂಬಿಕೆಯಿಲ್ಲದೆ ದುಃಖದಿಂದಲೇ ಕೊರಗುತಿದ್ದನು. ಇಷ್ಟರಲ್ಲಿಯೇ ಕೆಲವು ರಾಜದೂತರು ಬಂದು, ಧ್ರುವನು ಬರುತ್ತಿರುವುದು ನಿಜವೆಂದು ತಿಳಿಸಿದರು. ಇದರಮೇಲೆ ಉತ್ತಾನಪಾದನಿಗೆ, ಹಿಂದೆ ನಾರದನು ಹೇಳಿದ ಮಾತೂ ಸ್ಮರಣೆಗೆ ಬಂದು, ಅವನ ಮನಸ್ಸಿಗೆ ನಂಬಿಕೆಯು ಹುಟ್ಟಿ ಅಪಾರವಾದ ಹರ್ಷವುಂಟಾಯಿತು. ಆ ಶುಭವೃತ್ತಾಂತವನ್ನು ತಂದವರಿಗೆ ಉತ್ತಮ ಹಾರಗಳನ್ನೂ, ಬೇಕಾದಷ್ಟು ಧನಗಳನ್ನೂ, ಬಹುಮಾನಿಸಿದನು. ಒಡನೆಯೇ ಆ ರಾಜನು ಪರಮಾನಂದಭರಿತನಾಗಿ, ಉತ್ತಮವಾದ ಕುದುರೆಗಳಿಂದ ಕಟ್ಟಿದ ತನ್ನ ಸುವರ್ಣರಥವನ್ನೇರಿ, ಅನೇಕಬ್ರಾಹ್ಮಣರನ್ನೂ, ಕುಲವೃದ್ಧರನ್ನೂ, ಮಂತ್ರಿಗಳನ್ನೂ, ಬಂಧುಜನರನ್ನೂ ಸಂಗಡಕರೆದುಕೊಂಡು, ಆ ಧ್ರುವಕುಮಾರನನ್ನು ಇದಿರುಗೊಳ್ಳುವುದಕ್ಕಾಗಿ ಅನೇಕ ಮಂಗಳವಾದ್ಯದೊಡನೆಯೂ, ಬ್ರಾಹ್ಮಣರ ಸ್ವಸ್ತಿವಾಚನಗಳೊಡನೆಯೂ, ಪಟ್ಟಣದಿಂದ ಹೊರಟನು. ಇದರಂತೆಯೇ ಅವನ ಪತ್ನಿಯರಾದ ಸುರುಚಿ

ಸುನೀತಿಯರಿಬ್ಬರೂ, ರತ್ನಮಯವಾದ ಪಲ್ಲಕ್ಕಿಯಮೇಲೆ ಕುಳಿತು,ಉತ್ತಮು ನನ್ನೂ ಸಂಗಡಕರೆದುಕೊಂಡು ಹೊರಟುಬಂದರು. ಹೀಗೆ ರಾಜನು ಸಪ ರಿವಾರನಾಗಿ ಹೊರಟು, ಪಟ್ಟಣದಿಂದ ಸ್ವಲ್ಪದೂರದವರೆಗೆ ಬರುವಷ್ಟ ರಲ್ಲಿಯೇ, ಪುರೋಬ್ಯಾನದ ಸಮೀಪದಲ್ಲಿ, ತನಗಿದಿರಾಗಿ ಬರುತ್ತಿರುವ ಧ್ರುವಕುಮಾರನನ್ನು ಕಂಡನು ಅವನನ್ನು ನೋಡಿದೊಡನೆ ರಥದಿಂದ ಕೆಳಕ್ಕಿಳಿದು, ಪುತ್ರಪ್ರೇಮದಿಂದ ಮೈಮರೆತು, ಮುಂದೆ ಹೋಗಿ ಆ ಧ್ರು ವನನ್ನು ತನ್ನ ತೋಳುಗಳಿಂದ ಬಿಗಿದಪ್ಪಿಕೊಂಡನು. ಬಹುಕಾಲದಿಂದ ಆ ಮಗನನ್ನಗಲಿದ ದುಃಖಕ್ಕಾಗಿ ನಿಟ್ಟುಸಿರನ್ನು ಬಿಟ್ಟು,ಭಗವಂತನ ಪಾದಸ್ಪ ರ್ಶದಿಂದ ಪವಿತ್ರವಾದ ದೇಹವುಳ್ಳ ಆ ಪುತ್ರನ ತಲೆಯನ್ನು ಆಗಾಗ ಪ್ರೀತಿ ಯಿಂದ ಮೂಸಿ ಮುತ್ತಿಕ್ಕುತ್ತ, ಆತನ ದೇಹವೆಲ್ಲವನ್ನೂ, ನೆನೆಸುವಂತೆ ಕಣ್ಣುಗಳಲ್ಲಿ ಧಾರೆಧಾರೆಯಾಗಿ ಆನಂದಬಾಷ್ಪವನ್ನು ಸುರಿಸುತಿದ್ದನು. ಧ್ರುವನೂಕೂಡ ಹಿಂದಿನ ವೈರವನ್ನು ಮರೆತು ಪ್ರೇಮದಿಂದ ಬಂದಪ್ಪಿದತ ನ್ನತಂದೆಯ ಪಾದಗಳಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿ,ಅವನಮಂಗ ಳಾಶೀರ್ವಾದಗಳನ್ನು ಪಡೆದು,ಅಲ್ಲಿಂದ ತನ್ನಮಾತೆಯರ ಬಳಿಗೆ ಬಂದು,ಅವರ ಪಾದಗಳನ್ನೂ ಹಿಡಿದು ನಮಸ್ಕರಿಸಿದನು. ಆಗ ಸುರುಚಿಯು ತನ್ನ ಕಾಲು ಗಳಮೇಲೆ ಬಿದ್ದು ನಮಸ್ಕರಿಸುತ್ತಿರುವ ಧ್ರುವನನ್ನು ಕೈಹಿಡಿದು ಮೇಲಕ್ಕೆ ತ್ತಿ, ಪ್ರೀತಿಯಿಂದಾಲಿಂಗಿಸಿ, ಕಣ್ಣೀರುಸುರಿಸುತ್ತ "ಕುಮಾರಾ ! ಚಿರಂ ಜೀವಿಯಾಗಿರು" ಎಂದು ಆಶೀರ್ವದಿಸಿದಳು. ವಿದುರಾ ! ಧ್ರುವನಲ್ಲಿ ಅಷ್ಟು ವೈರವನ್ನಿಟ್ಟಿದ್ದ ಆ ಮಲತಾಯಿಯ ಮನಸ್ಸೂ ಅವನ ವಿಷಯ ದಲ್ಲಿ ಹೇಗೆ ಕರಗಿತು ನೋಡು. ಪ್ರವಾಹವು ಯಾವಾಗಲೂ ಹಳ್ಳದ ಕ ಡೆಗೆ ಸರಿಯುವಂತೆ, ಯಾವನು ತನ್ನ ಸದ್ಗುಣಗಳಿಂದ ಆ ಶ್ರೀಹರಿಯನ್ನು ಒಲಿಸುವನೋ, ಅವನಿಗೆ ಸಮಸ್ತಭೂತಗಳೂ ತಾವಾಗಿಯೇ ಬಂದೆರಗುವು ವು. ಅಂತವರಲ್ಲಿ ಎಷ್ಟೋ ಕಠಿನಮನಸ್ಸಾದರೂ ಕರಗಿ ಹೋಗುವುದು. ಆ ಮೇಲೆ ಧ್ರುವನು ತನ್ನ ಒಡಹುಟ್ಟಿದವನಾದ ಉತ್ತಮನಬಳಿಗೆ ಬಂದು,ಅವ ನನ್ನೂ ಪ್ರೇಮದಿಂದಾಲಂಗಿಸಿಕೊಂಡನು. ಹಾಗೆಯೇ ಉತ್ತಮನೂ ಅವನ ಗುಣಗಳಿಗೆ ಮನಸ್ಸುಕರಗಿ, ಅವನನ್ನಪ್ಪಿಕೊಂಡನು. ಇಬ್ಬರೂ ಪರಸ್ಪರಾ

ಲಿಂಗನಸೌಖ್ಯದಿಂದ ಪುಲಕಿತವಾದ ಮೈಯುಳ್ಳವರಾಗಿ, ಆನಂದಬಾಷ್ಪವೆನ್ನು ಸುರಿಸಿದರು. ಧ್ರುವನ ಹೆತ್ತತಾಯಿಯಾದ ಸುನೀತಿಯೂಕೂಡ, ಪ್ರಾಣಕ್ಕಿಂತಲೂ ಪ್ರಿಯತಮನಾದ ತನ್ನ ಮಗನನ್ನು ಗಾಢಾಲಿಂಗನಮಾಡಿಕೊಂಡು, ಆತನ ದೇಹಸ್ಪರ್ಶದಿಂದುಂಟಾದ ಆನಂದದಲ್ಲಿ ತನ್ನ ಮೊದಲಿನ ದುಃಖವೆಲ್ಲವನ್ನೂ ಮರೆತಳು. ಅವಳ ಸ್ತನಾಗ್ರಗಳಿಂದ ಹಾಲು ಸ್ರವಿಸುತಿತ್ತು. ಕಣ್ಣುಗಳಲ್ಲಿ ಆನಂದಬಾಷ್ಪವು ಸುರಿಯಿತು. ಹೀಗೆ ತಾಯಿ ಮಕ್ಕಳಿಬ್ಬರೂ ಪ್ರೇಮದಿಂದಪ್ಪಿಕೊಂಡು, ಧಾರೆಧಾರೆಯಾಗಿ ಎಡಬಿಡದೆ ಸುರಿಯುವ ಆನಂದಬಾಷ್ಪದಿಂದ ಒಬ್ಬರ ಮೈಯನ್ನೊಬ್ಬರು ತೊಯಿಸುತ್ತಿರುವುದನ್ನು ನೋಡಿ, ಅಲ್ಲಿದ್ದ ಜನರೆಲ್ಲರೂ ಸಂತೋಷಗೊಂಡು, ರಾಜನನ್ನು ಹೀಗೆಂದು ಸ್ತೋತ್ರಮಾಡುವರು. "ಹೇ ರಾಜೇಂದ್ರಾ! ನಿನ್ನ ಭಾಗ್ಯವೇ ಭಾಗ್ಯವು! ಮಹಾಗುಣಾಢ್ಯನಾದ ನಿನ್ನ ಪುತ್ರನು ಏಕಾಕಿಯಾಗಿ ಘೋರಾರಣ್ಯಕ್ಕೆ ಹೋಗಿ ನಷ್ಟಪ್ರಾಯನಾಗಿದ್ದರೂ, ತಿರುಗಿ ಬದುಕಿಬಂದನು. ಈ ನಿನ್ನ ಪುತ್ರನು ಸಮಸ್ತಭೂಮಂಡಲವನ್ನೂ ಏಕಾಧಿಪತ್ಯದಿಂದಾಳುವುದರಲ್ಲಿ ಸಂದೇಹವಿಲ್ಲ. ಲೋಕದಲ್ಲಿ ಸಂಸಾರಬದ್ಧರಾದವರು. ಯಾವನ ಪಾದಾಶ್ರಯದಿಂದ ದುರ್ಜಯವಾದ ಮೃತ್ಯುಭಯವನ್ನೇ ಜಯಿಸುವರೋ, ಅಂತಹ ಭಗವಂತನು ಪೂರ್ವಜನ್ಮದಲ್ಲಿ ನಿನ್ನಿಂದ ಚೆನ್ನಾಗಿ ಪೂಜಿತನಾಗಿರಬೇಕು. ಹಾಗಿಲ್ಲದ ಪಕ್ಷದಲ್ಲಿ ನಿನಗೆ ಇಂತಹ ಭಾಗ್ಯವೆಲ್ಲಿಯದು?" ಎಂದರು. ಹೀಗೆ ಜನರೆಲ್ಲರೂ ತನ್ನ ಭಾಗ್ಯವನ್ನು ಕೊಂಡಾಡುತ್ತಿರಲು, ಉತ್ತಾನಪಾದನು, ತನ್ನ ಪುತ್ರರಿಬ್ಬರನ್ನೂ ಪಟ್ಟದಾನೆಯಮೇಲೆ ಕುಳ್ಳಿರಿಸಿಕೊಂಡು, ಅನೇಕಜನಗಳಿಂದ ಸ್ತುತಿಸಲ್ಪಡುತ್ತ, ಪರಮಾನಂದಭರಿತನಾಗಿ ಪಟ್ಟಣವನ್ನು ಪ್ರವೇಶಿಸಿದನು. ಇವನು, ಪುರಪ್ರವೇಶವನ್ನು ಮಾಡುವುದಕ್ಕೆಮೊದಲೇ, ಪುರವಾಸಿಗಳೆಲ್ಲರೂ ಮಹೋತ್ಸಾಹದಿಂದ ಪಟ್ಟಣದ ನಾನಾಭಾಗಗಳನ್ನೂ ಅಲಂಕರಿಸಿಟ್ಟಿದ್ದರು. ಮನೆಮನೆಯ ಬಾಗಲಿಗೂ ಮಾವಿನ ಚಿಗುರಿನ ತೋರಣಗಳು! ನಡುನಡುವೆ ಮಕರತೋರಣಗಳು! ಅಲ್ಲಲ್ಲಿ ತೂಗಾಡುತ್ತಿರುವ ಪುಷ್ಪಮಾಲಿಕೆಗಳು! ಅಲ್ಲಲ್ಲಿ ಮುತ್ತಿನ ಕುಚ್ಚುಗಳು! ಒಂದೊಂದು ಮನೆಯ ಬಾಗಿಲಲ್ಲಿಯೂ ಆರತಿ

ದೀಪಗಳಿಂದ ಬೆಳಗಿದ ಪೂರ್ಣಕುಂಭಗಳು ! ಅಲ್ಲಲ್ಲಿ ಬಂಗಾರದ ಕುಸುರಿಗಳಿಂದಲಂಕೃತವಾದ ಗೋಪುರಗಳು ! ವಿಚಿತ್ರಧ್ವಜಾಲಂಕೃತಗಳಾದ ಪ್ರಾಕಾರ ದೇವಾಲಯಗಳು ! ಒಂದೊಂದು ಬಾಗಿಲಿಗೂ ಬಾಳೆಯ ಕಂಬಗಳು ! ಆ ಬಾಳೆಯ ಕಂಬಗಳ ಪಕ್ಕದಲ್ಲಿ ಹೊಂಬಾಳೆಯ ವೋತೆಗಳು ! ಹೀಗೆ ಸರ್ವಾಲಂಕಾರಭೂಷಿತವಾಗಿ ದೇವವಿಮಾನಗಳಂತೆ ನೇತ್ರಾನಂದಕರವಾದ ಆ ಪಟ್ಟಣದ ಒಂದೊಂದು ಅಂಗಳಗಳೂ, ಒಂದೊಂದು ಬೀದಿಗಳೂ, ಒಂದೊಂದು ಓಣಿಗಳೂ, ಸುಗಂಧ ಶೀತಲವಾದ ಚಂದನಜಲದಿಂದ ಸೇಚಿತವಾಗಿದ್ದುವು. ಅಲ್ಲಲ್ಲಿ ಜನರು, ಮಂಗಳಾರ್ಥವಾಗಿ ಬತ್ತದರಳುಗಳನ್ನೂ, ಅಕ್ಷತೆಗಳನ್ನೂ, ಪುಷ್ಪಗಳನ್ನೂ ಇತರವಿಧವಾದ ಉಪಹಾರದ್ರವ್ಯಗಳನ್ನೂ ಚೆಲ್ಲಿದ್ದರು. ಬೀದಿಬೀದಿಗಳಲ್ಲಿಯೂ ಸ್ತ್ರೀಯರು ಫಲಪುಷ್ಪಗಳಿಂದ ತುಂಬಿದ ಕೈಕಾಣಿಕೆಯ ತಟ್ಟೆಗಳನ್ನು ಹಿಡಿದು ಸಾಲಾಗಿ ನಿಂತಿದ್ದರು. ಬೇರೆ ಕೆಲವು ಸ್ತ್ರೀಯರು,ಮಂಗಳಾರ್ಥವಾಗಿ ಬಿಳೀಮೆಣಸು, ಅಕ್ಷತೆ, ಮೊಸರು, ಗರಿಕೆ, ಪೂರ್ಣಕುಂಭಗಳು, ಇವೆಲ್ಲವನ್ನೂ ಕೈಯಲ್ಲಿ ಹಿಡಿದು, ಧ್ರುವಕುಮಾರನನ್ನಿದಿರಿಗೊಂಡು ಬರುತ್ತಿದ್ದರು. ವೃದ್ಧಸುಮಂಗಲಿಯರು ಪ್ರೀತಿಯಿಂದ ಆ ರಾಜಕುಮಾರನ ಮುಂದೆ ಬಂದು ಮಂಗಳಾಶೀರ್ವಾದಗಳನ್ನು ಮಾಡುತ್ತಿದ್ದರು. ಹೀಗೆ ಧ್ರುವನು ಸಮಸ್ತಪುರಜನರಿಂದ ಸತ್ಕೃತನಾಗಿ, ಅವರ ಮಂಗಳಾಶೀರ್ವಾದಗಳನ್ನೂ, ನಡುನಡುವೆ ಕಿವಿಗಿಂಪಾದ ಗಾನಧ್ವನಿಗಳನ್ನೂ ಕೇಳುತ್ತ, ಸಂತೋಷದಿಂದ ತನ್ನ ತಂದೆಯ ಅರಮನೆಯನ್ನು ಪ್ರವೇಶಿಸಿದನು. ರತ್ನಮಯವಾದ ಆ ಅರಮನೆಯಲ್ಲಿ, ತನ್ನ ತಂದೆಯು ತನಗೆ ಪ್ರೇಮದಿಂದ ಮಾಡಿದ ಸತ್ಕಾರಗಳೆಲ್ಲವನ್ನೂ ಸಂತೋಷದಿಂದ ಸ್ವೀಕರಿಸಿ, ಸ್ವರ್ಗದಲ್ಲಿ ದೇವೇಂದ್ರನು ಹೇಗೋಹಾಗೆ ಸುಖದಿಂದಿದ್ದನು. ಅಲ್ಲಿನ ಭೋಗಸಾಮಗ್ರಿಗಳನ್ನು ಕೇಳಬೇಕೆ ? ಹಾಲಿನ ನೊರೆಯಂತೆ ಶುಭ್ರವಾದ ಬಿಳೀ ಸುಪ್ಪತ್ತಿಗೆಗಳು! ಅವುಗಳಮೇಲೆ ಸರಿಗೆಯ ದುಪ್ಪಟಿಗಳು! ನಡುನಡುವೆ ಬೆಳ್ಳಿಯ ಚಿತ್ರಕಾರ್ಯಗಳುಳ್ಳ ಸುವರ್ಣಪೀಠಗಳು! ಮನೆಯ ಸುತ್ತಲೂ ಇಂದ್ರನೀಲಮಣಿಗಳಿಂದ ಕೆತ್ತಲ್ಪಟ್ಟ ಸ್ಫಟಿಕದ ಗೋಡೆಗಳು! ಆ ಗೋಡೆಗಳ ನಡುನಡುವೆ

ರತ್ನದೀಪಗಳನ್ನು ಕೈಯಲ್ಲಿ ಹಿಡಿದು ನಿಂತಿರುವ ಸ್ತ್ರೀಪ್ರತಿಮೆಗಳು ! ಮನೆಯಹೊರಗೆ ಸುತ್ತಲೂ ಪಾರಿಜಾತಾದಿವೃಕ್ಷಗಳಿಂದ ತುಂಬಿದ ವಿಹಾರೋದ್ಯಾನಗಳು! ಆ ತೋಟಗಳ ನಡುವೆ ಅಲ್ಲಲ್ಲಿ ಕಿವಿಗಿಂಪಾಗಿ ಕೂಗುತ್ತಿರುವ ಪಕ್ಷಿಗಳ ಮಧುರಧ್ವನಿ! ನಡುನಡುವೆ ಭ್ರಮರಝೇಂಕಾರಗಳು!ಅಲ್ಲಲ್ಲಿ ತಾವರೆನೈದಿಲೆಗಳಿಂದ ತುಂಬಿ, ವೈಡೂರ್ಯ ಸೋಪಾನಗಳುಳ್ಳ ನಡೆಬಾವಿಗಳು! ಅವುಗಳಲ್ಲಿ ಕರ್ಣಾನಂದವಾಗಿ ಕೂಗುವ ಹಂಸ, ಕಾರಂಡವ, ಚಕ್ರವಾಕ, ಸಾರಸಾದಿ ಜಲಪಕ್ಷಿಗಳ ಕಲಧ್ವನಿ!ಇಂತಹ ಸರ್ವಸೌಭಾಗ್ಯವಿಶಿಷ್ಟವಾದ ರಾಜಮಂದಿರದಲ್ಲಿ,ಧ್ರುವನು ತನಗೆ ಬೇಕುಬೇಕಾದ ಭೋಗಗಳೆಲ್ಲವನ್ನೂ ಅನುಭವಿಸುತ್ತ ಮಹಾನಂದದಿಂದಿದ್ದನು. ಹೀಗೆ ಕೆಲವು ದಿನಗಳು ಕಳೆದಮೇಲೆ,ಉತ್ತಾನಪಾದನು,ಪ್ರಜೆಗಳಿಗೆ ತನ್ನಲ್ಲಿರುವುದಕ್ಕಿಂತಲೂ ಧ್ರುವನಲ್ಲಿ ಅನುರಾಗವು ಹೆಚ್ಚುತ್ತಿರುವುದನ್ನೂ,ತನ್ನಮಗನು ವಯಸ್ಕನಾಗಿರುವುದನ್ನೂ,ತನಗೆ ಮುಪ್ಪಿನಿಂದ ರಾಜ್ಯಭಾರವನ್ನುನಡೆಸತಕ್ಕಸಾಮರ್ಥ್ಯವು ತಗ್ಗುತ್ತಿರುವುದನ್ನೂ ನೋಡಿ,ಆ ಧ್ರುವಕುಮಾರನಿಗೆ ರಾಜ್ಯದಲ್ಲಿ ಪಟ್ಟವನ್ನು ಕಟ್ಟಿ,ಮುಂದೆ ತನಗೆ ಲಭಿಸಬೇಕಾದ ಸದ್ಗತಿಯನ್ನು ಕುರಿತು ಚಿಂತಿಸುತ್ತ, ವಿರಕ್ತನಾಗಿ ತಪೋವನಕ್ಕೆ ಹೊರಟನು. ಇದು ಒಂಭತ್ತನೆಯ ಅಧ್ಯಾಯವು.

---

ಉತ್ತಮನು ಬೇಟೆಗಾಗಿ ಕಾಡಿಗೆ ಹೋಗಿ, ಅಲ್ಲಿ ಮರಣವನ್ನು ಹೊಂದಿದುದು. ಇದನ್ನು ಕೇಳಿ, ಧ್ರುವನು ಯಕ್ಷರೊಡನೆ ಯುದ್ಧಮಾಡಿ, ಅನರನ್ನು ವಧಿಸಿದುದು.

ವಿದುರಾ ಕೇಳು! ಧ್ರುವನು ರಾಜ್ಯಕ್ಕೆ ಬಂದಮೇಲೆ, ಶಿಂಶುಮಾರನೆಂಬ ಪ್ರಜಾಧಿಪತಿಯ ಮಗನಾದ ಭ್ರಮಿಯೆಂಬವಳನ್ನು ಮದುವೆಯಾಗಿ, ಕಲ್ಪ ವತ್ಸರರೆಂಬ ಇಬ್ಬರುಮಕ್ಕಳನ್ನು ಪಡೆದನು.ವಾಯುಪಿನ ಮಗಳಾದ ಇಳೆಯೆಂಬ ಮತ್ತೊಬ್ಬ ಪತ್ನಿಯಲ್ಲಿ,ತನ್ನ ಸೌಂದರ್ಯಾತಿಶಯದಿಂದಸ್ತ್ರೀಯರ ಮನಸ್ಸಿಗೆ ರತ್ನಪ್ರಾಯನಾದ ಉತ್ಕಲನೆಂಬ ಪುತ್ರನನ್ನು ಪಡೆದನು. ಧ್ರುವನ ಸಹೋದರನಾದ ಉತ್ತಮನು,ವಿವಾಹವಾಗುವುದಕ್ಕೆ ಮೊದಲೇ

ಮೃತನಾದುದರಿಂದ ಅವನಿಗೆ ಸಂತಾನವಿಲ್ಲದೆ ಹೋಯಿತು. ಒಮ್ಮೆ ಬೇಟೆಗಾಗಿ ವನಕ್ಕೆ ಹೋಗಿ ಸುತ್ತುತ್ತಿರುವಾಗ, ಅಲ್ಲಿ ಬಲಾಢ್ಯನಾದ ಯಕ್ಷನೊಬ್ಬನು ಅವನನ್ನು ಹಿಡಿದುಕೊಂಡನು. ಉತ್ತಮನು ಬಹುಕಾಲದ ವರೆಗೆ ಹಿಂತಿರುಗಿ ಬಾರದಿದ್ದುದನ್ನು ನೋಡಿ, ಅವನ ತಾಯಿಯಾದ ಸುರುಚಿಯು, ಮಗನನ್ನು ಹುಡುಕುತ್ತ ಕಾಡಿಗೆ ಹೋಗಿ, ಅವಳೂ ಅಲ್ಲಿ ಕಾಡುಗಿಚ್ಚಿನಲ್ಲಿ ಬೆಂದು ಮೃತಳಾದಳನು ಆಮೇಲೆ ಧ್ರುವನು ತನ್ನ ತಮ್ಮನಾದ ಉತ್ತಮನ ಮರಣವೃತ್ತಾಂತವನ್ನು ಕೇಳಿ,ದುಃಖದಿಂದಲೂ,ಕೋಪದಿಂದಲೂ, ತಪಿಸುತ್ತ, ತನ್ನ ಜಯರಥವನ್ನೇರಿ ಯಕ್ಷರಿಗೆ ನಿವಾಸಸ್ಥಾನವಾದ ಅಲಕಾಪುರಿಯನ್ನೇ ಧ್ವಂಸಮಾಡಬೇಕೆಂದೆಣಿಸಿ ಉತ್ತರದಿಕ್ಕಿನ ಕಡೆಗೆ ಪ್ರಯಾಣಮಾಡಿ, ಹಿಮವತ್ಪರ್ವತದ ತಪ್ಪಲಲ್ಲಿ ಅನೇಕ ಯಕ್ಷಸಮೂಹದಿಂದ ತುಂಬಿದುದಾಗಿಯೂ,ರುದ್ರನ ಅನುಚರರಾದ ಭೂತಗಳಿಗೆ ನಿವಾಸಸ್ಥಾನವಾಗಿಯೂ ಇರುವ ಆ ಅಲಕಾನಗರಿಯ ಸಮೀಪಕ್ಕೆ ಬಂದನು. ಆ ಪುರದ್ವಾರದಲ್ಲಿ ನಿಂತು, ಹತ್ತುದಿಕ್ಕುಗಳೂ ಮೊಳಗುವಂತೆ, ಶಂಖಧ್ವನಿಯನ್ನು ಮಾಡಿ, ತಾನು ಯುದ್ಧಕ್ಕೆ ಬಂದಿರುವ ಸಂಗತಿಯನ್ನು ಸೂಚಿಸಿದನು. ಈ ಶಂಖಧ್ವನಿಯನ್ನು ಕೇಳಿ ಅಲ್ಲಿನ ಯಕ್ಷಸ್ತ್ರೀಯರೆಲ್ಲರೂ ಭಯದಿಂದ ನಡುಗುತಿದ್ದರು. ಒಡನೆಯೇ ಅಲ್ಲಲ್ಲಿದ್ದ ಯಕ್ಷಸೈನಿಕರೆಲ್ಲರೂ ಸಹಿಸಲಾರದ ಕೋಪದಿಂದ ಅನೇಕಶಸ್ತ್ರಾಸ್ತ್ರಗಳನ್ನು ಹಿಡಿದು ಧ್ರುವನ ಸುತ್ತಲೂ ಮುತ್ತಿದರು. ಹೀಗೆ ಯಕ್ಷರು ನಾನಾಕಡೆಗಳಿಂದಲೂ ಮೇಲೆ ಬಿದ್ದು ಬರುವುದನ್ನು ನೋಡಿ ಧ್ರುವನು, ಶತ್ರುಭಯಂಕರವಾದ ತನ್ನ ಮಹಾಧನುಸ್ಸನ್ನೆಳೆದು, ಒಬ್ಬೊಬ್ಬ ಯಕ್ಷನನ್ನೂ ಮೂರುಮೂರು ಬಾಣಗಳಿಂದ ಹೊಡೆಯುತ್ತ ಬಂದನು. ಈ ಬಾಣಗಳು ಬಂದು ಹಣೆಯಲ್ಲಿ ನಾಟಿದಾಗ, ಆ ಯಕ್ಷರೆಲ್ಲರೂ ಧ್ರುವನ ಪ್ರಹಾರವನ್ನು ಸಹಿಸಲಾರದೆ, ಆತನ ಪರಾಕ್ರಮಕ್ಕೂ, ಅವನ ಹಸ್ತಚಾತುರ್ಯಕ್ಕೂ ಮನಸ್ಸಿನಲ್ಲಿ ಆಶ್ಚರ್ಯಪಡುತ್ತಿದ್ದರು. ಆದರೂ, ಕಾಲಿನಿಂದ ಮೆಟ್ಟಿದ ಕಾಳಸರ್ಪದಂತೆ, ಕೋಪವನ್ನು ಸಹಿಸಲಾರದೆ, ಮೇಲೆಬಿದ್ದು ಬಂದು, ಒಬ್ಬೊಬ್ಬರೂ ಆ ಧ್ರುವನಮೇಲೆ ಆರಾರುಬಾಣಗಳನ್ನು ಪ್ರಯೋಗಿಸುತ್ತ ಬಂದರು.

ಮತ್ತು ಒಬ್ಬೊಬ್ಬ ಯಕ್ಷನೂ ಆ ಧ್ರುವನಿಗೆ ತಕ್ಕ ಪ್ರತೀಕಾರವನ್ನು ಮಾಡ ಬೇಕೆಂಬ ಹಟದಿಂದ,ತನ್ನತನ್ನ ಕೈಗೆ ಸಿಕ್ಕಿದಂತೆ ಕತ್ತಿಗಳನ್ನೂ,ಗಂಡುಗೊ ಡಲಿಗಳನ್ನೂ ಶೂಲಗಳನ್ನೂ, ಪ್ರಾಸಗಳನ್ನೂ, ಪರಿಘಗಳನ್ನೂ,ಶಕ್ತ್ಯಾ ಯುಧಗಳನ್ನೂ, ಋಷ್ಟಿ, ಮುಸುಂಢಿ, ಮೊದಲಾದ ವಿಚಿತ್ರಾಯುಧಗಳ ನ್ನೂ, ವಿಚಿತ್ರವಾದ ಗರಿಗಳುಳ್ಳ ಬಾಣಗಳನ್ನೂ ಪ್ರಯೋಗಿಸುತ್ತ,ಆ ಧ್ರು ವನನ್ನೂ, ಅವನ ಸಾರಥಿಯನ್ನೂ ಶಸ್ತ್ರವರ್ಷದಿಂದಲೇ ಮರೆಸುತಿದ್ದನು. ಹೀಗೆ ಒಂದುಲಕ್ಷದ ಮೂವತ್ತುಸಾವಿರಮಂದಿ ಯಕ್ಷಸೈನಿಕರು,ಸುತ್ತಲೂ ಸೇರಿ ಭಯಂಕರವಾದ ಶಸ್ತ್ರದ ಮಳೆಯನ್ನು ಕರೆದಾಗ,ಆ ಧ್ರುವನು,ವರ್ಷ ಧಾರೆಯಿಂದ ಮುಚ್ಚಿದ ಮಹಾಪರ್ವತದಂತೆ ಆ ಬಾಣವರ್ಷದಲ್ಲಿ, ಇತರರ ಕಣ್ಣಿಗೆ ಗೋಚರಿಸದಂತಾದನು.ಈ ಯುದ್ಧವನ್ನು ನೋಡುತ್ತಿದ್ದಸಿದ್ಧರೆಲ್ಲ ರೂ,ಧ್ರುವನಿಗುಂಟಾದ ಅಪಾಯವನ್ನು ಸಹಿಸಲಾರದೆ ಭಯದಿಂದ ಹಾಹಾ ಕಾರವನ್ನು ಮಾಡುತ್ತ ಒಬ್ಬರಿಗೊಬ್ಬರು “ಅಯ್ಯೋ! ಇದೇನಿದು? ಮನು ವಂಶಕ್ಕೆ ಸೂರ್ಯಪ್ರಾಯನಾದ ಧ್ರುವನು, ಯಕ್ಷಸೈನ್ಯವೆಂಬ ಸಮುದ್ರದಲ್ಲಿ ಮುಳುಗಿಹೋದನಲ್ಲಾ ! ಇನ್ನೇನುಗತಿ?”ಎಂದು ಕೂಗಿಡುತಿದ್ದರು, ಇತ್ತ ಲಾ[illegible] ರಾಕ್ಷಸರೆಲ್ಲರೂ ಯುದ್ಧದಲ್ಲಿ ತಮಗೆಜಯವುಂಟಾಯಿತೆಂಬ ಸಂತೋ ಷದಿಂದ “ಭಲೆಭಲೆ!”ಎಂದು ಜಯಘೋಷವನ್ನು ಮಾಡುತಿದ್ದರು. ಇಷ್ಟ ರಲ್ಲಿಯೇ ಧ್ರುವನು, ಹಿಮಸಮೂಹದಲ್ಲಿ ಮರೆಗೊಂಡ ಸೂರ್ಯನು ಕ್ರಮ ಕ್ರಮವಾಗಿ ತನ್ನತೇಜಸ್ಸನ್ನು ಹೆಚ್ಚಿಸಿ,ಹಿಮವನ್ನಡಗಿಸಿ ಹೊರಗೆ ಕಾಣುವಂ ತೆ, ರಥದಲ್ಲಿದ್ದಹಾಗೆಯೇ ಆ ಶಸ್ತ್ರಗಳೆಲ್ಲವನ್ನೂ ಒದರಿಕೊಂಡುಹೊರಗೆಬಂ ದನು ಆಮೇಲೆ ಭಯಂಕರವಾದ ತನ್ನ ಬಿಲ್ಲಿನ ನಾಣನ್ನೆಳೆದು,ಶತ್ರುಗಳ ಮ ನಸ್ಸನ್ನುನಡುಗಿಸುವಂತೆಟಂಕಾರಮಾಡುತ್ತ,ಅನೇಕಬಾಣಗಳನ್ನುಪ್ರಯೋ ಗಿಸಿ,ಬಿರುಗಾಳಿಯುಮೇಘವನ್ನು ಚದುರಿಸುವಂತೆ ಆ ಅಸ್ತ್ರಗಳೆಲ್ಲವನ್ನೂ ಅ ಡಗಿಸಿಬಿಟ್ಟನು. ಇದಲ್ಲದೆ ಧ್ರುವನ ಧನುಸ್ಸಿನಿಂದ ಹೊರಟ ಬಾಣಗಳುಪರ್ವ ತವನ್ನುಭೇದಿಸುವ ಸಿಡಿಲಿನಂತೆ ಶತ್ರುಗಳ ಕವಚವನ್ನು ಭೇದಿಸಿ,ಅವರದೇಹ ದಲ್ಲಿಯೂ ನಾಟಿಕೊಂಡುವು.ಅನೇಕಯಕ್ಷರಅಂಗಾಂಗಗಳೆಲ್ಲವೂ ಛಿನ್ನಭಿನ್ನ ವಾದುವು.ಆಗ ರಣರಂಗದಲ್ಲಿ, ಒಂದು ಕಡೆಯಲ್ಲಿ ಕುಂಡಲಾಲಂಕೃತಗಳಾದ

ತಲೆಗಳೂ,ಮತ್ತೊಂದು ಕಡೆಯಲ್ಲಿ ತಾಳೆಯಮರದ ತುಂಡಿನಂತೆ ಮುರಿದುಬಿದ್ದ ತೊಡೆಗಳೂ, ಮತ್ತೊಂದು ಕಡೆಯಲ್ಲಿ ಕೇಯೂರಾದ್ಯಾಭರಣಗಳಿಂದಲಂಕೃತಗಳಾದ ತೋಳುಗಳೂ ರಾಶಿರಾಶಿಯಾಗಿಬಿದ್ದಿದ್ದುವು.ಇದಲ್ಲದೆ ಆ ರಣಭೂಮಿಯೆಲ್ಲವೂ, ಮುತ್ತಿನಹಾರಗಳು,ತೋಳ್ಬಳೆಗಳು, ಕಿರೀಟಗಳು, ಬೆಲೆಯುಳ್ಳ ಶಿರೋವಸ್ತ್ರಗಳು,ಇವೇ ಮೊದಲಾದ ವಸ್ತ್ರಾಭರಣಗಳಿಂದ ತುಂಬಿ, ವೀರರ ಮನಸ್ಸನ್ನು ಆಕರ್ಷಿಸುವಂತಿತ್ತು. ಹೀಗೆ ಅನೇಕಯಕ್ಷಸೈನಿಕರು ಹತರಾದಮೇಲೆ,ಅಲ್ಲಲ್ಲಿ ಸತ್ತುಳಿದ ಕೆಲವು ರಾಕ್ಷಸರು,ಧ್ರುವನ ಬಾಣಗಳಿಂದ ಮುರಿದ ಮೈಯುಳ್ಳವರಾಗಿ,ಅಲ್ಲಿ ನಿಲ್ಲಲಾರದೆ, ಸಿಂಹವನ್ನು ನೋಡಿದ ಆನೆಗಳಂತೆ ದಿಕ್ಕುದಿಕ್ಕಿಗೆ ಚದರಿ ಪಲಾಯನಮಾಡಿದರು. ಆಗ ಧ್ರುವನು ಯುದ್ಧಭೂಮಿಯಲ್ಲಿ ತನ್ನಿದಿರಿಗೆ ಬಂದು ನಿಲ್ಲುವ ಶತ್ರುವೊಬ್ಬನಾದರೂ ಇಲ್ಲದುದನ್ನು ನೋಡಿ,ಅಲಕಾಪುರಿಗೆ ಪ್ರವೇಶಮಾಡಿ ಹುಡುಕಿ ನೋಡಬೇಕೆಂದು ನಿಶ್ಚಯಿಸಿದನು. ಆದರೆ ಒಡನೆಯೇ ಅವನ ಮನಸ್ಸಿಗೆ ಬೇರೊಂದುವಿಧವಾದ ಶಂಕೆಯು ಹುಟ್ಟಿ, ತನ್ನಲ್ಲಿ ತಾನು “ಶತ್ರುಗಳಾದ ಈ ರಾಕ್ಷಸರೋ ಬಹಳಮಾಯಾವಿಗಳು!ಆದುದರಿಂದ ಈಗ ನಾವು ಇಲ್ಲಿಗೆ ಪ್ರವೇಶಿಸುವುದು ಯುಕ್ತವಲ್ಲ” ಎಂದು ನಿರ್ಧರಿಸಿಕೊಂಡು,ಅದೇ ವಿಷಯವನ್ನು ಕುರಿತು ತನ್ನ ಸಾರಥಿಯೊಡನೆ ಮಾತಾಡುತಿದ್ದನು. ಹೀಗೆ ಮಾತಾಡುತ್ತಿರುವಷ್ಟರಲ್ಲಿಯೇ, ಸಿಡಿಲಿನಂತೆ ಭಯಂಕರವಾದ ಒಂದಾನೊಂದು ಶಬ್ದವು ಕೇಳಿಸಿತು. ದೊಡ್ಡ ಬಿರುಗಾಳಿಯು ಹೊರಟಿತು. ಆಕಾಶದಲ್ಲಿ ದೊಡ್ಡ ಧೂಳಿಯು ಮೇಲಕ್ಕೆದ್ದಿತು. ಇವೆಲ್ಲವನ್ನೂ ನೋಡಿ ಧ್ರುವನು, ಅದು ರಾಕ್ಷಸರ ಮಾಯೆಯೆಂದೇ ನಿಶ್ಚಯಿಸಿಕೊಂಡು, ಅದೇ ವಿಷಯವನ್ನು ಮನಸ್ಸಿನಲ್ಲಿ ಯೋಚಿಸುತ್ತಿರುವಾಗಲೇ,ಎವೆಹಾರುವಷ್ಟರೊಳಗಾಗಿ, ಆಕಾಶವೆಲ್ಲವನ್ನೂ ಮರೆಸುವಂತೆ ಮಹಾಮೇಘಗಳು ಗುಂಪುಕೂಡಿ,ಭಯಂಕರವಾದ ಗರ್ಜನೆಯಿಂದ ಲೋಕಗಳನ್ನು ಹೆದರಿಸುತಿದ್ದುವು. ಕ್ಷಣಕಾಲದಮೇಲೆ ರಕ್ತದ ಮಳೆಯು ಸುರಿಯಿತು.ಹಾಗೆಯೇ ಆಕಾಶದಿಂದ ಕ್ರಮವಾಗಿ ಮಲಮೂತ್ರಗಳೂ, ಮೇದಸ್ಸೂ, ಮಾಂಸವೂ, ವರ್ಷಿಸುತಿದ್ದುವು. ಅದರಮೇಲೆ ತಲೆಯಿಲ್ಲದ ಮುಂಡಗಳು ಕೆಳಗೆ ಬೀಳುತಿದ್ದುವು.ಸಮಸ್ತದಿಕ್ಕುಗಳಲ್ಲಿಯೂ,ಶಸ್ತ್ರ

ಧಾರಿಗಳಾದ ವೀರರು ತನ್ನನ್ನು ಮುತ್ತಿ ನಿಂತಂತೆ ಧ್ರುವನ ಕಣ್ಣಿಗೆ ಕಾಣಿಸಿದರು. ಇದ್ದಕ್ಕಿದ್ದಹಾಗೆ ಆಕಾಶದಲ್ಲಿ ಒಂದು ದೊಡ್ಡಪರ್ವತವು ಹಾರುತ್ತಿರುವಂತೆ ತೋರಿತು. ಅದರಿಂದಾಚೆಗೆ ಅಕಾಶದಿಂದ, ನಾನಾಕಡೆಗಳಲ್ಲಿಯೂ ಗದೆ, ಪರಿಘ, ಕತ್ತಿ, ಒನಕೆ, ಕಲ್ಲು, ಮುಂತಾದ ಶಸ್ತ್ರವರ್ಷವು ಬೀಳಲಾರಂಭಿಸಿತು. ಮತ್ತು ಆಕಾಶದಲ್ಲಿ ಸರ್ಪಗಳು ವಿಷವನ್ನೂ ಅಗ್ನಿಯನ್ನೂ ಕಕ್ಕುತ್ತ, ಸಿಡಿಲುಬಡಿದಂತೆ ಆರ್ಭಟಿಸಿ ಬುಸುಗುಟ್ಟುತ್ತ, ಕಣ್ಣುಗಳಿಂದ ಕಿಡಿಗಳನ್ನು ಕೆದರಿ, ನಾನಾಕಡೆಗಳಿಂದಲೂ ಬಂದು, ಮೇಲೆಬೀಳುವಂತೆ ಕಾಣಿಸಿತು. ಇದಲ್ಲದೆ ಮದಿಸಿದ ಕಾಡಾನೆಗಳೂ, ಸಿಂಹಗಳೂ, ಹುಲಿಗಳೂ ಹಿಂಡುಹಿಂಡಾಗಿ ನಾನಾದಿಕ್ಕುಗಳಿಂದಲೂ ಬಂದು ಮೇಲೆ ಬೀಳುವಂತೆ ತೋರಿತು. ಮತ್ತು ಸಮುದ್ರವು, ಪ್ರಳಯಕಾಲದಲ್ಲಿ ಹೇಗೋಹಾಗೆ ಅತಿಭಯಂಕರವಾಗಿ ಮೊರೆಯುತ್ತ, ತನ್ನ ಅಲೆಗಳಿಂದ ಲೋಕವೆಲ್ಲವನ್ನೂ ಕೊಚ್ಚಿಸಿಬಿಡುವಂತೆ ಮೇಲೆಮೇಲೆ ಉಕ್ಕುತಿತ್ತು. ಹೀಗೆ ರಾಕ್ಷಸರು, ಭೀರುಗಳಿಗೆ ಮಹಾಭಯವನ್ನು ಹುಟ್ಟಿಸತಕ್ಕ ಅನೇಕಮಾಯೆಗಳನ್ನು ಪ್ರಯೋಗಿಸಿದರು. ಈ ರಾಕ್ಷಸರ ಮಾಯೆಯನ್ನು ನೋಡಿದಾಗಲೂ ಧ್ರುವನೊಬ್ಬನುಮಾತ್ರ ಎದೆಗುಂದದೆ ಧೈರ್ಯದಿಂದಿದ್ದನು. ಆದರೆ ಅದನ್ನು ತಪ್ಪಿಸಿಕೊಳ್ಳುವ ಉಪಾಯವೇನೆಂದು ಮನಸ್ಸಿನಲ್ಲಿ ಚಿಂತಿಸುತ್ತಿರುವಾಗಲೇ, ಆಕಾಶದಲ್ಲಿ ಯುದ್ಧದರ್ಶನಕ್ಕಾಗಿ ಬಂದಿದ್ದ ಅನೇಕಮಹರ್ಷಿಗಳು ಆತನಿಗೆ ಶ್ರೇಯಸ್ಸನ್ನು ಕೋರುತ್ತ, ಸಮೀಪಕ್ಕೆ ಬಂದು “ಓ ರಾಜಾ! ಇದಕ್ಕಾಗಿ ನೀನು ಸ್ವಲ್ಪವೂ ಯೋಚಿಸಬೇಕಾದುದಿಲ್ಲ! ನಿನಗೆ ಶುಭವಾಗಲಿ! ಆಶ್ರಿತರ ಕಷ್ಟವನ್ನು ನೀಗಿಸತಕ್ಕ ಆ ಶ್ರೀಮನ್ನಾರಾಯಣನ ನಾಮಸ್ಮರಣವೊಂದೇ ಮನುಷ್ಯರಿಗೆ ಅತಿಭಯಂಕರವಾದ ಎಂತಹ ಮೃತ್ಯುಭಯವನ್ನಾದರೂ ತಪ್ಪಿಸುವುದು! ಆತನ ಅನುಗ್ರಹದಿಂದ ನಿನಗೆ ಸುಖವುಂಟಾಗಲಿ! ಆ ಭಗವಂತನೇ ಶೀಘ್ರದಲ್ಲಿ ಈ ನಿನ್ನ ಶತ್ರುಗಳನ್ನೂ, ಇವರ ಮಾಯೆಯನ್ನೂ ನೀಗಿಸಲಿ” ಎಂದು ಕೈಯೆತ್ತಿ ಆಶೀರ್ವಾದಮಾಡಿದರು. ಇಲ್ಲಿಗೆ ಹತ್ತನೆಯ ಅಧ್ಯಾಯವು.

---

ಧ್ರುವನು ನಾರಾಯಣಾಸ್ತ್ರದಿಂದ ಶತ್ರುಗಳನ್ನು ಕೊಲ್ಲುತ್ತ ಬಂದುದು ಯಕ್ಷರೆಲ್ಲರೂ ನಿರ್ಮೂಲವಾಗಿ ನಾಶವಾಗುತ್ತಿರುವುದನ್ನು ನೋಡಿ, ಧ್ರುವನ ತಾತನಾದ ಸ್ವಾಯಂಭುವಮನುವು ಬಂದು, ತತ್ವೋಪದೇಶದಿಂದ ಧ್ರುವನಿಗೆ ಕೋಪಸಮಾಧಾನಮಾಡಿದುದು.

ವಿದುರಾ! ಕೇಳು ! ಹೀಗೆ ಋಷಿಗಳು ಆಶೀರ್ವಾದವನ್ನು ಮಾಡುತ್ತಿರಲು, ಧ್ರುವನು ಅವರ ಅನುಮತಿಯನ್ನು ಪಡೆದು,ಶುದ್ಧಾಚಮನವನ್ನು ಮಾಡಿ ಬಂದು, ತನ್ನ ಬಿಲ್ಲಿನಲ್ಲಿ ನಾರಾಯಣಾಸ್ತ್ರವನ್ನು ಸಂಧಾನಮಾಡಿದನು. ಜ್ಞಾನೋದಯವುಂಟಾದಮೇಲೆ ಮನಸ್ಸಿನಲ್ಲಿ ಕ್ಲೇಶಗಳೆಲ್ಲವೂ ಅಡಗಿಹೋಗುವಂತೆ, ಈ ನಾರಾಯಣಾಸ್ತ್ರವನ್ನು ಧನುಸ್ಸಿನಲ್ಲಿ ಸಂಧಾನಮಾಡಿದಮಾತ್ರಕ್ಕೆ, ಯಕ್ಷಪ್ರಯುಕ್ತಗಳಾದ ಆ ಮಾಯೆಗಳೆಲ್ಲವೂ ಅಡಗಿಹೋದುವು. ಋಷಿಗಳಲ್ಲಿ ಪ್ರಧಾನನೆನಿಸಿಕೊಂಡ ನಾರಾಯಣನ ಸಂಬಂಧವಾದ ಆ ಅಸ್ತ್ರವನ್ನು ಧ್ರುವನು ಧನುಸ್ಸಿನಲ್ಲಿ ಸೇರಿಸಿ, ಚಿನ್ನದ ಹಿಡಿಗಳಿಂದಲೂ, ಹಂಸದ ಗರಿಗಳಿಂದಲೂ ಕೂಡಿದ ಬಾಣಗಳನ್ನು ಪ್ರಯೋಗಿಸಿದೊಡನೆ, ಆ ಬಾಣಗಳೆಲ್ಲವೂ, ಭಯಂಕರಧ್ವನಿಯಿಂದ ಮೊರೆಯುತ್ತ ವನವನ್ನು ಪ್ರವೇಶಿಸುವ ನವಿಲುಗಳ ಗುಂಪಿನಂತೆ, ಶತ್ರುಸೈನ್ಯದ ನಡುವೆ ಬಂದುಬಿದ್ದುವು ತೀಕ್ಷ್ಣವಾದ ಅಲಗುಗಳುಳ್ಳ ಈ ಬಾಣಗಳಿಂದ ಪೀಡಿತರಾದ ಆ ಯಕ್ಷರೆಲ್ಲರೂ,ಬಹಳ ಕೋಪೋದ್ದೀಪಿತರಾಗಿ,ಗರುಡನಮೇಲೆ ಕೋಪದಿಂದ ಹೆಡೆಯೆತ್ತಿಬರುವ ಹಾವುಗಳಂತೆ ಆಯುಧಗಳನ್ನೆತ್ತಿಕೊಂಡು ಧ್ರುವನಮೇಲೆ ಬಿಳುವುದಕ್ಕೆ ಬಂದರು. ಹೀಗೆ ಮೇಲೆಬಿದ್ದು ಬರುತ್ತಿರುವ ಯಕ್ಷರನ್ನು ನೋಡಿಯೂ,ಧ್ರುವನು ಧೈರ್ಯಗುಂದದೆ ಮೇಲೆಮೇಲೆ ಬಾಣಗಳನ್ನು ಪ್ರಯೋಗಿಸಿ, ಆ ಶತ್ರುಗಳ ತೋಳು, ತೊಡೆ, ಕಂಠ, ಹೊಟ್ಟೆ ಮುಂತಾದ ಅವಯವಗಳೆಲ್ಲವನ್ನೂ ಭೇದಿಸುತ್ತಬಂದನು. ಧ್ರುವನ ಬಾಣದಿಂದ ಹತರಾದ ಆ ಯಕ್ಷರೆಲ್ಲರೂ ಸರ್ವಸಂಗಪರಿತ್ಯಾಗಮಾಡಿದ ಸನ್ಯಾಸಿಗಳಂತೆ ಸೂರ್ಯಮಂಡಲವನ್ನು ಭೇದಿಸಿಕೊಂಡು ವೀರಸ್ವರ್ಗವನ್ನು ಹೊಂದಿದರು.ಹೀಗೆ ಧ್ರುವನು ತನ್ನ ವಿಜಯರಥದಲ್ಲಿ ಕುಳಿತು, ಶತ್ರುಗಳನ್ನು ಕೊಲ್ಲುತ್ತ ಬರುವಾಗ,ನಿರಪ

ರಾಧಿಗಳಾದ ಅನೇಕಯಕ್ಷರು ಈ ಕೊಲೆಗೆ ಸಿಕ್ಕಿ ಹತರಾಗುತ್ತಿರುವುವನ್ನು ನೋಡಿ, ಧ್ರುವನ ತಾತನಾದ ಸ್ವಾಯಂಭುವಮನುವು, ಅವರಲ್ಲಿ ಕನಿಕರ ಗೊಂಡು, ಅನೇಕಮಹರ್ಷಿಗಳೊಡಗೂಡಿ ಬಂದು ಧ್ರುವನಮುಂದೆ ಹೀಗೆಂದು ಹೇಳುವನು. “ವತ್ಸ ಧ್ರುವಾ ! ಈ ಕೋಪವನ್ನು ಬಿಡು ! ಕೋಪವೆಂಬುದು ತಮಸ್ಸೆಂಬ ಅಜ್ಞಾನದಿಂದುಂಟಾಗುವುದು. ಇದು ನರಕಕ್ಕೆ ಕಾರಣವು. ನೀನು ಅಂತಹ ಪಾಪಿಷ್ಠವಾದ ಕೋಪಕ್ಕೆ ವಶನಾಗಿ,ನಿರಪರಾಧಿಗಳಾದ ಈ ಯಕ್ಷರನ್ನು ಕೊಲ್ಲುತ್ತಿರುವೆಯಲ್ಲಾ! ಇದು ನಮ್ಮ ವಂಶದವರಿಗೆ ಯೋಗ್ಯವಾದ ಕಾರ್ಯವಲ್ಲ! ಇದನ್ನು ಸತ್ಪುರುಷರು ಸಮ್ಮತಿಸಲಾರರು. ನೀನು ನಿರಪರಾಧಿಗಳಾದ ಈಯಕ್ಷರನ್ನು ವಧಿಸುವುದಕ್ಕಾಗಿ ಯತ್ನಿಸಿದುದು ತಪ್ಪು!ಉತ್ತಮನನ್ನು ಕೊಂದ ಕೋಪಕ್ಕಾಗಿ ಸಹೋದರಪ್ರೀತಿಯಿಂದನೀನು ಈ ಕಾರ್ಯವನ್ನಾರಂಭಿಸಿದಂತಿದೆ. ಇವರಲ್ಲಿ ಯಾವನೋ ಒಬ್ಬನು ಆ ಕಾರ್ಯವನ್ನು ನಡೆಸಿದುದಕ್ಕಾಗಿ ಅವನ ಸಂಬಂಧದಿಂದ ಅನೇಕಜನಗಳಿಗೆ ಈ ಅನರ್ಥವುಂಟಾಯಿತು. ಇವರೆಲ್ಲರೂ ನಿರಪರಾಧಿಗಳಾದುದರಿಂದ ಇವರನ್ನು ಕೊಲ್ಲುವುದು ನಿನಗೆ ಯುಕ್ತವಲ್ಲ. ಭಗವಂತನಲ್ಲಿ ಭಕ್ತಿಯುಳ್ಳ ಸಾಧುಗಳು, ಎಂದಿಗೂ ಹೀಗೆ ಕೋಪವಶರಾಗಿ ಇತರರಿಗೆ ಹಿಂಸೆಯನ್ನು ಮಾಡಲಾರರು. ದೇಹವನ್ನೇ ಆತ್ಮವೆಂದು ಭ್ರಮಿಸಿ,ಮನಸ್ಸನ್ನು ನಿಗ್ರಹಿಸಲಾರದೆ, ಪಶುಗಳಂತೆ ಒಬ್ಬರನ್ನೊಬ್ಬರು ಕೊಲ್ಲುವುದು ಸಜ್ಜನರ ಮಾರ್ಗವಲ್ಲ. ವತ್ಸಾ! ನೀನಾದರೋ ಬಹಳ ಪ್ರಯತ್ನಪಟ್ಟು ಸಮಸ್ತಭೂತಗಳಲ್ಲಿಯೂ ಅಂತರ್ಯಾಮಿಯಾದ ಶ್ರೀಹರಿಯನ್ನು ಅದೇಬುದ್ಧಿಯಿಂದಾರಾಧಿಸಿ, ಅವನ ಅನುಗ್ರಹಕ್ಕೆ ಪಾತ್ರನಾಗಿರುವೆ ? ಆ ಭಗವಂತನನ್ನು ಬಿಟ್ಟ ಸ್ವತಂತ್ರವಸ್ತುಗಳುಂಟೆಂದು ಭ್ರಮಿಸುವ ಅಜ್ಞಾನಿಗಳಿಗೆ ಅವನ ಸ್ವರೂಪವು ಎಂದಿಗೂ ಗೋಚರಿಸಲಾರದು. ಅವನೂ ಅಂತವರಿಗೆ ಪ್ರಸನ್ನನಾಗತಕ್ಕವನಲ್ಲ. ಅಂತಹ ಭಗವಂತನನ್ನು ನೀನು, ಸರ್ವಭೂತಗಳಿಗೂ ಅಂತರಾತ್ಮನೆಂಬ ಭಾವದಿಂದ ಭಜಿಸಿ,ಬೇರೊಬ್ಬರಿಗೆ ದುರ್ಲಭವಾದ ವಿಷ್ಣುಪದವನ್ನೇ ಕೈವಶಮಾಡಿಕೊಂಡಿರುವೆಯಲ್ಲವೆ ? ಹೀಗೆ ಬಹುಕಾಲದವರೆಗೆ ಭಗವಂತನನ್ನಾರಾಧಿಸಿ ಅವನ ಅನುಗ್ರಹಕ್ಕೆ ಪಾತ್ರನಾಗಿರುವಾಗಲೂ ನೀನು, ಈ ಪಾಪಕಾರ್ಯಕ್ಕೆ

ಪ್ರವರ್ತಿಸುವುದು ಯುಕ್ತವೆ?ಆ ಭಗವಂತನಲ್ಲಿ ಭಕ್ತಿಯನ್ನು ಹಿಡಿದವರೆಲ್ಲಾ ನಿನ್ನ ಭಕ್ತಿವಿಶೇಷವನ್ನು ಕೊಂಡಾಡುತ್ತಿರುವರು. ನಿನ್ನ ನಡತೆಯು ಹೀಗೆ ಸಾಧುಗಳಿಗೂ ಸ್ತೋತ್ರಾರ್ಹವಾಗಿ ಸಮಸ್ತಲೋಕಕ್ಕೂ ನಿದರ್ಶನವಾಗಿ ರುವುದು. ಇಂತಹ ಭಕ್ತೋತ್ತಮನಾದ ನೀನೇ ಈ ಕಾರ್ಯವನ್ನು ಮಾಡು ವುದು ಯುಕ್ತವಲ್ಲ. ‘‘ಅಪರಾಧಿಗಳನ್ನು ದಂಡಿಸುವುದು ನ್ಯಾಯವಲ್ಲವೆ”ಎಂ ಡು ನೀನು ಕೇಳಬಹುದು. ಅದು ಹಾಗಲ್ಲ. ಅಪರಾಧವನ್ನು ಮಾಡಿದವರಲ್ಲಿ ಯೂ ತಾಳ್ಮೆಯನ್ನು ವಹಿಸಬೇಕಾದುದೇ ಸತ್ಪುರುಷರ ಸ್ವಭಾವವು. ಅಪ ರಾಧಿಗಳಲ್ಲಿ ತಾಳ್ಮೆ, ದುಃಖಿತರಲ್ಲಿ ದಯೆ,ಸಮಸ್ತಜಂತುಗಳಲ್ಲಿಯೂ ಸ್ನೇಹಬು ದ್ಧಿ,ಜೀವರಾಶಿಗಳು ಬೇರೆಬೇರೆರೂಪದಿಂದ ಕಂಡರೂ,ಆಜೀವಾತ್ಮಗಳೆಲ್ಲವೂ ಒಂದೇಬಗೆಯಾದುದರಿಂದ, ತನ್ನ ಜೀವದಂತೆಯೇ ಇತರಜೀವವೆಂದು, ಸಮ ಸ್ತಭೂತಗಳನ್ನೂ ಸಮವಾಗಿಭಾವಿಸುವುದು,ಈಗುಣಗಳಿದ್ದವರವಿಷಯದಲ್ಲಿ ಸರ್ವಾತ್ಮಕನಾದ ಭಗವಂತನು ಸಂತೋಷಿಸುವಹಾಗೆ, ಬೇರೆ ಯಾವ ಧರ್ಮ ಗಳಿಂದಲೂ ಸಂತೋಷಿಸಲಾರನು. ದೇಹಾದಿಶರೀರಗಳೆಲ್ಲವೂ ಒಂದೇ ಪ್ರ ಕೃತಿಯ ವಿಕಾರಗಳಾಗಿರುವುವು ಜೀವಾತ್ಮಗಳೆಲ್ಲವೂ ಒಂದೇ ಜ್ಞಾನಸ್ವ ರೂಪವಾಗಿರುವುವು. ಈ ಸಮಸ್ತವಸ್ತುಗಳಲ್ಲಿಯೂ ಪರಮಾತ್ಮನು ನೆಲೆ ಸಿರುವುದರಿಂದ ಇವೆಲ್ಲವೂ ಪರಮಾತ್ಮಸ್ವರೂಪವು. ಹೀಗೆ ಯಾವವಿಧದಿಂದ ನೋಡಿದರೂ, ಸಮಸ್ತಭೂತಗಳೂ ಸಮವೆಂದು ಭಾವಿಸುವುದಕ್ಕೆ ತಕ್ಕ ಕಾರಣವುಂಟು. ಈ ಸಮಬುದ್ಧಿಯುಳ್ಳವರ ವಿಷಯದಲ್ಲಿ ಭಗವಂತನು ತಪ್ಪದೆ ಒಲಿಯುವನು. ಭಗವಂತನು ಸರ್ವಾತ್ಮಕನಾದುದರಿಂದ, ಯಾವ ಭೂತಕ್ಕೆ ದ್ರೋಹವನ್ನೆಣಿಸಿದರೂ, ಸರ್ವೇಶ್ವರನಿಗೆ ದ್ರೋಹಮಾಡಿದಂತೆ ಯೇ ಆಗುವುದು. ಜಗತ್ತೆಲ್ಲವೂ ಪರಮಪುರುಷನಿಗೆ ಶರೀರವಾದುದರಿಂದ,ಅ ವನಲ್ಲಿ ಭಕ್ತಿಯುಳ್ಳ ನಿಮ್ಮಂತವರು, ಅವನಿಗೆ ಶರೀರವಾದ ಇತರಜಗತ್ತಿಗೂ ಯಾವ ವಿಧವಾದ ದ್ರೋಹವನ್ನೂ ಮಾಡಬಾರದು. ಈ ದ್ರೋಹಬುದ್ಧಿ ಯಿಲ್ಲದವನ ವಿಷಯದಲ್ಲಿಯೇ ಭಗವಂತನು ಶೀಘ್ರವಾಗಿ ಒಲಿಯುವನು. ಭಗವಂತನು ಹೀಗೆ ಸಮಸ್ತಭೂತಗಳಲ್ಲಿಯೂ ವ್ಯಾಪಿಸಿರುವನೆಂಬುದನ್ನು ತಿಳಿದು, ಆ ಬುದ್ಧಿಯಿಂದಲೇ ಅವನನ್ನು ಭಾವಿಸತಕ್ಕ ಪುರುಷನು, ಆ ಭಗವ

ದನುಗ್ರಹದಿಂದ ಜೀವದಶೆಯಲ್ಲಿಯೇ ಕಾಮ, ಕ್ರೋಧ, ಮುಂತಾದ ದು ರ್ಗುಣಗಳೆಲ್ಲವನ್ನೂ ನೀಗಿ, ಕೊನೆಗೆ ಮಹಾನಂದರೂಪವಾದ ಪರಬ್ರಹ್ಮ ವನ್ನೂ ಸೇರಬಹುವನು. ಮತ್ತು ಎಲೆ ಕುಮಾರಾ! ನೀನು ನಿನ್ನ ಒಡಹುಟ್ಟಿ ದವನನ್ನು ಕೊಂದರೆಂಬುದಕ್ಕಾಗಿಯೇ ಅಲ್ಲವೇ ಈ ಯಕ್ಷರನ್ನು ವಧಿಸುತ್ತಿ ರುವೆ? ನಿನ್ನ ಸಹೋದರರನ್ನು ಇವರು ಕೊಂದುದಾಗಿ ನೀನು ನೆನೆಸುವುದೇ ಸರಿಯಲ್ಲ!ತತ್ವವನ್ನು ನೋಡಿದರೆ ಈ ಯಕ್ಷರು ಅವನನ್ನು ಕೊಲ್ಲಲೂಇಲ್ಲ! ಅವನು ಸಾಯಲೂ ಇಲ್ಲವೆಂದೇ ಹೇಳಬಹುದು. ಈ ಕಾರ್ಯಗಳೆಲ್ಲಕ್ಕೂ! ದೈವವೇ ಕಾರಣವು. ಹುಟ್ಟು, ಸಾವು ಎಂಬಿವೆಲ್ಲವೂ ಶರೀರಕ್ಕೇಹೊರತು ಆತ್ಮನಿಗಲ್ಲ. ಆದುದರಿಂದ ನೀನು ನಿನ್ನ ಸಹೋದರನನ್ನು ಸತ್ತಂತೆ ಭಾವಿಸು ವುದೂ, ಅದಕ್ಕಾಗಿ ದುಃಖಿಸುವುದೂ, ಆ ದುಃಖದಿಂದ ಈ ಯಕ್ಷರನ್ನು ಕೊಲ್ಲುವುದೂ ಒಂದಕ್ಕೊಂದು ಸಂಬಂಧವಿಲ್ಲದ ಕಾರ್ಯವಾಗಿದೆ.ಲೋಕದಲ್ಲಿ ಹೆಣ್ಣೆಂದೂ, ಗಂಡೆಂದೂ ವಿಭಾಗಿಸಲ್ಪಟ್ಟಿರುವ ಜಂತುಶರೀರಗಳೆಲ್ಲವೂ ಭೂಮಿ ಮೊದಲಾದ ಪಂಚಭೂತಗಳಿಂದ ಏರ್ಪಟ್ಟಿರುವುವು. ಅಂತಹ ಸ್ತ್ರೀಪುರುಷರ ಸಂಭೋಗದಿಂದಲೇ ಮುಂದೆಮುಂದೆ ಹೆಂಗಸರೆಂದೂ, ಗಂಡಸರೆಂದೂ ವ್ಯಕ್ತಿಭೇದಗಳೂ ಹೆಚ್ಚಿ ಬರುತ್ತಿರುವುವು. ಈ ವಿಧವಾಗಿ ಹುಟ್ಟತಕ್ಕ ಪ್ರಾಣಿಶರೀರಗಳೂ ಆ ಪಂಚಭೂತಗಳ ಸ್ವರೂಪವಲ್ಲದೆ ಬೇರೆ ಯಲ್ಲ. ವತ್ಸಾ! ಪಂಚಭೂತಾತ್ಮಕಗಳಾದ ಸ್ತ್ರೀಪುರುಷರ ಶರೀರಸಂಬಂಧ ದಿಂದಲೇ ಅದೇವಿಧವಾದ ಬೇರೆ ಸ್ತ್ರೀಪುರುಷವ್ಯಕ್ತಿಗಳು ಹೇಗೆ ಹುಟ್ಟು ವುವೋ, ಹಾಗೆಯೇ ಪರಮಾತ್ಮನಿಗೆ ಶರೀರವಾದ ಪ್ರಕೃತಿಯಲ್ಲಿ(ಮಾಯೆ ಯಲ್ಲಿ)ರುವ ಸತ್ವರಜಸ್ತಮಸ್ಸುಗಳೆಂಬ ಮೂರುಗುಣಗಳ ಸೇರುವೆಯಿಂದ ಸೃಷ್ಟಿ, ಸ್ಥಿತಿ, ಸಂಹಾರಗಳೆಂಬ ಮೂರುಕಾರ್ಯಗಳೂ ನಡೆಯುತ್ತಿರುವು ವು. ಈ ಮೂರುಗುಣಗಳಲ್ಲಿ ರಜಸ್ಸುಮಾತ್ರ ತಲೆಯೆತ್ತಿ ಇತರಗುಣಗಳು ತಗ್ಗಿದಾಗ ಸೃಷ್ಟಿಯೂ, ಸತ್ವಗುಣವು ಹೆಚ್ಚಿ ಇತರಗುಣಗಳು ತಗ್ಗಿದಾಗ ಸ್ಥಿತಿಯೂ, ತಮೋಗುಣವು ತಲೆಯೆತ್ತಿ ಇತರಗುಣಗಳು ತಗ್ಗಿದಾಗ ಸಂಹಾರವೂ ನಡೆಯುವುದು. ಈ ಮೂರುಗುಣಗಳೂ ಸಮವಾಗಿದ್ದಾಗ ಯಾವುದೊಂದು ವಿಕಾರವೂ ಕಾಣುವುದಿಲ್ಲ. ಇದೇ ಪ್ರಳಯದಶೆಯೆನಿಸು

ವುದು. “ಆದರೆ ಅಚೇತನವಾದ ಪ್ರಕೃತಿಯಲ್ಲಿ ಈ ವಿಕಾರಗಳೆಲ್ಲವೂ ಉಂಟಾಗುವುದು ಹೇಗೆ? ಪ್ರಕೃತಿಯ ವಿಕಾರಗಳಾದದೇಹಾದಿಗಳೂ ಜಡವಲ್ಲವೆ? ಅವುಳಿಗೆ ಹೀಗೆ ವಿಕಾರವನ್ನು ಹೊಂದುವ ಸಾಮರ್ಥ್ಯವೆಲ್ಲಿ?” ಎಂದು ಕೇಳುವೆಯಾ? ಈಬಗೆಯ ವಿಕಾರಗಳನ್ನುಂಟುಮಾಡುವುದಕ್ಕಾಗಿ ಈಶ್ವರನು ನಿಮಿತ್ತಮಾತ್ರವಾಗಿ ನಿಂತಿರುವನು. ಆ ಈಶ್ವರನು ತಾನಾಗಿ ಏನನ್ನೂ ಮಾಡುವವನಲ್ಲ. ಅವನ ಸಂಕಲ್ಪದಿಂದಲೇ ಈ ಪರಿಣಾಮಗಳೆಲ್ಲವೂ ನಡೆಯುವುವು. ಆ ಭಗವಂತನು ಸೃಷ್ಟಿಕಾರ್ಯಕ್ಕೆ ಸಂಕಲ್ಪಿಸಿದಮಾತ್ರದಲ್ಲಿ, ಜೀವಾತ್ಮರ ಪುಣ್ಯಪಾಪಕರ್ಮಗಳಿಂದ ಹಾಗೆ ನಾನಾವಿಧಗಳಾದ ಪರಿಣಾಮಗಳುಂಟಾಗುವುವು. ಆ ಜೀವಾತ್ಮನ ಸುಖದುಃಖಗಳಿಗೂ ಆ ಕರ್ಮಗಳೇ ಕಾರಣವು. ಅಯಸ್ಕಾಂತದಕಡೆಗೆ ಕಬ್ಬಿಣ ಮುಂತಾದ ಲೋಹವು ತಾನಾಗಿ ಬರುವಂತೆ, ಸಮಸ್ತಕ್ಕೂ ನಿಮಿತ್ತವಾಗಿರುವ ಭಗವಂತನ ಕಡೆಗೆ ಕಾರ್ಯಕಾರಣರೂಪವಾದ ಪ್ರಪಂಚವೆಲ್ಲವೂ ತಾನಾಗಿಯೇ ಆಕರ್ಷಿಸಲ್ಪಡುತ್ತ, ತಮ್ಮತಮ್ಮ ಕಾರ್ಯಗಳನ್ನು ನಡೆಸುತ್ತಿರುವುವು. ಹೀಗೆಯೇ ಪರಮಪುರುಷನು ನಿಮಿತ್ತಕಾರಣವಾಗಿ ಸಂಕಲ್ಪಿಸಿದಮಾತ್ರದಿಂದಲೇ, ಜೀವನು ತನ್ನ ಕರ್ಮಾನುಸಾರವಾಗಿ ಸುಖದುಃಖಗಳನ್ನೂ, ದೇವಮನುಷ್ಯಾದಿಶರೀರಗಳನ್ನೂ ಹೊಂದುವನು. ಭಗವಂತನು ಸಮಸ್ತಭೂತಗಳಲ್ಲಿಯೂ ನಿಷ್ಪಕ್ಷಪಾತವಾಗಿ, ಸಮವಾದ ವಾತ್ಸಲ್ಯವನ್ನು ತೋರಿಸತಕ್ಕವನಾದುದರಿಂದ, ಜೀವಾತ್ಮನ ಸುಖದುಃಖಗಳಿಗಾಗಲಿ, ಆಕಾರಭೇದಗಳಿಗಾಗಲಿ ಅವನನ್ನು ಕಾರಣವೆಂದು ಭಾವಿಸಬಾರದು. ಯಾವ ದುರ್ಗುಣವೂ ಇಲ್ಲದೆ ಸಮಸ್ತ ಕಲ್ಯಾಣಗುಣಪರಿಪೂರ್ಣನಾದ ಆ ಸರ್ವೇಶ್ವರನು, ಕಾಲವೆಂಬ ತನ್ನ ಶಕ್ತಿಯಿಂದ, ಪ್ರಕೃತಿಯಲ್ಲಿರುವ ಮೂರು ಗುಣಗಳಲ್ಲಿ ತಾರತಮ್ಯವನ್ನುಂಟುಮಾಡಿ, ಅ ಮೂಲಕವಾಗಿ ಪ್ರಪಂಚವನ್ನು ಸೃಷ್ಟಿಸುವನು. ಆದುದರಿಂದ ಸರ್ವೇಶ್ವರನ ಸಂಕಲ್ಪರೂಪವಾದ ಪ್ರೇರಣೆಯೇ ಪ್ರಪಂಚವ್ಯಾಪಾರಗಳಿಗೆಲ್ಲಾ ಕಾರಣವು. ಆದುದರಿಂದ ಆ ಭಗವಂತನು ತಾನು ಕೈಯಿಕ್ಕದೆ (ಕರ್ತನಲ್ಲದೆ) ಕೆಲಸಮಾಡುವನು. ತನ್ನ ಕೈಯಿಂದ ಹೊಡೆಯದೆ ಕೊಲ್ಲುವನು. ಆಹಾ! ಆ ಭಗವಂತನ ವಿಚಿತ್ರವ್ಯಾಪಾರವನ್ನು ಹೀಗೆಂ

ದು ಊಹಿಸುವುದಕ್ಕಾದರೂ ಸಾಧ್ಯವೆ? ಕಾಲಶರೀರಕನಾದ ಆ ಸರ್ವೇಶ್ವರನು, ತಾನು ನಾಶಹೊಂದದೆ ಇತರ ಪ್ರಪಂಚವೆಲ್ಲವನ್ನೂ ನಾಶಗೊಳಿಸುವನು. ತಾನು ಹುಟ್ಟದೆ ಇತರಭೂತಗಳನ್ನು ಹುಟ್ಟಿಸುವನು. ಆ ಭಗವಂತನು ಒಂದುಜಂತುವಿನ ಮೂಲಕವಾಗಿ ಮತ್ತೊಂದು ಜಂತುವನ್ನು ಹುಟ್ಟಿಸುವನು. ಆಯಾ ಜಂತುಗಳಿಗೆ ಕೊನೆಗಾಲವು ಸಮೀಪಿಸಿದೊಡನೆ, ಮೃತ್ಯುವಿನ ಮೂಲಕವಾಗಿ ಸಂಹರಿಸುವನು. ತಾನಾಗಿ ಯಾವ ಕಾರ್ಯವನ್ನೂ ನಡೆಸತಕ್ಕವನಲ್ಲ. ತಾನುಮಾತ್ರ ಮೃತ್ಯುರೂಪವಾದ ಸಂಸಾರಕ್ಕೆ ಸಿಕ್ಕಿಬೀಳದೆ, ಸಮಸ್ತಜೀವಗಳಲ್ಲಿಯೂ ಸಮವಾಗಿ ಪ್ರವೇಶಿಸಿರುವ ಆ ಭಗವಂತನಿಗೆ, ಒಬ್ಬನು ತನ್ನವನೆಂದೂ, ಮತ್ತೊಬ್ಬನು ವಿರೋಧಿಯೆಂದೂ ಪಕ್ಷಪಾತಬುದ್ಧಿಯು ಹುಟ್ಟುವುದೇ ಅಸಂಭವವು. ಇತರಭೂತಸಮೂಹಗಳೆಲ್ಲವೂ ಯಾವ ವಿಷಯದಲ್ಲಿಯೂ ಸ್ವತಂತ್ರಗಳಲ್ಲ. ಆದುದರಿಂದ ಗಾಳಿಯು ಬೀಸಿದಕಡೆಗೆ ಧೂಳು ಹಾರುವಂತೆ, ತಮ್ಮತಮ್ಮ ಕರ್ಮಾನುಸಾರವಾಗಿ ಭಗವಂತನು ಪ್ರೇರಿಸಿದಕಡೆಗೆ ಹೋಗುತ್ತಿರುವುವು. ಆ ಭಗವಂತನು ಸಮಸ್ತಭೂತಗಳಲ್ಲಿಯೂ ಒಳಹೊಕ್ಕಿದ್ದರೂ, ತನ್ನ ಸ್ವರೂಪಸ್ವಭಾವಗಳಲ್ಲಿ ಹೆಚ್ಚುಕುಂದಿಲ್ಲದೆ, ಇತರಜೀವಗಳಿಗೆ ಅವರವರ ಕರ್ಮಾನುಸಾರವಾಗಿ ಆಯುಃಕಾಲವನ್ನು ಹೆಚ್ಚಿಸುವುದಕ್ಕೂ, ತಗ್ಗಿಸುವುದಕ್ಕೂ ತಾನೇ ಪ್ರೇರಕನಾಗಿರುವನು. ಪರಮಾತ್ಮನಲ್ಲಿರುವ ಈ ಶಕ್ತಿಯನ್ನು ತಿಳಿಯದವರು, ಮನುಷ್ಯನ ಸುಖದುಃಖಾದಿಗಳಿಗೆ ಕಾರಣವನ್ನು ಬೇರೆಬೇರೆ ಅನೇಕವಿಧವಾಗಿ ಊಹಿಸುವರು. ಕೆಲವರು ಮನುಷ್ಯನ ಕರ್ಮವೇ ಇದಕ್ಕೆ ಕಾರಣವೆಂದು ಹೇಳುವರು. ಬೇರೆ ಕೆಲವರು ಪ್ರಕೃತಿಪುರುಷರಲ್ಲಿರುವ ಸ್ವರೂಪಸ್ವಭಾವಗಳ ಬದಲಾವಣೆಯೇ ಸುಖದುಃಖಾದಿಗಳಿಗೆ ಕಾರಣವೆನ್ನುವರು. ಮತ್ತೆ ಕೆಲವರು ದೈವವನ್ನು ಕಾರಣವೆಂದು ಹೇಳುವರು. ಇನ್ನು ಕೆಲವರು ಪರಮಪುರುಷನ ಸಂಕಲ್ಪವೇ ಇವೆಲ್ಲಕ್ಕೂ ಕಾರಣವೆನ್ನುವರು. ವತ್ಸ ಧ್ರುವಾ! ಇಷ್ಟೊಂದು ಮತಭೇದಗಳಿದ್ದರೂ, ಕೊನೆಗೆ ದೈವಸಂಕಲ್ಪವೇ ಕಾರಣವೆಂದು ಹೇಳಿದ ಮತವೇ ಸಜ್ಜನಸಮ್ಮತವಾದುದು. ಆದರೆ ಮೊದಲು ಅವರವರ ಪುಣ್ಯಪಾಪರೂಪಕರ್ಮಗಳೇ ಕಾರಣವೆಂದು ಹೇಳಿ, ಈಗ ಭಗವಂತನ ಸಂಕಲ್ಪವೇ

ಕಾರಣವೆಂದು ಹೇಳುವುದು ಪರಸ್ಪರವಿರೋಧವಲ್ಲವೆ." ಎಂಬ ಶಂಕೆಯುಂಟಾಗಬಹುದು. ವಾಸ್ತವದಲ್ಲಿ ಇವೆರಡೂ ಒಂದೇಹೊರತು,ಇವುಗಳಲ್ಲಿ ಭೇದವಿಲ್ಲ. ಏಕೆಂದರೆ,ಪಾಪಪುಣ್ಯಗಳೆಂಬುದೂ ಭಗವಂತನ ನಿಗ್ರಹಾನುಗ್ರಹಗಳೇ! ಆದುದರಿಂದ ಭಗವದಿಚ್ಛೆಯೆಂಬುದಕ್ಕೂ ಪುಣ್ಯಪಾಪಕರ್ಮಗಳೆಂಬುದಕ್ಕೂ ಭೇದವಿಲ್ಲ. ಈ ಪುಣ್ಯಪಾಪಕರ್ಮಗಳನ್ನನುಸರಿಸಿ ಬರುವ ಅದೃಷ್ಟವೇ ದೈವವೆಂದು ಕರೆಯಲ್ಪಡುವುದು. ಆದುದರಿಂದ ಈ ಅದೃಷ್ಟವೆಂಬುದೂ ಭಗವಂತನ ಸಂಕಲ್ಪಕ್ಕಿಂತಲೂ ಬೇರೆಯಾದುದಲ್ಲ ಇದರಂತೆಯೇ ಪ್ರಕೃತಿಪುರುಷರ ಪರಿಣಾಮಸ್ವಭಾವವಾಗಲಿ, ಕಾಲವಾಗಲಿ,ಆ ಪರಮಪುರುಷನ ಸಂಕಲ್ಪಾಧೀನವಾಗಿಯೇ ವರ್ತಿಸುವುವು. ಆದುದರಿಂದ ಪರಮಪುರುಷನ ಸಂಕಲ್ಪವೇ ಎಲ್ಲಕ್ಕೂ ಕಾರಣವೆಂಬುದು ಸರ್ವಸಮ್ಮತವಾದ ಅಭಿಪ್ರಾಯವು. ವತ್ಸಾ ! ಆ ಪರಮಪುರುಷನು ಇಂದ್ರಿಯಗಳಿಗೆ ಗೋಚರಿಸತಕ್ಕವನಲ್ಲ! ಆದುದರಿಂದ ಅವನನ್ನು ಈ ಕಾಲದಲ್ಲಿ, ಈಸ್ಥಳದಲ್ಲಿ, ಈ ವಸ್ತುವಿನಲ್ಲಿರುವನೆಂದುನಿರ್ಣಯಿಸುವುದು ಸಾಧ್ಯವಲ್ಲ.ಹೀಗೆ ಅಪ್ರಮೇಯ ಮಹಿಮೆಯುಳ್ಳ ಆ ಭಗವಂತನ ಸ್ವರೂಪವೇ ನಮಗೆ ಅಗೋಚರವಾಗಿರುವಾಗ, ಅವನು ತನ್ನ ಮನಸ್ಸಿನಲ್ಲಿ ಸಂಕಲ್ಪಿಸುವ ಕಾರ್ಯಗಳನ್ನು ಯಾವನು ತಾನೇ ತಿಳಿಯಬಲ್ಲನು? ಅವನ ವಿಚಿತ್ರವ್ಯಾಪಾರವನ್ನು ತಿಳಿಯುವುದು ಯಾರಿಂದಲೂ ಸಾಧ್ಯವಲ್ಲ. ಆದುದರಿಂದ ವತ್ಸಾ ! ನಿನ್ನ ಸಹೋದರನನ್ನು ಕೊಂದವರು ಈ ಯಕ್ಷರಲ್ಲ ! ಕರ್ಮಾಧೀನನೆನಿಸಿದ ಮನುಷ್ಯನ ಜನನಮರಣಗಳಿಗೆ ದೈವವೇ ಕಾರಣವು. ಆದರೆ ಈಶ್ವರನೇ ಈ ಜಗತ್ತಿನ ಉತ್ಪತ್ತಿವಿನಾಶಗಳಿಗೆ ಕಾರಣನಾಗಿದ್ದಪಕ್ಷದಲ್ಲಿ, ಅವನಿಗೂ ಕರ್ಮಪ್ರವೃತ್ತಿಯೂ, ಅದಕ್ಕೆ ಬೇಕಾದ ಸತ್ವಾದಿಗುಣಗಳ ವ್ಯತ್ಯಾಸವೂ ಇರಬೇಕಲ್ಲವೆ? ಹೀಗೆ ಗುಣಸಂಬಂಧವೂ, ಕರ್ಮವಶ್ಯತ್ವವೂ ಇದ್ದಾಗ, ಅವನೂ ಜೀವನಂತೆ ಸಂಸಾರಕ್ಕೂ ಕಟ್ಟುಬೀಳಬೇಕಲ್ಲವೆ " ಎಂದರೆ, ಹಾಗಲ್ಲ! ಆ ಸರ್ವೇಶ್ವರನೇ .ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಕಾರ್ಯಗಳನ್ನು ನಡೆಸುತ್ತಿರುವನೆಂಬುದೇನೋ ನಿಜವು ! ಆದರೆ ಜೀವನಂತೆ ಅವನಿಗೆ, ಅಹಂಕಾರವೆಂಬ ದೇಹಾತ್ಮಾಭಿಮಾನವಿಲ್ಲವಾದುದರಿಂದ, ಸತ್ವಾದಿಗುಣಗಳಾಗಲಿ,

ಅವುಗಳಮೂಲಕವಾಗಿ ನಡೆಯುವ ಕರ್ಮಗಳಾಗಲಿ, ಅವನನ್ನು ಕಟ್ಟಿಡ ಲಾರವು. ಅವನ ಸ್ವಭಾವಕ್ಕೆ ಯಾವಾಗಲೂ ವ್ಯತ್ಯಾಸವಿಲ್ಲದುದರಿಂದ, ಅವನು ಸಂಸಾರಕ್ಕೂ ಕಟ್ಟುಬೀಳಲಾರನು. ಅವನು ತನ್ನ ಸಂಕಲ್ಪಮಾತ್ರ ದಿಂದಲೇ ಸೃಷ್ಟ್ಯಾದಿಗಳನ್ನು ನಡೆಸುವನು. ಜೀವನಾದರೋ ಕರ್ಮದಿಂದ ಜ್ಞಾನಸಂಕೋಚವನ್ನು ಹೊಂದಿ, ಆಗಾಗ ತನ್ನ ಸ್ವಭಾವದಲ್ಲಿ ಮಾರ್ಪ ಡುವನು, ತನ್ನ ಶರೀರದಲ್ಲಿ ತಾನೆಂಬ ಭ್ರಾಂತಿಯನ್ನೂ ಹೊಂದುವನು,ಅದ ರಿಂದಲೇ ಜೀವನಿಗೆ ಸಂಸಾರಬಂಧವುಂಟು. ಇದು ಭಗವಂತನಿಗಿಲ್ಲ. ಆ ಭಗ ವಂತನು ತಾನೇ ಅವುಗಳನ್ನು ಸೃಷ್ಟಿಸುವನು. ದೇವಮನುಷ್ಯಾದಿಸಮಸ್ತ ಭೂತಗಳಲ್ಲಿಯೂ ಒಳಹೊಕ್ಕಿರುವನು.ಆ ಸಮಸ್ತಭೂತಗಳನ್ನೂ ಕರ್ಮಾನು ಗುಣವಾಗಿ ತಾನೇ ನಿಯಮಿಸುವನು. ತನಗೆ ಶಕ್ತಿರೂಪವಾದ ಮಾಯೆ ಯೆಂಬ ಪ್ರಕೃತಿಯನ್ನು ಮುಂದಿಟ್ಟುಕೊಂಡು,ಅವನೇ ಈ ಪ್ರಪಂಚವನ್ನು ಸೃಷ್ಟಿಸಿ, ಅದನ್ನು ಕಾಪಾಡುತಿದ್ದು, ಕೊನೆಗೆ ತನ್ನಲ್ಲಿಯೇ ಉಪಸಂಹಾರ ಮಾಡಿಕೊಳ್ಳುವನು.ಆದುದರಿಂದ ಸ್ವರೂಪಸ್ವಭಾವಗಳಲ್ಲಿ ಕಾಣುವವಿಕಾ ರಗಳೆಲ್ಲವೂ,ಪ್ರಕೃತಿಪುರುಷರಿಗೆ ಸಂಬಂಧಿಸಿರುವುವೇಹೊರತು,ಅವುಈಶ್ವರ ನಲ್ಲಿ ಸಂಭವಿಸಲಾರವು.ಓ ಕುಮಾರಾ! ಆ ಭಗವಂತನು ತನ್ನಲ್ಲಿ ವಿಮುಖರಾ ದವರನ್ನು ಸಂಸಾರದಲ್ಲಿ ಕಟ್ಟಿಡುವನು.ತನ್ನನ್ನು ಭಜಿಸತಕ್ಕವರನ್ನು ಆ ಕಟ್ಟಿ ನಿಂದ ಬಿಡಿಸಿ ಮೋಕ್ಷವನ್ನು ಕೊಡುವನು.ಮತ್ತು ಅವನು ಸ್ವಯಂಪ್ರಕಾಶ ವುಳ್ಳವನು. ಸಮಸ್ತಜಗತ್ತಿಗೂ ಅವನೇ ಪ್ರಾಪ್ಯವಸ್ತುವಾಗಿಯೂ,ಪ್ರಾಪ ಕನಾಗಿಯೂ, ಆಧಾರನಾಗಿಯೂ, ನಿಯಾಮಕನಾಗಿಯೂ ಇರುವನು. ಆದುದರಿಂದ ನೀನು ಸರ್ವಪ್ರಕಾರದಿಂದಲೂ ಅವನನ್ನೇ ಮರೆಹೊಕ್ಕು, ಅವನ ಪಾದಾರವಿಂದಗಳನ್ನೇ ನಂಬಿರಬೇಕು. ವತ್ಸಾ! ಸೃಷ್ಟಿಕರ್ತರಾದ, ಬ್ರಹ್ಮ,ಮರೀಚಿ ಮೊದಲಾದವರೂ ಆ ಮಹಾನುಭಾವನನ್ನೇ ಪೂಜಿಸುತ್ತಿರು ವರು. ಅವರೂ ಆ ಭಗವಂತನ ಆಜ್ಞಾಧೀನರಾಗಿಯೇ ನಡೆಯತಕ್ಕವರು. ಮೂಗುದಾರವನ್ನು ಬೀರಿದ ಎತ್ತುಗಳು,ಮನುಷ್ಯರ ವಶವಾಗಿ ಕೆಲಸಮಾ ಡುವಂತೆ, ಬ್ರಹ್ಮರುದ್ರಾದಿಗಳೆಲ್ಲರೂ ಅವನ ಆಜ್ಞಾಧೀನರಾಗಿ ಕೆಲಸಮಾ ಡುತ್ತಿರುವರು.ಆದುದರಿಂದ ನೀನೂ ಸರ್ವಲೋಕನಿಯಾಮಕನಾದ ಆ ಭಗ

ವಂತನಲ್ಲಿಯೇ ಮನಸ್ಸಿಟ್ಟು, ಅವನನ್ನೇ ಶರಣುಹೊಂದು! ನಾವೆಲ್ಲರೂ ಆ ಭಗವಂತನ ವಶವರ್ತಿಗಳು. ಆದುದರಿಂದ ನಾವು ಅವನಿಗೆ ಸಂತೋಷಕರ ವಾದ ಕರ್ಮವನ್ನಾಚರಿಸಿ, ಅವನ ಅನುಗ್ರಹವನ್ನು ಪಡೆಯಬೇಕಾದುದು ಮುಖ್ಯಕಾರ್ಯವು. ವತ್ಸಾ!ಆ ಭಗವದುಪಾಸನೆಯ ಮಹಿಮೆಯನ್ನು ನೀನು ತಿಳಿಯದವನಲ್ಲ ! ಐದುವಯಸ್ಸಿನ ಬಾಲ್ಯದಲ್ಲಿಯೇ ಸವತಿತಾಯಿಯ ದು ರ್ವಾಕ್ಯವನ್ನು ಸಹಿಸಲಾರದೆ, ಹೆತ್ತತಾಯನ್ನೂ ಬಿಟ್ಟು ಕಾಡಿಗೆ ಹೋಗಿ, ಅಲ್ಲಿ ತಪೋನಿಷ್ಠನಾಗಿ ಭಗವಂತನನ್ನೊಲಿಸಿ, ಅವನನ್ನು ಭಕ್ತಿಪಾಶದಿಂದ ಬಿಗಿದು ಕಣ್ಣೆದಿರಿಗೆ ಕರೆತರಿಸಿದೆ! ಅವನ ಪೂರ್ಣಾನುಗ್ರಹವನ್ನು ಪಡೆದು, ತ್ರೈಲೋಕ್ಯಕ್ಕಿಂತಲೂ ಮೇಲಾದ ಉಚ್ಚಸ್ಥಾನವನ್ನೂ ಸಂಪಾದಿಸಿದೆ, ಈಗಲೂ ಬಿಡದೆ ಆ ಭಗವಂತನನ್ನೇ ಭಜಿಸುತ್ತಿರು ! ಆತ್ಮಜ್ಞಾನದಲ್ಲಿ ದೃ ಷ್ಟಿಯನ್ನಿಡು! ಆತ್ಮಸ್ವರೂಪವನ್ನು ನೀನು ಚೆನ್ನಾಗಿ ತಿಳಿದರೆ, ಅವನನ್ನು ಬಿಟ್ಟು ಬೇರೆ ವಸ್ತುವೇ ಇಲ್ಲವೆಂಬುದು ಸ್ಪಷ್ಟವಾಗುವುದು. ಎಲ್ಲಾ ಜೀವ ಗಳೂ ಅವನ ಶರೀರವಾದುದರಿಂದ, ಬೇರೆ ಯಾವ ಜೀವಕ್ಕೂ ದ್ರೋಹ ವನ್ನೆಣಿಸಬಾರದೆಂದೂ ನಿನಗೇ ತಿಳಿಯುವುದು. ಓ! ಧ್ರುವಾ ! ದೇವ ಮನುಷ್ಯಾದಿಶರೀರಗಳೆಲ್ಲವೂ ಒಂದುನೆಲೆಯಲ್ಲಿ ನಿಲ್ಲದೆ, ಯಾವಾಗಲೂ ವಿಕಾರಹೊಂದುತ್ತಿರುವುದರಿಂದ ಅಸತ್ತುಗಳೆನಿಸುವುವು. ಜೀವನಿಗೆ ಈ ಶರೀರಗಳು ಸಹಜವಾಗಿ ಏರ್ಪಟ್ಟುದಲ್ಲ. ಪುಣ್ಯಪಾಪಕರ್ಮಗಳಿಂದ ಅವ ನಿಗೆ ತಗಲುಕಟ್ಟುವುದು. ಜೀವನು ಅಣುಸ್ವರೂಪವಾಗಿರುವನು. ಅವ ಯವಗಳೊಂದೂ ಇಲ್ಲದವನು. ಅಂತಹ ಜೀವನಲ್ಲಿಯೂ ಪರಮಪುರು ಷನು ಅಂತರಾತ್ಮನಾಗಿರುವನು. ಆ ಪರಮಪುರುಷನು ಹೇಯಗುಣವಿಲ್ಲದ ವನು. ಸಮಸ್ತ ಕಲ್ಯಾಣಗುಣಗಳಿಂದ ತುಂಬಿದವನು. ವಿಕಾರವಿಲ್ಲದವನು. ತಾನೊಬ್ಬನೇ ಎಲ್ಲಕ್ಕೂ ನಿಯಾಮಕನಾಗಿ ತಾನುಮಾತ್ರ ಎಂದೆಂದಿಗೂ ನಾಶವಿಲ್ಲದಿರುವನು. ಅವನಿಗೆ ಜೀವನಂತೆ ಪ್ರಕೃತಿಸಂಬಂಧವಿಲ್ಲವಾದು ದರಿಂದ ನಿತ್ಯಮುಕ್ತನೆನಿಸುವನು. ಅಂತಹ ಪರಮಪುರುಷನನ್ನೇ ನೀನು ಅನುವರ್ತಿಸುತ್ತಿರು. ಆದರೆ "ನಾನು ಹಿಂದೆಯೇ ಭಗವಂತನನ್ನು ಉಪಾ ಸಿಸಿದವನಲ್ಲವೆ" ಎಂದು ನೀನು ಕೇಳಬಹುದು. ಹಿಂದೆ ನೀನು ಆ ಭಗವಂತ

ನನ್ನು ಉಪಾಸನೆಮಾಡಿದವನಾದರೂ, ಅಹಂಕಾರಮಮಕಾರಗಳಿಂದ ಮೋಹಗೊಂಡು,ಅಲ್ಪಸುಖಕಾರಣಗಳಾದಧರ್ಮಾರ್ಥಕಾಮಗಳನ್ನುದ್ದೇಶಿಸಿ ಅವನನ್ನು ಭಜಿಸಿದೆ!ಅದರಿಂದಲೇ ನಿನಗೆ ಈ ಪ್ರಕೃತಿಮಂಡಲದಲ್ಲಿ ಅಂತರ್ಗತವಾದ ಒಂದಾನೊಂದು ಉತ್ತಮಸ್ಥಾನವು ಲಭಿಸಿತು.ಇಷ್ಟುಮಾತ್ರಕ್ಕೆ ನಿನ್ನನ್ನು ನೀನುಕೃತಾರ್ಥನೆಂದೆಣಿಸಬೇಡ! ಇನ್ನುಮೇಲಾದರೂ ಯಾವಫಲವನ್ನೂ ಉದ್ದೇಶಿಸದೆ,ಅವನಲ್ಲಿ ಭಕ್ತಿಯನ್ನು ಮಾಡಿದರೆ,ಅದರಿಂದನೀನು ಉತ್ತಮಸುಖವಾದ ಮೋಕ್ಷವನ್ನು ಪಡೆಯಬಹುದು. ಸಮಸ್ತಜೀವಿಗಳಿಗೂ ಅಂತರಾತ್ಮನಾಗಿ,ಅವುಗಳನ್ನು ತನಗೆ ಶರೀರವನ್ನಾಗಿಹೊಂದಿ,ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸುಗಳೆಂಬ ಷಡ್ಗುಣಗಳಿಂದ ಪೂರ್ಣನಾಗಿ,ಕೇವಲಾನಂದಸ್ವರೂಪನಾಗಿ, ಸರ್ವಶಕ್ತನಾಗಿರುವ ಆ ಭಗವಂತನಲ್ಲಿ ದೃಢವಾದ ಮನಸ್ಸನ್ನಿಟ್ಟು, ಮೆಲ್ಲಮೆಲ್ಲಗೆ ಭಕ್ತಿಯನ್ನು ಸಾಧಿಸಿದರೆ, ಅಹಂಕಾರಮಮಕಾರಗಳಿಗೆ ಕಾರಣವಾದ ನಿನ್ನ ಅಜ್ಞಾನವೆಲ್ಲವೂ ನೀಗುವುದು. ಕುಮಾರಾ! ಮೊದಲು ನೀನು ಕೋಪವನ್ನು ನಿಗ್ರಹಿಸಬೇಕು.ಈ ಕೋಪವೆಂಬುದು ಸಮಸ್ತಶ್ರೇಯಸ್ಸುಗಳನ್ನೂ ಕೆಡಿಸುವುದು. ಪ್ರಾಣಿಜಾತಿಗೆ ಸಹಜವಾದ ಕೋಪವನ್ನು ಬಿಟ್ಟುಬಿಡುವುದು ಹೇಗೆಂದು ಕೇಳುವೆಯಾ? ಆತ್ಮಪರಮಾತ್ಮತತ್ವಗಳನ್ನುಚೆನ್ನಾಗಿಕೇಳಿ,ಅದನ್ನು ಮನನಮಾಡುತಿದ್ದರೆ, ಔಷಧಿಗಳಿಂದವ್ಯಾಧಿಯು ಹೇಗೋಹಾಗೆ,ಕೋಪವೆಂಬುದು ತಾನಾಗಿಯೇ ನೀಗುವುದು. ಆ ಕೋಪವನ್ನು ನೀಗುವುದರಿಂದ ನಿನಗೆ ಕ್ಷೇಮವುಂಟು.ಕೋಪವಶನಾದ ಮನುಷ್ಯನಿಗೆ ಲೋಕವೆಲ್ಲವೂ ನಡುಗುವುದು.ಆದುದರಿಂದ ವಿವೇಕಿಯಾಗಿ ತನಗೆ ಶ್ರೇಯಸ್ಸನ್ನುಕೋರತಕ್ಕವನು,ಆ ಕೋಪಕ್ಕೆ ವಶನಾಗಬಾರದು.ಮತ್ತು ಎಲೆ ವತ್ಸಾ ! ಈಗ ನೀನು ರುದ್ರನಿಗೆ ಒಡಹುಟ್ಟಿದವನಾದ ಕುಬೇರನನ್ನೇ ಅವಮಾನಪಡಿಸಿದಂತಾಯಿತು!ಏಕೆಂದರೆ,ಈಗನೀನು ನಿನ್ನ ಸಹೋದರನ ಮರಣಕ್ಕೆ ಯಕ್ಷರೇ ಕಾರಣರೆಂದು ಭ್ರಮಿಸಿ,ವಾಸ್ತವದಲ್ಲಿ ನಿರಪರಾಧಿಗಳಾದ ಆ ಯಕ್ಷರನ್ನು ಕೊಂದೆಯಲ್ಲವೆ? ಅವರೆಲ್ಲರೂ ಕುಬೇರನ ಭೃತ್ಯರಾದುದರಿಂದ ಆ ಕುಬೇರನ ಮನಸ್ಸನ್ನು ನೋಯಿಸಿದಂತಾಯಿತು. ಆದುದರಿಂದ ಈಕ್ಷಣವೇ ನೀನು ಆ ಕುಬೇರನಬಳಿಗೆ ಹೋಗಿ,

ನಮಸ್ಕರಿಸಿ,ವಿನಯವಾಕ್ಯಗಳಿಂದ ಅವನನ್ನು ಪ್ರಸನ್ನನಾಗಿ ಮಾಡಿಕೊಳ್ಳ ಬೇಕು ಈ ವಿಷಯದಲ್ಲಿಮಾತ್ರ ನೀನು ಕಾಲವಿಳಂಬವನ್ನೂ ಮಾಡಕೂಡದು. ಏಕೆಂದರೆ, ಮಹಾತ್ಮರ ತೇಜಸ್ಸು ಕುಲವನ್ನೇ ನಾಶಮಾಡಿಬಿಡುವುದು. ಆದುದರಿಂದ ಮಹಾತ್ಮನಾದ ಆ ಕುಬೇರನ ನಿಗ್ರಹಕ್ಕೆ ನೀನು ಪಾತ್ರನಾಗುವುದರೊಳಗಾಗಿ, ಅವನ ಅನುಗ್ರಹವನ್ನು ಸಂಪಾದಿಸುವುದಕ್ಕೆ ಪ್ರಯತ್ನಿಸುವುದು ಮೇಲು" ಎಂದನು. ವಿದುರಾ!ಹೀಗೆ ಸ್ವಾಯಂಭುವಮನುವು ತನ್ನ ಮುಮ್ಮಗನಾದ ಧ್ರುವನಿಗೆ ಬುದ್ಧಿವಾದವನ್ನು ಹೇಳಿ,ಅವನಿಂದ ನಮಸ್ಕೃತನಾಗಿ, ತನ್ನ ಸಂಗಡ ಬಂದಿದ್ದ ಋಷಿಗಳೊಡನೆ ಹಿಂತಿರುಗಿ ತನ್ನ ಪಟ್ಟಣವನ್ನು ಸೇರಿದನು. ಇಲ್ಲಿಗೆ ಹನ್ನೊಂದನೆಯ ಅಧ್ಯಾಯವು.

---

{ ಧ್ರುವನು ಕುಬೇರನನ್ನು ನಮಸ್ಕರಿಸಿ ಅವನಿಂದ ವರಗಳನ್ನು ಪಡೆದು ತನ್ನ ಪಟ್ಟಣಕ್ಕೆ ಬಂದುದು ಅಲ್ಲಿ ಅನೇಕಯಾಗಗಳನ್ನು ನಡೆಸಿ, ಭಗವಂತನನ್ನಾರಾಧಿಸುತಿದ್ದು,ಕೊನೆಗೆ ವಿಷ್ಣುಲೋಕವನ್ನು ಸೇರಿದುದು. }

ವಿದುರಾ ಕೇಳು ! ಸ್ವಾಯಂಭುವಮನುವಿನ ಹಿತೋಪದೇಶದಿಂದ ಧ್ರುವನು ತನ್ನ ಕೋಪವನ್ನು ನಿಗ್ರಹಿಸಿ, ಯುದ್ಧವನ್ನು ನಿಲ್ಲಿಸಿಬಿಟ್ಟನು. ಮಹಾತ್ಮನಾದ ಕುಬೇರನು ಈ ವೃತ್ತಾಂತವನ್ನು ಕೇಳಿದೊಡನೆ, ಸಂತೋಷಗೊಂಡು, ಯಕ್ಷ, ಕಿನ್ನರ,ಚಾರಣರೇ ಮೊದಲಾದ ತನ್ನ ಪರಿವಾರಗಳೊಡನೆ, ತಾನಾಗಿಯೇ ಧ್ರುವನನ್ನು ನೋಡುವುದಕ್ಕಾಗಿ ಹೊರಟುಬಂದನು. ಇಲ್ಲಿ ತನ್ನನ್ನು ಕಂಡು ಬದ್ಧಾಂಜಲಿಯಾಗಿ ವಿನಯದಿಂದ ನಿಂತ ಧ್ರುವನನ್ನು ನೋಡಿ, "ಓ ಕ್ಷತ್ರಿಯಕುಮಾರಾ ! ನಿನ್ನ ಗುಣಕ್ಕಾಗಿ ನಾನು ಬಹಳ ಸಂತೋಷಪಟ್ಟೆನು. ಯಕ್ಷರನ್ನು ಕೊಂದುದಕ್ಕಾಗಿ ನಿನ್ನಲ್ಲಿ ನಾನು ಸ್ವಲ್ಪಮಾತ್ರವೂ ದೋಷವನ್ನೆಣಿಸತಕ್ಕವನಲ್ಲ. ಮುಖ್ಯವಾಗಿ ನೀನು ನಿನ್ನ ಪಿತಾಮಹನಾದ ಸ್ವಾಯಂಭುವನ ಮಾತನ್ನು ಮೀರದೆ, ಇತರರಿಗೆ ಸುಲಭವಾಗಿ ನಿಗ್ರಹಿಸಲಾರದ ಕೋಪವನ್ನೂ ನಿಗ್ರಹಿಸಿ, ಮನಶ್ಶಾಂತಿಯನ್ನು ಹೊಂದಿದೆಯಲ್ಲವೆ ? ನಿನ್ನ ಮನೋದಾರ್ಢ್ಯಕ್ಕಾಗಿ ನಾನು ಬಹಳ ಸಂತೋಷಪಟ್ಟೆನು. ಈ ಯಕ್ಷರ ಮರಣಕ್ಕಾಗಿ ನಿನ್ನಲ್ಲಿ ನಾನು

ಕೋಪಿಸುವುದೇ ಯುಕ್ತವಲ್ಲ. ನೀನು ಯಕ್ಷರನ್ನು ಕೊಂದವನಲ್ಲ. ಈ ಯಕ್ಷರೂ ನಿನ್ನ ಸಹೋದರನನ್ನು ಕೊಂದವರಲ್ಲ! ಪ್ರಾಣಿಗಳ ಜನನಮರಣಗಳೆಲ್ಲವೂ ಕಾಲಾಧೀನವಾಗಿ ನಡೆಯುವುವು. ಒಂದು ಪ್ರಾಣಿಯನ್ನು ಕೊಲ್ಲುವುದಕ್ಕಾಗಲಿ, ಬದುಕಿಸುವುದಕ್ಕಾಗಲಿ,ಕಾಲಸ್ವರೂಪಿಯಾದ ಆ ಈಶ್ವರನೊಬ್ಬನುಹೊರತು ಬೇರೊಬ್ಬರೂ ಸಮರ್ಥರಲ್ಲ. ಆದರೆ, “ಇದುವರೆಗೆ ನಾನೇ ನನ್ನ ಕೈಯಿಂದ ಇವರನ್ನು ಎಷ್ಟೋ ಶ್ರಮಪಟ್ಟು ಕೊಲ್ಲುತ್ತಿರುವಾಗ, ಇವರ ಕೊಲೆಗೆ ನಾನು ಕಾರಣನಲ್ಲವೆಂಬುದುಹೇಗೆ ? ಇದು ಪ್ರತ್ಯಕ್ಷಾಪಲಾಪವಲ್ಲವೆ” ಎಂದು ನೀನು ಶಂಕಿಸಬಹುದು. ವತ್ಸಾ ! ಹೀಗೆ ತಿಳಿಯುವುದು ಕೇವಲಭ್ರಾಂತಿಯು ! ಈ ದೇಹಕ್ಕಿಂತಲೂ ವಿಲಕ್ಷಣವಾದ ಆತ್ಮಸ್ವರೂಪವನ್ನು ಯಾವನು ತಿಳಿಯಲಾರನೋ, ಅಂತಹ ಮನುಷ್ಯನಿಗೆ ಮಾತ್ರವೇ “ನಾನು, ನೀನು” ಎಂಬ ಬುದ್ಧಿಭ್ರಾಂತಿಯು ಹುಟ್ಟುವುದು. ನಾನು ಕೊಂದೆನೆಂದೂ, ನೀನು ಕೊಂದೆಯೆಂದೂ ಭಾವಿಸುವುದು ಅಜ್ಞಾನದ ಕಾರ್ಯವೇ ಹೊರತು ಬೇರೆಯಲ್ಲ. ಹೀಗೆ ಹೇಳುವ ಮಾತಿನಲ್ಲಿ “ನಾನು, ನೀನು” ಎಂಬುದಕ್ಕೆ ಅರ್ಥವೇ ಇಲ್ಲ ಈ ಶಬ್ದಗಳು ಅವನ ಅನ್ಯಥಾಜ್ಞಾನ ವಿಪರೀತಜ್ಞಾನವನ್ನೇ ತೋರಿಸುವುವು. ನೇತ್ರರೋಗವುಳ್ಳವನು ಬಿಳುಪಾದ ಶಂಖವನ್ನು ನೋಡಿ, ಅದನ್ನು ಹಳದಿಬಣ್ಣವೆಂದು ಭ್ರಮಿಸುವಂತೆ, ಒಂದು ವಸ್ತುವಿನ ಧರ್ಮವನ್ನು ಮತ್ತೊಂದು ವಸ್ತುವಿನಲ್ಲಿ ಭ್ರಮಿಸುವುದು. ಅನ್ಯಥಾಜ್ಞಾನವೆನಿಸುವುದು ಬೆಳ್ಳಿಯನ್ನು ನೋಡಿ ಮುತ್ತಿನ ಚಿಪ್ಪೆಂದು ಭ್ರಮಿಸುವಂತೆ ಒಂದು ವಸ್ತುವನ್ನೇಮತ್ತೊಂದು ವಸ್ತುವನ್ನಾಗಿ ಭ್ರಮಿಸುವುದು ವಿಪರೀತಜ್ಞಾನವೆನಿಸುವುದು. ಹೀಗೆ ಆತ್ಮವಲ್ಲದ ಶರೀರದಲ್ಲಿ ಆತ್ಮಬುದ್ಧಿಯಾಗಲಿ, ಆತ್ಮನಿಗಿಲ್ಲದ ಸಾವನ್ನು ಆ ಆತ್ಮನಿಗುಂಟೆಂದು ಭಾವಿಸುವುದಾಗಲಿ, ಅಜ್ಞಾನದ ಕಾರ್ಯವೆನಿಸುವುದು. ಕೊಲ್ಲುವುದಾಗಲಿ, ಸಾಯುವುದಾಗಲಿ ಜೀವಾತ್ಮನ ಸ್ವಭಾವಗಳಲ್ಲ. ಜೀವನಿಗೆ ಶರೀರಸಂಬಂಧವೇ ಉತ್ಪತ್ತಿಯೆನಿಸುವುದು. ಆ ಶರೀರವಿಯೋಗವೇ ಮರಣವೆನಿಸುವುದು. ಆದುದರಿಂದ ಉತ್ಪತ್ತಿವಿನಾಶಗಳೆರಡೂ ಶರೀರಕ್ಕಲ್ಲದೆ ಆತ್ಮನಿಗಲ್ಲ. “ಆ ದೇಹಕ್ಕಾದರೂ ಉತ್ಪತ್ತಿವಿನಾಶಗಳುಂಟಲ್ಲವೆ” ಎಂ

ದರೆ,ಹಾಗೆ ಭಾವಿಸುವುದೂ ಯುಕ್ತವಲ್ಲ. ಮೊದಲಿದ್ದ ರೂಪವನ್ನು ಬಿಟ್ಟು ಬಿಡುವುದೇ ದೇಹಕ್ಕೆ ನಾಶವೆನಿಸುವುದು. ಮತ್ತೊಂದು ರೂಪಾಂತರವನ್ನು ಹೊಂದುವುದೇ ಉತ್ಪತ್ತಿಯೆನಿಸುವುದು. ಈವಿಧವಾದ ಅವಸ್ಥಾಭೇದಗಳನ್ನು ಆಗಾಗ ಹೊಂದುತ್ತಿರಬೇಕಾದುದೇ ಪ್ರಕೃತಿಯ ಸ್ವಭಾವವಾದುದರಿಂದ, ಯಾವ ದೇಹಕ್ಕೂ ಇದು ತಪ್ಪಿದುದಲ್ಲ,ಆದುದರಿಂದ ಪ್ರಕೃತಿಪರಿಣಾಮರೂಪವಾದ ದೇಹಕ್ಕೆ ಅವಶ್ಯವಾಗಿ ಬಂದೇತೀರಬೇಕಾದ ಈರೂಪಭೇದಗಳನ್ನು ಕುರಿತು ನಾವು ಚಿಂತಿಸಬೇಕಾದ ಅವಶ್ಯಕತೆಯೇ ಇರುವುದಿಲ್ಲ. ಆದುದರಿಂದ ಈ ಜನನಮರಣಗಳನ್ನು ಕುರಿತು ಚಿಂತಿಸುವುದು ಅಜ್ಞಾನದ ಕಾರ್ಯವು. ಈ ಭಾವನೆಗಳೆಲ್ಲವೂ ಸ್ವಪ್ನಾನುಭವದಂತೆ ಸುಳ್ಳಾಗಿರುವುವೇ ಹೊರತು ನಿಜವಲ್ಲ. ಕನಸನ್ನು ಕಾಣುವವನು ತನ್ನ ಸ್ವಪ್ನದಲ್ಲಿ ಆನೆ, ಕುದುರೆ, ಮನೆ, ಮಠ, ಮುಂತಾದ ಎಷ್ಟೋ ಭೋಗಸಾಧನಗಳನ್ನು ತಾನು ಅನುಭವಿಸುವಂತೆ ಭ್ರಮಿಸುವನು. ಈ ವಸ್ತುಗಳೆಲ್ಲವೂ ಈಶ್ವರಸೃಷ್ಟಿಯಲ್ಲಿ ನಿಜವಾಗಿದ್ದರೂ, ಕನಸಿನಲ್ಲಿಮಾತ್ರ ಇವು ಸ್ವಲ್ಪಕಾಲದವರೆಗೆ ಆ ಕನಸನ್ನು ಕಾಣತಕ್ಕವನೊಬ್ಬನಿಗೆಮಾತ್ರ ತೋರುತ್ತಿರುವುವು. ಅವನಿಗೆ ಎಚ್ಚರವುಂಟಾಗಿ ಕಣ್ಣು ತೆರೆದೊಡನೆ, ಅವೆಲ್ಲವೂ ಅಗೋಚರವಾಗುವುವು. ಈ ಸ್ವಲ್ಪಕಾಲದ ಅನುಭವವೂಕೂಡ ಜೀವನಿಗೆ ಈಶ್ವರಸಂಕಲ್ಪದಿಂದಲೇ ಉಂಟಾಗುವುದು. ಸಂಸಾರಾನುಭವವೆಂಬುದೂ ಈ ಸ್ವಪ್ನಾನುಭವದಂತೆಯೇಹೊರತು ಬೇರೆಯಲ್ಲ. ಆದರೆ ಸ್ವಪ್ನದಲ್ಲಿ ಕಾಣುವ ವಸ್ತುಗಳು, ಆಯಾ ಕಾಲದಲ್ಲಿಮಾತ್ರವೇ ಸುಖದುಃಖಾದಿಗಳನ್ನು ಕಾಣಿಸುವುವು. ದೇಹಾತ್ಮಭ್ರಮವಾದರೋ ಆಯಾಕಾಲಗಳಲ್ಲಿಮಾತ್ರವೇ ಅಲ್ಲದೆ, ಮೇಲೆಮೇಲೆ ಜನ್ಮಜರಾಮರಣಾದಿದುಃಖಗಳಿಗೆ ನೆಲೆಯಾದ ಸಂಸಾರದಲ್ಲಿ ಸಿಕ್ಕಿಸಿ, ಮಹಾನರ್ಥಗಳನ್ನು ತಂದು ಸೇರಿಸುತ್ತಲೇ ಇರುವುದು. ಇದರಿಂದ ಸಂಸಾರಬಂಧದಲ್ಲಿ ಸಿಕ್ಕಿಬಿದ್ದ ಜೀವನಿಗೆ, ತನಗೆ ಸಹಜವಾಗಿ ಏರ್ಪಟ್ಟಿರುವ ಶುದ್ಧಸ್ವರೂಪವೂ ಮರೆತುಹೋಗುವುದು. ಅನೇಕಕಷ್ಟದಲ್ಲಿ ತೊಳಲುತ್ತಿರುವನು. ಈಗ ನೀನು ಯಕ್ಷರನ್ನು ಕೊಂದುದೂ, ಅದರಿಂದ ನಿನ್ನ ದೇಹದಲ್ಲಿ ಬೆವರು ಮುಂತಾದ ಶ್ರಮಚಿಹ್ನಗಳು ಕಾಣುತ್ತಿರುವುದೂ,

ಇದಕ್ಕೆ ಹಿಂದೆ ಯಕ್ಷನೊಬ್ಬನು ನಿನ್ನ ಸಹೋದರನನ್ನು ಕೊಂದುದೂ,ಇವೆಲ್ಲವೂ ನಮಗೆ ಪ್ರತ್ಯಕ್ಷವಾಗಿ ಕಾಣುತ್ತಿದ್ದರೂ, ದೇಹಕ್ಕಾಗಲಿ, ಆತ್ಮಕ್ಕಾಗಲಿ ಈ ಧರ್ಮಗಳನ್ನಾರೋಪಿಸುವುದು ತಪ್ಪು. ಇವೆಲ್ಲವನ್ನೂ ನಡೆಸತಕ್ಕವನು ಕಾಲಸ್ವರೂಪಿಯಾದ ಈಶ್ವರನಲ್ಲದೆ ಬೇರೆಯಲ್ಲ. ಈಗ ನಿನ್ನ ದೇಹದಲ್ಲಿ ಕಾಣುವ ಬೆವರು, ಬಳಲಿಕೆ, ಮುಂತಾದ ವಿಕಾರಗಳೂಕೂಡ,ಪ್ರಕೃತಿಪುರುಷಮೂಲಕವಾಗಿ, ಅವುಗಳನ್ನು ಶರೀರವಾಗಿ ಉಳ್ಳ ಈಶ್ವರನಿಗೇ ಸಂಬಂಧಪಟ್ಟುವೆಂದು ತಿಳಿಯಬೇಕು. ಹೀಗೆಯೇ ಅನೇಕಶಾಸ್ತ್ರಗಳೂ, ಆ ಶಾಸ್ತ್ರಗಳನ್ನು ನಿರ್ಣಯಿಸಿದ ಹಿರಿಯರೂ ನಿರೂಪಿಸಿರುವರಾದುದರಿಂದ,ಈ ವಿಚಾರದಲ್ಲಿ ನಾವು ಬೇರೆವಿಧವಾಗಿ ಎಣಿಸುವುದು ಕೇವಲಭ್ರಾಂತಿಯು ಆದುದರಿಂದ ಎಲೆ ಕುಮಾರಾ! ಇನ್ನು ನೀನು ಹೊರಡು! ನಿನಗೆ ಮಂಗಳವಾಗಲಿ! ಪೃಥಿವಿ ಮೊದಲಾದ ಭೂತಗಳನ್ನೂ, ಜೀವಾತ್ಮರನ್ನೂ ಶರೀರವಾಗಿ ಹೊಂದಿ, ಇಂದ್ರಿಯಸಂಬಂಧವಾದ ಜ್ಞಾನಗಳಿಗೆ ಗೋಚರಿಸದ ಆ ಸರ್ವೇಶ್ವರನೇ,ಈ ಲೋಕದ ಉತ್ಪತ್ತಿವಿನಾಶಾದಿಗಳಿಗೆಲ್ಲಾ ಕಾರಣವೆಂಬುದನ್ನು ನೀನು ದೃಢವಾಗಿ ನಂಬಿ, ಮೋಕ್ಷದಲ್ಲಿ ದೃಷ್ಟಿಯಿಟ್ಟು, ಆತನ ಪಾದಾರವಿಂದವನ್ನು ಭಜಿಸುತ್ತಿರು. ಸಮಸ್ತ ಚೇತನಾಚೇತನಗಳೂ ಆ ಈಶ್ವರನಿಗೆ ಶರೀರವಾಗಿರುವುದರಿಂದ, ಈ ಯಕ್ಷರೂ ಆ ಪರಮಾತ್ಮನ ಶರೀರಭೂತರಾಗಿಯೇ ಇರುವರು. ಇವರನ್ನು ನೀನು ವಧಿಸುವುದರಿಂದ, ಆ ಈಶ್ವರನಿಗೇ ದ್ರೋಹವನ್ನು ಮಾಡಿದಂತಾಗುವುದು. ಈಗ ನೀನು ಈ ಕೊಲೆಗೆಲಸವನ್ನು ನಿಲ್ಲಿಸಿದುದರಿಂದ ನಿನಗೆ ಸರ್ವವಿಧದಲ್ಲಿಯೂ ಕ್ಷೇಮವುಂಟು. ಇನ್ನು ನೀನು ನಿನ್ನ ಮನೆಗೆ ಹೋಗಿ,ಆ ಭಗವಂತನನ್ನು ಉಪಾಸನೆಮಾಡುತ್ತಿರು! ಆದರೆ “ಇಂದ್ರಿಯಗಳಿಗೆ ಗೋಚರಿಸದ ಆ ಭಗವಂತನನ್ನು ಯಾವವಿಧದಿಂದ ನಾವು ಸಾಕ್ಷಾತ್ಕರಿಸಬಲ್ಲೆವು” ಎಂದು ಕೇಳುವೆಯಾ? ಅವನು ಇಂದ್ರಿಯಗಳಿಗೆ ಗೋಚರಿಸತಕ್ಕವನಾಗಿದ್ದರೂ, ಯೋಗಾಭ್ಯಾಸದಿಂದ ಶುದ್ಧಮನಸ್ಸುಳ್ಳವರು, ಅವನನ್ನು ತಮ್ಮ ಮನಸ್ಸಿನಿಂದ ಸಾಕ್ಷಾತ್ಕರಿಸಬಹುದು. ಆ ಭಗವಂತನು ನಮ್ಮಂತೆ ಸಂಸಾರಬಂಧಕ್ಕೆ ಸಿಕ್ಕುವವನಲ್ಲ. ತಾನು ಸಂಸಾರಕ್ಕೆ ಸಿಕ್ಕದಿರುವುದು ಮಾತ್ರವಲ್ಲ. ತನ್ನ ಆಶ್ರಿತರ ಸಂಸಾರಬಂಧವನ್ನು ಬಿಡಿ

ಸುವುದಕ್ಕೂ ಸಮರ್ಥನಾಗಿರುವನು. ಆದರೆ “ಪ್ರಕೃತಿಸಂಬಂಧವೇ ಸಂಸಾರವೆನಿಸುವುದಲ್ಲವೆ? ಜೀವನಂತೆ ಪರಮಾತ್ಮನಿಗೂ ಪಕೃತಿಸಂಬಂಧವಿದ್ದೇ ಇರುವುದು! ಏಕೆಂದರೆ, ಪೃಥಿವಿ ಮೊದಲಾದ ಸಮಸ್ತಭೂತಗಳನ್ನೂ ಅವನು ತನಗೆ ಶರೀರವನ್ನಾಗಿ ಹೊಂದಿರುವನು. ಇವೆಲ್ಲವೂ ಪ್ರಕೃತಿಯವಿಕಾರಗಳೇಆದುದರಿಂದ. ಅವನಿಗೂಪ್ರಕೃತಿಸಂಬಂಧವುಂಟೆಂಬುದು ಸ್ಪಷ್ಟವಾಗುವುದು. ಹೀಗೆ ಪ್ರಕೃತಿಸಂಬಂಧದಿಂದ ಸಂಸಾರಿಯೆನಿಸಿಕೊಂಡವನು, ಮತ್ತೊಬ್ಬರ ಸಂಸಾರವನ್ನು ಹೇಗೆತಾನೇ ಬಿಡಿಸಬಲ್ಲನು?” ಎಂದು ನೀನು ಶಂಕಿಸಬಹುದು. ಅದು ಹಾಗಲ್ಲ! ಗುಣತ್ರಯಾತ್ಮಕವಾದ ಮಾಯೆಯೆಂಬ ಪ್ರಕೃತಿಯು ಅವನಿಗೆ ಶರೀರವಾಗಿದ್ದರೂ, ಅದು ಅವನ ಆಜ್ಞಾಧೀನವಾಗಿ ನಡೆಯುವುದೇಹೊರತು ಅವನನ್ನು ಕಟ್ಟಿಡಲಾರದು. ಅದೇ ಪ್ರಕೃತಿಯು ನಮ್ಮಂತಹ ಜೀವಾತ್ಮರನ್ನು ತನ್ನ ಇಷ್ಟಾನುಸಾರವಾಗಿ ಕಟ್ಟಿಡಬಲ್ಲುದು. ಈ ಪ್ರಕೃತಿಯು ಜೀವನಿಗೆ ಸಂಬಂಧಿಸಿದೊಡನೆ,ಅವನ ಜ್ಞಾನವನ್ನು ತಗ್ಗಿಸಿ, ಅವನಿಗೆ ದೇಹಾತ್ಮಭ್ರಮವನ್ನುಂಟುಮಾಡಿ, ಅವನ ಶುದ್ಧಾತ್ಮಸ್ವರೂಪವನ್ನು ಮರೆಸಿ, ಸಂಸಾರಬಂಧದಲ್ಲಿ ಸಿಕ್ಕಿಸಿಡುವುದು ಆದುದರಿಂದ ಜೀವಾತ್ಮಪರಮಾತ್ಮರಿಬ್ಬರಿಗೂ! ಪ್ರಕೃತಿಸಂಬಂಧವೆಂಬುದು ಸಮಾನವಾಗಿದ್ದರೂ, ಪರಮಾತ್ಮನು ಆ ಪ್ರಕೃತಿಯನ್ನು ತನ್ನ ಇಷ್ಟಾನುಸಾರವಾಗಿ ನಡೆಸಬಲ್ಲನು. ಜೀವಾತ್ಮನಾದರೋ ಆ ಪ್ರಕೃತಿಯನ್ನಡಗಿಸಲಾರದೆ ಅದಕ್ಕಧೀನವಾಗಿ ನಡೆಯುವನು. ಜೀವನಿಗೆ ಈ ಪ್ರಕೃತಿಸಂಬಂಧವನ್ನು ಬಿಡಿಸಬೇಕಾದರೂ ಆ ಪರಮಾತ್ಮನೇ ಸಮರ್ಥನು. ಆದುದರಿಂದ ವತ್ಸ ಧ್ರುವಾ! ನೀನು ಮೋಕ್ಷವನ್ನು ಕೋರುವೆಯಾದರೆ ಆ ಭಗವಂತನನ್ನೇ ಭಜಿಸಬೇಕು. ಹಾಗಿಲ್ಲದೆ, ಧರ್ಮಾರ್ಥಕಾಮಗಳೆಂಬ ಮೂರು ಪುರುಷಾರ್ಥಗಳಲ್ಲಿ ನಿನಗೆ ಇನ್ನೂ ಆಸೆಯಿದ್ದಪಕ್ಷದಲ್ಲಿ, ನಿನಗೆ ಬೇಕಾದ ವರಗಳನ್ನು ನಿಸ್ಸಂಕೋಚವಾಗಿ ಕೇಳು! ನಾನು ಕೊಡುವೆನು. ಕುಮಾರಾ! ನೀನು ದೇವದೇವನಾದ ಆಭಗವಂತನ ಪಾದಾರವಿಂದಗಳಲ್ಲಿ ನಟ್ಟಮನಸ್ಸುಳ್ಳವನೆಂಬುದನ್ನು ನಾವು ಇದಕ್ಕೆ ಮೊದಲೇ ಕೇಳಿಬಲ್ಲೆವು. ನಿನ್ನ ದೃಢಭಕ್ತಿಗಾಗಿ ನಾನು ಬಹಳ ಸಂತೋಷಪಟ್ಟೆನು.ನಿನಗೆ ಬೇಕಾದ

ವರವನ್ನು ಕೇಳು ಕೊಡುವೆನು" ಎಂದನು. ಹೀಗೆ ಕುಬೇರನು,ಕೇಳಿದ ವರಗಳನ್ನು ಕೊಡುವುದಕ್ಕೆ ಸಿದ್ಧನಾಗಿರುವುದನ್ನು ನೋಡಿ, ಭಗವದ್ಭಕ್ತನಾಗಿಯೂ, ಮಹಾಧೀಮಂತನಾಗಿಯೂ ಇರುವ ಧ್ರುವನು ಆ ಕುಬೇರನನ್ನು ಕುರಿತು "ಎಲೈ ದೇವಶ್ರೇಷ್ಠನೆ! ಈಗ ನಾನು ಬೇರೊಂದನ್ನೂ ನಿನ್ನಿಂದ ಅಪೇಕ್ಷಿಸುವವನಲ್ಲ ! ಬೇರೆ ಯಾವ ಉಪಾಯದಿಂದಲೂ ದಾಟಲಸಾಧ್ಯವಾದ ಸಂಸಾರಸಮುದ್ರವನ್ನು ಅನಾಯಾಸವಾಗಿಯೇ ದಾಟಿಸತಕ್ಕ ಆ ಹರಿಸ್ಮರಣವು ನನ್ನ ಮನಸ್ಸಿನಲ್ಲಿ ದೃಢವಾಗಿ ನಿಲ್ಲುವಂತೆ ಅನುಗ್ರಹಿಸಬೇಕು. ಇದೇ ಈಗ ನಾನು ನಿನ್ನಿಂದ ಪಡೆಯಬೇಕಾದ ವರವು"ಎಂದನು. ಇದನ್ನು ಕೇಳಿ ಕುಬೇರನು, ಸಂತೋಷಪೂರ್ವಕವಾಗಿ ಆ ಧ್ರುವನನ್ನು ಕುರಿತು "ವತ್ಸಾ ! ಹಾಗೆಯೇ ಆಗಲಿ!" ಎಂದು ವರವನ್ನು ಕೊಟ್ಟು ಆ ಬಾಲಕನು ನೋಡುತಿದ್ದಹಾಗೆಯೇ ಅಂತರ್ಧಾನವನ್ನು ಹೊಂದಿದನು. ಇತ್ತಲಾಗಿ ಧ್ರುವನೂಕೂಡ, ತನ್ನ ಪಟ್ಟಣಕ್ಕೆ ಹಿಂತಿರುಗಿ ಬಂದು, ಯಜ್ಞಸಾಧನಗಳನ್ನು ಸಂಗ್ರಹಿಸಿ,ವಿಧ್ಯುಕ್ತಗಳಾದ ಕಾರ್ಯಗಳಿಂದ ಇಂದ್ರಾದಿದೇವತೆಗಳನ್ನು ಸಂತೋಷಪಡಿಸುವುದರಮೂಲಕವಾಗಿ,ಯಜ್ಞಾರಾಧ್ಯನಾಗಿಯೂ, ಸಮಸ್ತಕರ್ಮಗಳಿಗೂ ಫಲವನ್ನು ಕೊಡತಕ್ಕವನಾಗಿಯೂ ಇರುವ ಭಗವಂತನನ್ನಾರಾಧಿಸುತ್ತ ಬಂದನು. ಹೀಗೆ ಬಹುದಕ್ಷಿಣೆಗಳುಳ್ಳ ಅನೇಕ ಯಾಗಗಳನ್ನು ನಡೆಸುತಿದ್ದುದಲ್ಲದೆ, ತನ್ನ ಅಜ್ಜನಾದ ಸ್ವಾಯಂಭುವಮನುವಿನ ಉಪದೇಶವನ್ನನುಸರಿಸಿ, ಸರ್ವಾತ್ಮಕನಾದ ಆ ಭಗವಂತನಲ್ಲಿ ತೀವ್ರವಾದ ಭಕ್ತಿಯೋಗವನ್ನು ಹಿಡಿದು, ತನ್ನಲ್ಲಿಯೂ, ಇತರ ಸಮಸ್ತಭೂತಗಳಲ್ಲಿಯೂ ಆ ಭಗವಂತನ ರೂಪವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಿದ್ದನು. ಸಕಲಸದ್ಗುಣಸಂಪನ್ನನಾಗಿಯೂ, ಬ್ರಾಹ್ಮಣಪ್ರಿಯನಾಗಿಯೂ,ದೀನವತ್ಸಲನಾಗಿಯೂ ಇದ್ದ ಆ ಧ್ರುವನು, ಆಯಾ ವರ್ಣಾಶ್ರಮಧರ್ಮಮರ್ಯಾದೆಯನ್ನು ನೆಲೆಗೊಳಿಸಿ ರಾಜ್ಯಭಾರಮಾಡುತ್ತಿರುವಾಗ, ಪ್ರಜೆಗಳೆಲ್ಲರೂ ಅವನನ್ನೇ ಹೆತ್ತತಂದೆಯಂತೆ ಭಾವಿಸುತ್ತಿದ್ದರು. ಇದೇರೀತಿಯಲ್ಲಿ ಧ್ರುವನು, ಇಪ್ಪತ್ತಾರುಸಾವಿರವರ್ಷಗಳವರೆಗೆ ಧರ್ಮದಿಂದ ರಾಜ್ಯವನ್ನಾಳುತಿದ್ದನು. ಈಕಾಲದಲ್ಲಿ ತನಗೆ ಆಗಾಗ ಸಂಭವಿಸುತಿದ್ದ ಸುಖದುಃಖಾನುಭವದಿಂದಲೇ

ತನ್ನ ಪುಣ್ಯಪಾಪಕರ್ಮಗಳೆಲ್ಲವನ್ನೂ ಕಳೆದು,ಇಂದ್ರಿಯಗಳನ್ನು ದುರ್ವಿಷಯ ಗಳಿಗೆ ಪ್ರವರ್ತಿಸದಂತೆ ತಡೆದು, ಮನಸ್ಸನ್ನು ಆ ಭಗವಂತನೊಬ್ಬನಲ್ಲಿಯೇ ನೆಲೆಗೊಳಿಸಿದ್ದನು. ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳನ್ನು ಸಾಧಿಸುವು ದಕ್ಕೆ ಅನುಕೂಲವಾದ ಇಷ್ಟು ದೀರ್ಘಕಾಲವನ್ನೂ ಸತ್ಕಾರ್ಯದಿಂದಲೇ ಕಳೆಯುತ್ತ, ಒಂದೊಂದುವರ್ಷವೂ ಅನೇಕಯಾಗಗಳನ್ನು ನಡೆಸಿ, ಕೊನೆಗೆ ರಾಜ್ಯವನ್ನು ತನ್ನ ಪುತ್ರನ ವಶಕ್ಕೊಪ್ಪಿಸಿಬಿಟ್ಟನು. ದೇವಮನುಷ್ಯಾದಿರೂ ಪವಾದ ಈ ಪ್ರಪಂಚವೆಲ್ಲವೂ, ಆತ್ಮನಿಗೆ ಅವಿದ್ಯೆಯೆಂಬ ಪ್ರಕೃತಿಯ ಸಂ ಬಂಧದಿಂದುಂಟಾದ ವಿಕಾರಗಳೆಂದೂ, ಇವೆಲ್ಲವೂ ಸ್ವಪ್ನಪದಾರ್ಥಗಳಂತೆ ಯೂ, ಆಕಾಶದಲ್ಲಿ ಮೇಘಗಳ ಜೋಡಣೆಯಿಂದ ಕಾಣುವ ವಿಚಿತ್ರಾಕೃತಿ ಗಳಂತೆಯೂ ಕ್ಷಣಕಾಲವಿದ್ದು ಹೋಗತಕ್ಕವುಗಳೆಂದೂ ನಿಶ್ಚಯಿಸಿಕೊಂ ಡನು. ಮತ್ತು ತನ್ನ ದೇಹವೂ, ಹೆಂಡಿರು, ಮಕ್ಕಳು, ಮಿತ್ರರು ಮುಂತಾದ ಪರಿವಾರಗಳೂ,ಅರಮನೆ, ಬೊಕ್ಕಸ, ಚತುರಂಗಸೈನ್ಯ, ಅಂತಃಪುರ, ವಿಹಾ ರಭೂಮಿ,ಮೊದಲಾದ ಭೋಗಸಾಮಗ್ರಿಗಳೂ, ಕೊನೆಗೆ ಸಪ್ತಸಮುದ್ರ ಗಳಿಂದಾವರಿಸಲ್ಪಟ್ಟ ಭೂಮಂಡಲವೂಕೂಡ, ಕಾಲಾಧೀನವಾಗಿ ಹುಟ್ಟಿ, ಕಾಲಾಧೀನವಾಗಿಯೇ ಹೋಗತಕ್ಕವುಗಳೆಂದೂ ತಿಳಿದನು. ಹೀಗೆ ಇವೆಲ್ಲ ವೂ ಅಶಾಶ್ವತಗಳೆಂಬ ನಿಶ್ಚಯದಿಂದ ಅವೆಲ್ಲವನ್ನೂ ಬಿಟ್ಟು ತಪೋವನ ಕ್ಕಾಗಿ ಹೊರಟನು.ವಿಶಾಲವಾದ ಬದರಿಕಾಶ್ರಮಕ್ಕೆ ಹೋಗಿ, ಅಲ್ಲಿ ಪವಿತ್ರ ವಾದ ಜಲದಲ್ಲಿ ಸ್ನಾನಮಾಡಿ, ಇಂದ್ರಿಯಗಳನ್ನು ನಿಗ್ರಹಿಸಿ, ಯೋಗಾ ಸನದಲ್ಲಿ ಕುಳಿತು, ಪ್ರಾಣವಾಯುವನ್ನು ತಡೆದು, ಕಣ್ಣು,ಕಿವಿ,ಮೊದಲಾ ದ ಇಂದ್ರಿಯಗಳೆಲ್ಲವನ್ನೂ ಬೇರೆವಿಷಯಗಳಲ್ಲಿ ಪ್ರವರ್ತಿಸದಂತೆ ಸ್ವಾಧೀನ ಪಡಿಸಿಕೊಂಡು, ಭಗವನ್ಮೂರ್ತಿಯಲ್ಲಿಯೇ ಸ್ಥಿರವಾಗಿ ನೆಲೆಗೊಳಿಸಿದನು. ಹೀಗೆ ಧ್ರುವನು ಕ್ರಮವಾಗಿ ಯಮನಿಯಮಗಳೇ ಮೊದಲಾದ ಅಷ್ಟಾಂಗ ಗಳಿಂದ ಭಕ್ತಿಯೋಗವನ್ನು ಹಿಡಿದು, ಭಗವಂತನ ದಿವ್ಯಮಂಗಳವಿಗ್ರಹ ವನ್ನು ತನ್ನ ಮನಸ್ಸಿನಲ್ಲಿ ದೃಢವಾಗಿ ನೆಲೆಗೊಳಿಸಿಕೊಂಡಮೇಲೆ,ಆ ಸ್ಥೂಲ ರೂಪವನ್ನು ಬಿಟ್ಟು,ಆ ಭಗವಂತನ ದಿವ್ಯಾತ್ಮಸ್ವರೂಪವನ್ನು ಧ್ಯಾನಿಸತೊ ಡಗಿದನು. ಹೀಗೆ ಧ್ರುವನು ಎಡೆಬಿಡದೆ ಭಗವಂತನನ್ನು ಧ್ಯಾನಮಾಡುತ್ತ

ಬಂದಹಾಗೆಲ್ಲಾ, ಅವನ ಭಕ್ತಿಯು ಪರಿಪಕ್ವವಾಗಿ, ಅವನ ಕಣ್ಣುಗಳಲ್ಲಿ ಆನಂದಬಾಷ್ಪವು ತುಳುಕುತಿತ್ತು. ಅವನ ದೇಹವೆಲ್ಲವೂ ಪುಳಕಿತವಾಯಿತು.ಅವನಿಗೆ ದೇಹಾಭಿಮಾನವೂ ಬಿಟ್ಟುಹೋಯಿತು. ಅವನ ಮನಸ್ಸು ಕರಗಿತು. ಅವನ ದೇಹವೇ ಅವನಿಗೆ ಮರೆತುಹೋಯಿತು. ತಾನು ಇಂತವನೆಂಬ ಸ್ಮರಣೆಯೇ ಬಾರದಂತಾಯಿತು.ಹೀಗೆ ಧ್ರುವನು ತನ್ನ ಹೊರಗಿನ ದೇಹಾದಿಗಳೆಲ್ಲವನ್ನೂ ಮರೆತು, ಆತ್ಮಸ್ವರೂಪವೊಂದನ್ನೇ ಧ್ಯಾನಿಸುತ್ತಿರುವಾಗ, ಆಗಲೇ ಉದಿಸಿಬಂದ ಪೂರ್ಣಚಂದ್ರನಂತೆ ಕಾಂತಿಯಿಂದ ಹತ್ತುದಿಕ್ಕುಗಳನ್ನೂ ಬೆಳಗುತ್ತಿರುವ ಒಂದಾನೊಂದು ದಿವ್ಯವಿಮಾನವು ಆಕಾಶದಿಂದಿಳಿದು ತನ್ನಕಡೆಗೆ ಬರುತ್ತಿರುವುದನ್ನೂ, ಅದರಲ್ಲಿ ಕುಮಾರವಯಸ್ಸುಳ್ಳ ದೇವಶ್ರೇಷ್ಠರಿಬ್ಬರು ಕುಳಿತಿರುವುದನ್ನೂ ಕಂಡನು. ಆ ದೇವಕುಮಾರರಿಗಾದರೋ ನಾಲ್ಕುಭುಜಗಳು!ಮೇಘದಂತೆ ಶ್ಯಾಮಲವಾದ ದೇಹಕಾಂತಿ! ಕಮಲದಳದಂತೆ ಕೆಂಪಾದ ಕಣ್ಣು! ಕೈಯಲ್ಲಿ ಗದೆ! ನಡುವಿನಲ್ಲಿ ಉತ್ತಮವಾದ ದುಕೂಲದ ಪಟ್ಟೆಮಡಿ! ತಲೆಯಲ್ಲಿ ರತ್ನದಕಿರೀಟಗಳು! ಕಿವಿಯಲ್ಲಿ ಕುಂಡಲಗಳು! ತೋಳುಗಳಲ್ಲಿ ಭುಜಕೀರ್ತಿ, ಕೈಬಳೆ, ತೋಳ್ಬಳೆ, ಮುಂತಾದ ದಿವ್ಯಾಭರಣಗಳು! ಹೀಗೆ ಸರ್ವಾಭರಣಭೂಷಿತರಾಗಿ, ವಿಮಾನದಲ್ಲಿ ಕುಳಿತು ತನ್ನಿದಿರಿಗೆ ಬರುವ ಆ ದೇವಶ್ರೇಷ್ಠರನ್ನು ಕಂಡೊಡನೆ,ಧ್ರುವನು, ಅವರು ವಿಷ್ಣುದೂತರೆಂಬುದನ್ನು ತಿಳಿದು, ಭಯಭಕ್ತಿಗಳಿಂದ ತಟ್ಟನೆ ಮೇಲಕ್ಕೆದ್ದುನಿಂತನು. ಆಗ ಧ್ರುವನಿಗೆ ಅವರನ್ನು ನೋಡಿದುದರಿಂದುಂಟಾದ ಭಯಸಂಭ್ರಮಗಳಿಂದ ಮೈಮರೆತಂತಾಯಿತು. ಇದರಿಂದ ಆ ಧ್ರುವನು, ಅವರಿಗೆ ನಡೆಸಬೇಕಾದ ಪೂಜಾಕ್ರಮವನ್ನೂ ಮರೆತು,ಅವರಮುಂದೆ ಭಗವಂತನ ನಾಮಗಳನ್ನುಮಾತ್ರ ಉಚ್ಚರಿಸುತ್ತ ಬದ್ಧಾಂಜಲಿಯಾಗಿ ಸುಮ್ಮನೆ ನಿಂತುಬಿಟ್ಟನು. ಹೀಗೆ ಭಗವಂತನ ನಾಮೋಚ್ಚಾರಣವನ್ನು ಮಾಡುತ್ತ ವಿನಯದಿಂದ ತಲೆಯನ್ನು ತಗ್ಗಿಸಿ ಕೈಮುಗಿದು ನಿಂತಿದ್ದ ಆ ಧ್ರುವನನ್ನುನೋಡಿ, ಸುನಂದನಂದರೆಂಬ ಆ ವಿಷ್ಣುದೂತರಿಬ್ಬರೂಪ್ರೇಮಸೂಚಕವಾದ ಮಂದಹಾಸದೊಡನೆ ಸಮೀಪಕ್ಕೆ ಬಂದು ಅವನನ್ನು ಕುರಿತು ಹೀಗೆಂದು ಹೇಳುವರು.

“ರಾಜೇಂದ್ರಾ! ನಿನಗೆ ಮಂಗಳವಾಗಲಿ! ನಮ್ಮ ಮಾತನ್ನು ಸಾವಧಾನವಾಗಿ ಕೇಳು! ನೀನು ಐದುವರ್ಷದ ಬಾಲ್ಯದಲ್ಲಿಯೇ ತಪೋನಿರತನಾಗಿ ಯಾವ ಭಗವಂತನನ್ನೊಲಿಸಿದೆಯೋ, ಸರ್ವಲೋಕರಕ್ಷಕನಾದ ಆ ಭಗವಂತನಿಗೆ ನಾವು ಪ್ರಧಾನಕಿಂಕರರು! ಆಭಗವಂತನ ಸಾನ್ನಿಧ್ಯಕ್ಕೆ ನಿನ್ನನ್ನು ಕರೆದುಕೊಂಡು ಹೋಗುವುದಕ್ಕಾಗಿಯೇ ಬಂದಿರುವೆವು. ಎಲೈ ಮಹಾತ್ಮನೆ! ಲೋಕದಲ್ಲಿ ಬೇರೊಬ್ಬರಿಂದ ಸಾಧಿಸಲಸಾಧ್ಯವಾದ ವಿಷ್ಣುಪದವನ್ನು ನೀನು ನಿನ್ನ ತಪೋಬಲದಿಂದ ಸಾಧಿಸಿರುವೆ! ಎಲ್ಲರಿಗಿಂತಲೂ ಉತ್ತಮಪದವಿಯಲ್ಲಿರುವ ಸಪ್ತರ್ಷಿಗಳೇ ಮೊದಲಾದ ಮಹಾತ್ಮರೂಕೂಡ, ಅದನ್ನು ಸೇರಲಾರದೆ, ಸುಮ್ಮನೆ ದೂರದಿಂದಲೇ ನಿಂತು ನೋಡುತ್ತ, ಅಷ್ಟರಲ್ಲಿಯೇ ತೃಪ್ತಿಪಡುವರು. ಮತ್ತು ಆ ಸ್ಥಾನವನ್ನು ಚಂದ್ರಾದಿಗ್ರಹಗಳೆಲ್ಲವೂ ಅನವರತವೂ ಪ್ರದಕ್ಷಿಣಮಾಡುತ್ತಿರುವುವು. ಹಿಂದೆ ಮನು ಮೊದಲಾದ ನಿನ್ನ ವಂಶದವರಾಗಲಿ, ಬೇರೆ ಪ್ರಜಾಧಿಪತಿಗಳಾಗಲಿ ಆ ಸ್ಥಾನವನ್ನು ಕಂಡವರಲ್ಲ. ಸರ್ವಲೋಕಪೂಜ್ಯನಾದ ಆಸ್ಥಾನವು ನಿನಗೆ ಕೈಸೇರಿರುವುದು. ಅಂತಹ ವಿಷ್ಣುಸ್ಥಾನಕ್ಕೆ ನೀನು ಹೊರಡುವನಾಗು! ಎಲೈ ಆಯುಷ್ಮಂತನೆ! ನಿನ್ನನ್ನು ಕರೆತರುವುದಕ್ಕಾಗಿ ಪುಣ್ಯಶ್ಲೋಕನಾದ ಭಗವಂತನು ಈ ವಿಮಾನವನ್ನು ಕಳುಹಿಸಿಕೊಟ್ಟಿರುವನು. ಇನ್ನು ನೀನು ಈ ದಿವ್ಯವಿಮಾನವನ್ನೇರಿ ಕುಳ್ಳಿರಬಹುದು” ಎಂದರು. ವಿಷ್ಣುಭಕ್ತೋತ್ತಮನಾದ ಧ್ರುವನು ಅಮೃತ ಸಮಾನವಾದ ಈ ವಿಷ್ಣುದೂತರ ಮಾತನ್ನು ಕೇಳಿದೊಡನೆ, ಮಂಗಳಸ್ನಾನವನ್ನು ಮಾಡಿ, ನಿತ್ಯಕರ್ಮಗಳನ್ನು ಮುಗಿಸಿಕೊಂಡು, ಅಲ್ಲಿದ್ದ ಮಹರ್ಷಿಗಳನ್ನು ನಮಸ್ಕರಿಸಿ, ಅವರಿಂದ ಆಶೀರ್ವಾದಪೂರ್ವಕವಾದ ಅನುಮತಿಯನ್ನು ಪಡೆದು, ಆ ವಿಮಾನದ ಬಳಿಗೆ ಬಂದನು. ಆ ವಿಮಾನಕ್ಕೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿದಮೇಲೆ ಆ ವಿಷ್ಣುಕಿಂಕರರಿಗೂ ನಮಸ್ಕರಿಸಿದನು. ಹೀಗೆ ಧ್ರುವನು ವಿಮಾನವನ್ನೇರುವುದಕ್ಕೆ ಸಿದ್ಧನಾಗಿ ನಿಂತೊಡನೆ, ಅವನ ದೇಹದಲ್ಲಿ ಒಂದುವಿಧವಾದ ದಿವ್ಯತೇಜಸ್ಸುಂಟಾಯಿತು. ಆಕಾಶದಲ್ಲಿ ದೇವದುಂದುಭಿಗಳೂ, ಮದ್ದಳೆ, ಪಣವ, ಮೊದಲಾದ ಇತರ ಮಂಗಳವಾದ್ಯಗಳೂ ಮೊಳಗುತಿದ್ದುವು. ಗಂಧರ್ವರು ಗಾನಮಾಡತೊಡಗಿದರು. ಅಂತ

ರಿಕ್ಷದಿಂದ ಪುಷ್ಪವೃಷ್ಟಿಯು ಸುರಿಯಿತು. ಈ ಸಮಸ್ತವೈಭವಗಳೊಡನೆ ಧ್ರುವನು ಆ ದಿವ್ಯವಿಮಾನವನ್ನೇರುವಷ್ಟರಲ್ಲಿ,ಅವನಿಗೆ ತನ್ನ ತಾಯಿಯಾದ ಸುನೀತಿಯ ಸ್ಮರಣೆಯುಂಟಾಯಿತು. ಜನನಿಯನ್ನು ಬಿಟ್ಟು ಹೋಗಲಾರದ ದುಃಖದಿಂದ, ಅವನು ತನ್ನಲ್ಲಿ ತಾನು “ಆಹಾ! ನಾನಾದರೋ ಈಗ ಬೇರೊಬ್ಬರಿಗೆ ದುರ್ಲಭವಾದ ಉತ್ತಮಸ್ಥಾನಕ್ಕೆ ಹೋಗುತ್ತಿರುವೆನು. ನಾನು ಹೋದಮೇಲೆ ಬೇರೆ ದಿಕ್ಕಿಲ್ಲದ ನನ್ನತಾಯಿಗೆ ಗತಿಯೇನು? ತಿರುಗಿ ನಾನು ಅವಳನ್ನು ಕಾಣುವುದೆಲ್ಲಿ? ಹೆತ್ತ ತಾಯನ್ನು ಬಿಟ್ಟು ಕೇವಲಸ್ವಾರ್ಥಪರನಾಗಿ ನಾನೊಬ್ಬನೇ ಹೇಗೆ ಹೋಗಲಿ!” ಎಂದು ಮನಸ್ಸಿನಲ್ಲಿ ಚಿಂತಾಕುಲನಾಗಿ ಆ ವಿಮಾನವನ್ನೇರುವುದಕ್ಕೆ ಹಿಂಜರಿಯುತಿದ್ದನು. ಆಗ ವಿಷ್ಣುಕಿಂಕರರಿಬ್ಬರೂ ಧ್ರುವನ ಅಭಿಪ್ರಾಯವನ್ನು ತಿಳಿದು, ಸುನೀತಿಯು ದೇವಶ್ರೇಷ್ಠರಿಂದ ತರಲ್ಪಟ್ಟ ಬೇರೊಂದುವಿಮಾನದಲ್ಲಿ ಕುಳಿತು ಊರ್ಧ್ವಲೋಕಕ್ಕೆ ಹೋಗುತ್ತಿರುವುದನ್ನು ಧ್ರುವನಿಗೆ ತೋರಿಸಿದರು. ಅದನ್ನು ನೋಡಿದಮೇಲೆ ಧ್ರುವನು ಮನಸ್ಸಿನಲ್ಲಿ ನಿಶ್ಚಿಂತನಾಗಿ, ತಾನೂ ವಿಮಾನವನ್ನೇರಿಕುಳಿತನು.ಒಡನೆಯೇ ಆ ವಿಮಾನವು ಊರ್ಧ್ವಮುಖವಾಗಿ, ಹೊರಟಿತು. ಹೀಗೆ ಧ್ರುವನು ವಿಮಾನಾರೂಢನಾಗಿ ಹೋಗುತ್ತಿರುವಾಗ, ದಾರಿಯುದ್ದಕ್ಕೂ ಅಲ್ಲಲ್ಲಿ ದೇವತೆಗಳು ವಿಮಾನಾರೂಢರಾಗಿ ಬಂದು ಇವನನ್ನು ಸ್ತುತಿಸುತಿದ್ದರು. ದಾರಿಯುದ್ದಕ್ಕೂ ಇವನಮೇಲೆ ದೇವಗಂಧರ್ವಾದಿಗಳೆಲ್ಲರೂ ಪುಷ್ಪವೃಷ್ಟಿಯನ್ನು ಕರೆಯುತಿದ್ದರು ಹೀಗೆ ಸಮಸ್ತದೇವತೆಗಳಿಂದ ಸತ್ಕರಿಸಲ್ಪಡುತಿದ್ದ ಧ್ರುವನು,ಮೇಲೆಮೇಲೆ ಕ್ರಮವಾಗಿ ಸೂರ್ಯಚಂದ್ರಾದಿಲೋಕಗಳೆಲ್ಲವನ್ನೂ ನೋಡುತ್ತ ಮುಂದೆ ಸಾಗಿ, ಹಾಗೆಯೇ ತ್ರೈಲೋಕ್ಯವನ್ನೂ ಅದರಮೇಲಿನ ಸಪ್ತರ್ಷಿಮಂಡಲವನ್ನೂ ದಾಟಿಹೋದನು. ಕೊನೆಗೆ ಇವೆಲ್ಲಕ್ಕಿಂತಲೂ ಮೇಲಾಗಿಯೂ, ಕಲ್ಪಾಂತದಲ್ಲಿಯೂ ನಾಶವಿಲ್ಲದುದಾಗಿಯೂ,ವಿಷ್ಣುಪದವೆಂದು ಪ್ರಸಿದ್ಧಿಗೊಂಡುದಾಗಿಯೂ ಇರುವ ತನ್ನ ಸ್ಥಾನವನ್ನು ಸೇರಿದನು. ವಿದುರಾ! ಆ ಸ್ಥಾನದ ಮಹಾಮಹಿಮೆಯನ್ನು ಕೇಳಬೇಕೆ? ಅದು ಬೇರೊಂದರ ಸಹಾಯವಿಲ್ಲದೆ ತನಗೆ ತಾನೇ ಬೆಳಗುತ್ತಿರುವುದು. ಅದರ ತೇಜಸ್ಸಿನಿಂದಲೇ ಈ ಮೂರುಲೋಕಗಳಿಗೂ ಬೆ

ಳಿಕುಂಟಾಗುತ್ತಿರುವುದು.ಯಾವಾಗಲೂಇತರಭೂತಗಳಿಗೆಕ್ಷೇಮವನ್ನು ಚಿಂತಿಸತಕ್ಕವರುಮಾತ್ರವೇ ಆ ಸ್ಥಾನವನ್ನು ಪಡೆಯಬಲ್ಲರು.ಮತ್ತು ಶಮದಮಾದಿ ಗುಣಗಳಿಂದ ಕೂಡಿದವರೂ,ಎಲ್ಲವನ್ನೂ ಸಮಬುದ್ಧಿಯಿಂದ ನೋಡತಕ್ಕವರೂ,(ಎಂದರೆ, ದೇಹವೇ ಮೊದಹಾದ ಜಡಪದಾರ್ಥಗಳೆಲ್ಲವೂ ಒಂದೇ ಪ್ರಕೃತಿಯಿಂದುಂಟಾದ ಬೇರೆಬೇರೆ ವಿಕಾರಗಳಾದುದರಿಂದ,ಅವೆಲ್ಲವೂ ಒಂದೇಬಗೆಯಾದುವೆಂದೂ,ಜೀವಗಳೆಲ್ಲವೂ ಜ್ಞಾನಸ್ವರೂಪದಿಂದ ಒಂದೇವಿಧವಾದುವುಗಳೆಂದೂ,ಇವೆಲ್ಲವುಗಳಲ್ಲಿಯೂ ಈಶ್ವರನು ಒಂದೇವಿಧವಾಗಿ ಅಂತರ್ಯಾಮಿಯಾಗಿರುವುದರಿಂದ ಎಲ್ಲವೂ ಪರಮಾತ್ಮಸ್ವರೂಪವೆಂದೂ ಸಮಬುದ್ಧಿಯಿಂದ ನೋಡತಕ್ಕವರೂ)ಭಗವದ್ಭಕ್ತರ ಪ್ರೀತಿಗೆ ಪಾತ್ರರಾದವರೂ, ಸಮಸ್ತಭೂತಗಳನ್ನೂ ಸಂತೋಷಗೊಳಿಸತಕ್ಕ ಸ್ವಭಾವವುಳ್ಳವರೂ,ವಿಶೇಷವಾಗಿ ಸಿದ್ಧಿಯನ್ನು ಪಡೆದವರೂ,ಇವರೆಲ್ಲರೂ ಆಸ್ಥಾನವನ್ನು ಪಡೆಯುವರು.ಬ್ರಹ್ಮಲೋಕಕ್ಕೆ ಹೋಗಿ ಸೇರಿದವರು,ಹಿಂತಿರುಗಿ ಬಾರದೆ ಕಲ್ಪಾವಸಾನದವರೆಗೆ ಅಲ್ಲಿಯೇ ಇದ್ದು,ಆಯಾಕಲ್ಪದ ಬ್ರಹ್ಮದೇವನೊಡನೆ ಹೇಗೆ ಪರಮಪದವನ್ನು ಸೇರುವರೋ,ಹಾಗೆಯೇ ಈ ಧ್ರುವಗತಿಯನ್ನು ಸೇರಿದವರೂ ಕೂಡ ಕಲ್ಪಾಂತದವರೆಗೆ ಅಲ್ಲಿಯೇ ಇದ್ದು, ಅಲ್ಲಿಂದ ಹಾಗೆಯೇ ಪರಮಪದವನ್ನು ಸೇರುವರು. (ಶಮದಮಾದಿಗುಣಗಳು,ಭೂತದಯೆ,ಸರ್ವಭೂತಗಳಲ್ಲಿಯೂ ಸಮಬುದ್ಧಿ ಇಂತಹ ಸದ್ಗುಣಗಳಿಂದ ತುಂಬಿದ ಕೆಲವು ಮಹಾತ್ಮರು, ಬ್ರಹ್ಮೋಪಾಸನೆಯಲ್ಲಿ ನಿರತರಾಗಿದ್ದರೂ, ನಡುನಡುವೆ ಭೋಗಾಪೇಕ್ಷೆಯಿಂದ ಅವರ ಕರ್ಮಶೇಷವು ಸಂಪೂರ್ಣವಾಗಿ ಕಳೆದುಹೋಗದೆ, ಸ್ವಲ್ಪಭಾಗವು ಉಳಿಯುವುದರಿಂದ, ಬ್ರಹ್ಮೋಪಾಸನದಲ್ಲಿ ಸಂಪೂರ್ಣವಾದ ಸಿದ್ಧಿಯನ್ನು ಹೊಂದದೆ ಹೋಗುವುದುಂಟು.ಅಂತವರು ನೆಟ್ಟಗೆ ಮೋಕ್ಷವನ್ನು ಹೊಂದಲಾರರು. ಸತ್ಯಲೋಕವನ್ನು ಸೇರಿ, ಅಲ್ಲಿ ತಮ್ಮ ಕರ್ಮಶೇಷವನ್ನು ಕಳೆದುಕೊಂಡು,ಆಮೇಲೆ ಮೋಕ್ಷಕ್ಕೆ ಹೋಗುವರು. ಅದರಂತೆಯೇ ಧ್ರುವಲೋಕವನ್ನು ಸೇರಿದವರೂಕೂಡ, ಅಲ್ಲಿನ ಭೋಗಗಳನ್ನನುಭವಿಸುತಿದ್ದು,ಅಲ್ಲಿ ತಮ್ಮ ಭಕ್ತಿಯೋಗವನ್ನು ಪೂರ್ತಿಮಾಡಿಕೊಂಡಮೇಲೆ, ಅಲ್ಲಿಂದ ಹಾಗೆಯೇ ಮೋಕ್ಷವನ್ನು ಹೊಂದುವರು.)ವಿದುರಾ! ಉತ್ತಾನ

ಪಾದನ ಮಗನಾದ ಧ್ರುವನು, ಆ ಲೋಕಕ್ಕೆ ಪ್ರಭುವಾಗಿ, ಅಲ್ಲಿ ತ್ರೈಲೋಕ್ಯಕ್ಕೂ ಒಂದು ಚೂಡಾಮಣಿಯೋಪಾದಿಯಲ್ಲಿ ಪ್ರಕಾಶಿಸುತ್ತಿರುವನು. ಮೇಟಿಯ ಕಂಬವನ್ನು ಸುತ್ತುವ ಎತ್ತುಗಳಂತೆ, ಗ್ರಹನಕ್ಷತ್ರಮಂಡಲವೆಲ್ಲವೂ ಈ ಧ್ರುವಲೋಕಕ್ಕೆ ತಗುಲಿಸಲ್ಪಟ್ಟು, ಅನವರತವೂ ಅದನ್ನು ಸುತ್ತುತ್ತಿರುವುವು. ಇಂತಹ ಮಹಾಮಹಿಮೆಯುಳ್ಳ ಆ ಧ್ರುವನ ಪ್ರಭಾವವನ್ನು ನೋಡಿ, ಮಹಾನುಭಾವನಾದ ನಾರದನು,ತನ್ನ ವೀಣೆಯನ್ನು ನುಡಿಸುತ್ತ, ಬ್ರಹ್ಮಸತ್ರಗಳು ನಡೆಯುವಕಾಲದಲ್ಲಿಯೂ, ಭಗವಂತನ ಮಹಿಮೆಯನ್ನು ಕೊಂಡಾಡುವ ಸ್ಥಳಗಳಲ್ಲಿಯೂ, ಆ ಧ್ರುವನ ಮಹಿಮೆಗಳನ್ನು ಕೊಂಡಾಡತಕ್ಕ ಈ ಮೂರು ಶ್ಲೋಕಗಳನ್ನು ಗಾನಮಾಡಿರುವನು. ಆ ನಾರದನಿಂದ ಗಾನಮಾಡಲ್ಪಟ್ಟ ಶ್ಲೋಕಾರ್ಥವನ್ನು ಹೇಳುವೆನು ಕೇಳು.

ಸುನೀತಿಯ ಮಗನಾದ ಧ್ರುವನು,ತನ್ನ ತಪಸ್ಸಿಗೆ ಫಲವಾಗಿ ಪಡೆದ ಉತ್ತಮಗತಿಯನ್ನೂ, ಆ ಸದ್ಗತಿಯನ್ನು ಸಾಧಿಸುವುದಕ್ಕೆ ಬೇಕಾದ ಭಗವದಾರಾಧನರೂಪವಾದ ಉಪಾಯಗಳನ್ನೂ ನೋಡಿ, ವೇದವಾದಿಗಳಾದ ಅನೇಕಮಹರ್ಷಿಗಳೂ ಕೂಡ, ಅದೇ ಉಪಾಯಗಳನ್ನು ಹಿಡಿದು ಯತ್ನಿಸಿದರೂ, ಅವರು ಆ ಸದ್ಗತಿಯನ್ನು ಪಡೆಯಲಾರರು. ಅಂತಹ ಸದ್ಗತಿಯನ್ನು ಸಾಧಿಸಬೇಕೆಂದರೆ ಬೇರೆ ರಾಜರಿಂದ ಹೇಗೆತಾನೇ ಸಾಧ್ಯವು ?

ಆತನು ತನ್ನ ಸವತಿತಾಯಿಯ ಕ್ರೂರವಾಕ್ಯಗಳೆಂಬ ಬಾಣಗಳಿಂದ ನೊಂದು, ಐದು ವರುಷದ ಬಾಲ್ಯದಲ್ಲಿಯೇ ತಪೋವನಕ್ಕೆ ಹೊರಟು, ಅಲ್ಲಿ ನಾನು ಹೇಳಿದ ನಿಯಮದಂತೆ ನಡೆದು,ಭಕ್ತ್ಯಾದಿಗುಣಗಳಿಂದ ಭಗವಂತನನ್ನು ವಶಪಡಿಸಿಕೊಂಡು, ಬೇರೊಬ್ಬರಿಗೆ ದುರ್ಲಭವಾದ ಪದವಿಯನ್ನು ಪಡೆದನು.

ಲೋಕದಲ್ಲಿ ಬೇರೊಬ್ಬಕ್ಷತ್ರಿಯನು ಅನೇಕಸಹಸ್ರವರುಷಗಳವರೆಗೆ ಪ್ರಯತ್ನಪಟ್ಟರೂ ಯಾವ ಪದವಿಯನ್ನು ಪಡೆಯಲಾರನೋ, ಅಂತಹ ಉತ್ತಮಪದವಿಯನ್ನು, ಈ ಧ್ರುವನು ತನ್ನ ಐದುವರುಷದ ಬಾಲ್ಯದಲ್ಲಿಯೇ ಸ್ವಲ್ಪದಿನಗಳ ಪ್ರಯತ್ನದಿಂದ ಸಾಧಿಸಿ, ಪರಮಪುರುಷನನ್ನು ಸಂತೋಷಪಡಿಸಿ, ಆ ವಿಷ್ಣುಸಾನ್ನಿಧ್ಯವನ್ನು ಪಡೆದಿರುವನು."

ಎಂಬುದೇ ಆ ಶ್ಲೋಕಾರ್ಥವು. ನಾರದನು ತಾನು ಭಗವತ್ಕೀರ್ತನವನ್ನು ಮಾಡುವ ಕಡೆಗಳಲ್ಲೆಲ್ಲಾ ಇದೇ ಅರ್ಥಗಳಿಂದ ಧ್ರುವನ ಮಹಿಮೆಯನ್ನು ಕೊಂಡಾಡುತ್ತಿರುವನು. ವಿದುರಾ! ಇದೇ ಧ್ರುವನ ವೃತ್ತಾಂತವು. ನೀನು ಪ್ರಶ್ನೆಮಾಡಿದುದಕ್ಕಾಗಿ ಇವೆಲ್ಲವನ್ನೂ ಸವಿಸ್ತರವಾಗಿ ತಿಳಿಸಿರುವೆನು.ಮಹಾಯಶಸ್ವಿಯಾದ ಆ ಧ್ರುವನ ಚರಿತ್ರವು,ಸಮಸ್ತಸಜ್ಜನರಿಗೂ ಅತ್ಯಂತಪ್ರಿಯವಾದುದು. ಇದು ಐಶ್ವರ್ಯವನ್ನಾಗಲಿ ಯಶಸ್ಸನ್ನಾಗಲಿ,ಆಯುಸ್ಸನ್ನಾಗಲಿ ಯಾವುದನ್ನು ಕೋರಿದರೂ ಆಯಾ ಇಷ್ಟಾರ್ಥವನ್ನು ಕೈಗೂಡಿಸುವುದು. ಸಮಸ್ತವಿಧದಲ್ಲಿಯೂ ಈ ಚರಿತ್ರವು ಮಂಗಳಕರವೆನಿಸುವುದು.ಸ್ವರ್ಗಫಲವನ್ನು ಕೋರತಕ್ಕವರಿಗೆ ಸ್ವರ್ಗವನ್ನೂ,ಧ್ರುವಲೋಕವನ್ನಪೇಕ್ಷಿಸಿದವರಿಗೆ ಅದೇ ಸದ್ಗತಿಯನ್ನೂ ಕೈಗೂಡಿಸುವುದು. ಮನಸ್ಸಿನ ದುಃಖವೆಲ್ಲವನ್ನೂ ನೀಗಿಸುವುದು. ಸರ್ವವಿಧದಲ್ಲಿಯೂ ಮೇಲ್ಮೆಯನ್ನುಂಟುಮಾಡುವುದು. ಸಮಸ್ತಪಾಪಗಳನ್ನೂ ನೀಗಿಸುವುದು. ಭಗವದ್ಭಕ್ತಶಿರೋಮಣಿಯಾದ ಆ ಧ್ರುವನ ಚರಿತ್ರವನ್ನು ಯಾವನು ಶ್ರದ್ಧೆಯಿಂದ ಬಾರಿಬಾರಿಗೂ ಕೇಳುತ್ತಿರುವನೋ, ಅವನಿಗೆ ಮನಸ್ಸಿನಲ್ಲಿ ತಾನಾಗಿಯೇ ಭಗವದ್ಭಕ್ತಿಯು ಹುಟ್ಟಿ, ಅದರಿಂದ ಅವನ ಆಧ್ಯಾತ್ಮಿಕಾದಿತಾಪತ್ರಯಗಳೆಲ್ಲವೂ ನೀಗುವುವು. ಲೋಕದಲ್ಲಿ ಮೇಲ್ಮೆಯನ್ನಪೇಕ್ಷಿಸಿದವನಿಗೆ ಮೇಲ್ಮೆಯನ್ನುಂಟುಮಾಡುವುದು.ತೇಜಸ್ಸನ್ನಪೇಕ್ಷಿಸಿದವರಿಗೆ ತೇಜಸ್ಸನ್ನು ಕೊಡುವುದು. ಮನಶ್ಶುದ್ಧಿಯನ್ನಪೇಕ್ಷಿಸಿದವರಿಗೆ ಮನಸ್ಸನ್ನು ಶುದ್ಧಪಡಿಸುವುದು. ಈ ಕಥೆಯನ್ನು ಕೇಳುವುದರಿಂದ, ಸಾತೀಲ್ಯಾದಿಗುಣಗಳೆಲ್ಲವೂ ಉಂಟಾಗುವುವು. ಪುಣ್ಯಕೀರ್ತಿಯಾದ ಈ ಧ್ರುವನ ಚರಿತ್ರವನ್ನು ಬ್ರಾಹ್ಮಣಸಭೆಯಲ್ಲಿ, ಪ್ರಾತಃಕಾಲದಲ್ಲಿಯೂ, ಸಾಯಂಕಾಲದಲ್ಲಿಯೂ, ಶ್ರದ್ಧೆಯಿಂದ ಕೀರ್ತಿಸುವವರಿಗೆ ಸರ್ವಾಭೀಷ್ಟಗಳೂ ಸಿದ್ಧಿಸುವುವು. ಮತ್ತು ಪೂರ್ಣಿಮೆ, ಚಂದ್ರಕಲೆಯಿಂದ ಕೂಡಿದ ಅಮಾವಾಸ್ಯೆ, ಶ್ರವಣನಕ್ಷತ್ರ, ಸಪ್ತಮಿ, ಭಾನುವಾರ, ದ್ವಾದಶಿ, ಸಂಕ್ರಮಣ, ಮುಂತಾದ ಪುಣ್ಯದಿವಸಗಳಲ್ಲಿ ಈ ಚರಿತ್ರವನ್ನು ಕೀರ್ತಿಸುವುದರಿಂದ ಮಹಾಫಲವುಂಟು. ಯಾವನು ಶ್ರದ್ಧೆಯಿಂದ ಕೇಳತಕ್ಕವರಿಗೆ ಈ ಚರಿತ್ರವನ್ನು ಪ್ರತಿಫಲಾಪೇಕ್ಷೆಯಿಲ್ಲದೆ

ಹೇಳುವನೋ, ಅವನು ಭಗವಂತನ ಪ್ರೀತಿಗೆ ಪಾತ್ರನಾಗಿ ಉತ್ತಮ ಸಿದ್ಧಿ ಯನ್ನು ಪಡೆಯುವನು. ವಿದುರಾ! ಲೋಕದಲ್ಲಿ ಪ್ರಕೃತಿಪುರುಷೇಶ್ವರರೆಂಬ ಮೂರುತತ್ವಗಳ ನಿರ್ಣಯವನ್ನು ತಿಳಿಯದ ಅಜ್ಞಾನಿಗಳಿಗಾಗಿ, ಯಾವನು ಜ್ಞಾನಪ್ರದಾನವನ್ನು ಮಾಡುವನೋ, ಅಂತಹ ದಯಾಸ್ವಭಾವವುಳ್ಳ ಜ್ಞಾನಿಯ ವಿಷಯದಲ್ಲಿ ಸಮಸ್ತದೇವತೆಗಳೂ ಪ್ರಸನ್ನರಾಗುವರು. ಎಲೈ ಕುರುವಂಶೋತ್ತಮನೆ! ಯಾವನು ಸಣ್ಣ ಕೂಸಾಗಿರುವಾಗಲೇ ತನ್ನ ಮಕ್ಕ ಳಾಟದ ಸಾಮಗ್ರಿಗಳನ್ನೂ, ತನ್ನ ಹೆತ್ತತಾಯಿಯನ್ನೂ, ತನ್ನ ಅರಮನೆ ಯನ್ನೂ ಬಿಟ್ಟು ತಪೋವನಕ್ಕೆ ಹೋಗಿ, ಶ್ರೀಮನ್ನಾರಾಯಣನ ಪಾದಾರ ವಿಂದಗಳನ್ನು ಮರೆಹೊಕ್ಕನೋ, ಅಂತಹ ಪುಣ್ಯಕೀರ್ತಿಯಾದ ಧ್ರುವನ ಚರಿತ್ರವನ್ನು ನಿನಗೆ ಆಮೂಲಾಗ್ರವಾಗಿ ತಿಳಿಸಿರುವೆನು" ಎಂದನು. ಇಲ್ಲಿಗೆ ಹನ್ನೆರಡನೆಯ ಅಧ್ಯಾಯವು.

---

## ಪೃಥುಚಕ್ರವರ್ತಿಯ ವೃತ್ತಾಂತವು.

{ಅಂಗರಾಜನು ತನ್ನ ಮಗನ ದುಸ್ಸ್ವಭಾವವನ್ನು ನೋ ಡಿ ಸಂಸಾರದಲ್ಲಿ ಜಿಹಾಸೆಯಿಂದ ವನಕ್ಕೆ ಹೋದುದು.}

ಹೀಗೆ ಮೈತ್ರೇಯಮಹರ್ಷಿಯಿಂದ ವರ್ಣಿಸಲ್ಪಟ್ಟ ಧ್ರುವಚರಿತ್ರ ವನ್ನು ಕೇಳಿ ವಿದುರನಿಗೆ ಭಗವಂತನಲ್ಲಿ ಮತ್ತಷ್ಟು ಭಕ್ತಿವಿಶೇಷವುಹೆಚ್ಚಿತು. ಇನ್ನೂ ಮೇಲೆಮೇಲೆ ಮಹಾತ್ಮರಾದ ಭಗವದ್ಭಕ್ತರ ಚರಿತ್ರವನ್ನು ಕೇಳ ಬೇಕೆಂಬ ಕುತೂಹಲವುಂಟಾಯಿತು. ಈ ಕುತೂಹಲದಿಂದ ತಿರುಗಿ ಮೈ ತ್ರೇಯನನ್ನು ಕುರಿತು"ಓ ಮುನೀಂದ್ರಾ! ಪ್ರಾಚೇತಸರ ಸತ್ರಯಾಗದಲ್ಲಿ ನಾರದನು ಧ್ರುವಮಹಿಮೆಯನ್ನು ಕೊಂಡಾಡಿದುದಾಗಿ ಹೇಳಿದೆಯಲ್ಲವೆ?" ಆ ಪ್ರಾಚೇತಸರೆಂಬವರಾರು? ಯಾರ ಮಕ್ಕಳು? ಯಾವ ಕುಲದಲ್ಲಿ ಪ್ರ ಖ್ಯಾತರಾದವರು? ಅವರು ಸತ್ರಯಾಗವನ್ನು ನಡೆಸಿದುದೆಲ್ಲಿ? ಆ ನಾರದನೋ ಮಹಾಭಾಗವತೋತ್ತಮನು! ಭಗವಂತನನ್ನು ಸಾಕ್ಷಾತ್ಕರಿಸಿದವನು! ಪಾಂ ಚರಾತ್ರವೇ ಮೊದಲಾದ ಆಗಮಗಳನ್ನುಪದೇಶಿಸಿ, ಶ್ರೀಹರಿಯ ಪೂಜಾವಿ ಧಾನವನ್ನು ಲೋಕದಲ್ಲಿ ಪ್ರಚಾರಗೊಳಿಸಿದವನು. ಹೀಗೆ ನಿರತಿಶಯವಾದ

ಭಗವದ್ಭಕ್ತಿಯುಳ್ಳ ಆ ನಾರದನು, ತನ್ನಿಂದುಪದೇಶಿಸಲ್ಪಟ್ಟ ಪೂಜಾವಿಧಾನಗಳಲ್ಲಿ, ಆ ಶ್ರೀಹರಿಯೇ ಸಕಲಯಜ್ಞಸ್ವರೂಪನೆಂದೂ,ಸರ್ವಯಜ್ಞಾರಾಧ್ಯನೆಂದೂ, ಇದರಿಂದ ಲೋಕದಲ್ಲಿ ಜನರು ತಮ್ಮತಮ್ಮ ವರ್ಣಾಶ್ರಮಧರ್ಮಗಳೆಲ್ಲವನ್ನೂ ಆ ಭಗವದಾರಾಧನರೂಪವಾಗಿಯೇ ನಡೆಸಬೇಕೆಂದೂ ಉಪದೇಶಿಸಿರುವನು. ಅಂತಹ ಮಹಾತ್ಮನಾದ ನಾರದನು ಪ್ರಾಚೇತಸಯಾಗದಲ್ಲಿ ವರ್ಣಿಸಿರುವ ಚರಿತ್ರಗಳೆಲ್ಲವೂ ಭಗವದ್ವಿಷಯವೆಂಬುದರಲ್ಲಿ ಸಂದೇಹವಿಲ್ಲ. ಅಂತಹ ಚರಿತ್ರಗಳೆಲ್ಲವನ್ನೂ ಆಮೂಲಾಗ್ರವಾಗಿ ಕೇಳಬೇಕೆಂದು ನನಗೆ ಬಹಳ ಕುತೂಹಲವಿರುವುದು. ಆದುದರಿಂದ ಅವೆಲ್ಲವನ್ನೂ ನನಗೆ ಸವಿಸ್ತರವಾಗಿ ತಿಳಿಸಬೇಕು” ಎಂದನು. ಅದಕ್ಕಾ ಮೈತ್ರೇಯನು, ವಿದುರನನ್ನು ಕುರಿತು “ಎಲೈ ಕುರುವಂಶೋತ್ತಮನೆ ಕೇಳು ! ಧ್ರುವನಿಗೆ ಉತ್ಕಲನೆಂಬ ಪುತ್ರನೊಬ್ಬನಿದ್ದನೆಂದು ಮೊದಲೇ ಹೇಳಿರುವೆನಷ್ಟೆ ? ಆ ಉತ್ಕಲನು ಬಾಲ್ಯದಿಂದಲೂ ಕೇವಲ ವಿರಕ್ತನಾದುದರಿಂದ, ರಾಜ್ಯವನ್ನನುಭವಿಸುವುದಕ್ಕೆ ಇಷ್ಟವಿಲ್ಲದವನಾಗಿ, ತಂದೆಯ ಸಿಂಹಾಸನವನ್ನೇರುವುದಕ್ಕೆ ಸಮ್ಮತಿಸದೆ ಹೋದನು. ಮತ್ತು ಅವನು ಬಾಲ್ಯದಿಂದಲೂ ಕೇವಲಶಾಂತಚಿತ್ತನಾಗಿ, ಮನಸ್ಸಿನಲ್ಲಿ ರಾಗದ್ವೇಷಾದಿಗಳೊಂದಕ್ಕೂ ಅವಕಾಶಕೊಡದೆ, ಆತ್ಮಪರಮಾತ್ಮತತ್ವವನ್ನು ತಿಳಿದು ಸಮಸ್ತಭೂತಗಳನ್ನೂ ಸಮದೃಷ್ಟಿಯಿಂದನೋಡುತಿದ್ದನು.ಮತ್ತು ಸಮಸ್ತಲೋಕವೂ ಪರಮಾತ್ಮನಿಗೆ ಶರೀರವೆಂಬುದನ್ನೂ,ಅವೆಲ್ಲಕ್ಕೂ ಪರಮಾತ್ಮನೇ ಧಾರಕನೆಂಬುದನ್ನೂ ತಿಳಿದು, ದೇಹಾತ್ಮಭ್ರಮವುಳ್ಳ ಕಾಮಿಗಳ ಸಹವಾಸವನ್ನು ನಿಶ್ಶೇಷವಾಗಿ ತೊರೆದಿದ್ದನು. ಆತ್ಮಸ್ವರೂಪವನ್ನು ಚೆನ್ನಾಗಿ ವಿಮರ್ಶಿಸಿ ತಿಳಿದು, ಆತ್ಮವೇ ಬ್ರಹ್ಮಶಬ್ದವಾಚ್ಯವೆಂದೂ,ಜೀವಾತ್ಮನು ತನ್ನ ಶುದ್ಧರೂಪದಲ್ಲಿ ದೇಹಾದಿಸಂಬಂಧವಿಲ್ಲದೆ, ಕೇವಲಜ್ಞಾನಾನಂದಸ್ವರೂಪನಾಗಿರುವನೆಂದೂ, ಸ್ವಸ್ವರೂಪಜ್ಞಾನವನ್ನೂ ತಿಳಿದವನಾಗಿದ್ದನು. ಈ ಜ್ಞಾನಯೋಗವೆಂಬ ಅಗ್ನಿಯಿಂದ,ತನ್ನ ಪುಣ್ಯಪಾಪರೂಪಕರ್ಮಗಳೆಂಬ ಕಲ್ಮಷಗಳೆಲ್ಲವನ್ನೂ ದಹಿಸಿ,ಶುದ್ಧಮನಸ್ಕನಾಗಿ,ಆತ್ಮವು ದೇಹಕ್ಕಿಂತಲೂ ವಿಲಕ್ಷಣವೆಂಬುದನ್ನೂ ತಿಳಿದು,ಆ ಆತ್ಮವೊಂದನ್ನೇ ಭಾವಿಸುತ್ತ

ಹೊರಗಿನ ದೇಹಾದಿಗಳನ್ನೂ, ಆ ದೇಹಕ್ಕೆ ಸಂಬಂಧಿಸಿದ ಹೆಂಡಿರು,ಮಕ್ಕಳು ಮುಂತಾದ ಪರಿವಾರಗಳನ್ನೂ, ಮನೆ ಮಠ, ಮುಂತಾದುವುಗಳನ್ನೂ ಕಣ್ಣೆತ್ತಿಯೂ ನೋಡದಿದ್ದನು. ಹೀಗೆ ಆತ್ಮಚಿಂತೆಯೊಂದರಲ್ಲಿಯೇ ನಿರತನಾಗಿ, ಹೊರಗಿನ ಇಂದ್ರಿಯ ವ್ಯಾಪಾರಗಳೇ ಇಲ್ಲದೆ, ನೋಡುವವರಿಗೆ ಕುರುಡನಂತೆಯೂ, ಕಿವುಡನಂತೆಯೂ, ಮೂಗನಂತೆಯೂ ಜಡನಂತೆಯೂ ಕಾಣುತಿದ್ದನು. ಬೂದಿಮುಚ್ಚಿದ ಕೆಂಡದಂತಿರುವ ಆತನ ಸ್ವರೂಪವನ್ನು ನೋಡಿ, ಬೀದಿಯ ಮಕ್ಕಳೆಲ್ಲರೂ ಅವನು ಮಹಾಜ್ಞಾನಿಯೆಂಬುದನ್ನು ತಿಳಿಯದೆ ಕೇವಲಜಡನೆಂದೇ ಭಾವಿಸುತಿದ್ದರು. ಅದರಂತೆಯೇ ರಾಜ್ಯದ ಮಂತ್ರಿಗಳೂ, ಕುಲವೃದ್ಧರೂ ಅವನನ್ನು ಹುಚ್ಚನೆಂದೂ, ಜಡನೆಂದೂ ತಿಳಿದು, ಧ್ರುವನಿಗೆ ಭ್ರಮಿಯೆಂಬವಳಲ್ಲಿ ಹುಟ್ಟಿದ ವತ್ಸರನೆಂಬ ಅವನ ತಮ್ಮನಿಗೆ ರಾಜ್ಯವನ್ನು ಕೊಟ್ಟು ಪಟ್ಟಾಭಿಷೇಕವನ್ನು ನಡೆಸಿದರು. ಆ ವತ್ಸರನಿಗೆ ಸರ್ವರ್ಥಿಯೆಂಬ ಪ್ರಿಯಪತ್ನಿಯಲ್ಲಿ ಪುಷ್ಪಾರ್ಣನೆಂದೂ, ತಿಗ್ಮಕೇತುವೆಂದೂ, ವಿಷನೆಂದೂ, ಊರ್ಜನೆಂದೂ, ವಸುವೆಂದೂ, ಜಯನೆಂದೂ ಆರುಮಂದಿ ಮಕ್ಕಳು ಹುಟ್ಟಿದರು. ಅವರಲ್ಲಿ ಜ್ಯೇಷ್ಠನಾದ ಪುಷ್ಪಾರ್ಣನಿಗೆ ಪ್ರಭೆಯೆಂದೂ, ದೋಷೆಯೆಂದೂ ಇಬ್ಬರು ಹೆಂಡಿರಿದ್ದರು. ಅವರಲ್ಲಿ ಪ್ರಭೆಯೆಂಬವಳಿಗೆ ಪ್ರಾತಃ, ಮಧ್ಯಂದಿನ, ಸಾಯಂಕಾಲಗಳೆಂಬ ಹೆಸರಿನಿಂದ ಕರೆಯಲ್ಪಡುವ ಮೂವರು ಮಕ್ಕಳು ಹುಟ್ಟಿದರು. ದೋಷೆಯೆಂಬವಳಲ್ಲಿ ಪ್ರದೋಷನೆಂದೂ, ನೀಶೀಥನೆಂದೂ, ವ್ಯುಷ್ಟಿಯೆಂದೂ ಮೂವರು ಮಕ್ಕಳಾದರು. ಅವರಲ್ಲಿ ವ್ಯುಷ್ಟಿಯೆಂಬವನು, ಪುಷ್ಕರಿಣಿಯೆಂಬ ತನ್ನ ಭಾರ್ಯೆಯಲ್ಲಿ ಸರ್ವತೇಜಸ್ಸೆಂಬೊಬ್ಬ ಮಗನನ್ನು ಪಡೆದನು. ಆ ಸರ್ವತೇಜಸ್ಸು ಆಕೂತಿಯೆಂಬ ಪತ್ನಿಯಲ್ಲಿ ಚಕ್ಷುಸ್ಸೆಂಬ ಹೆಸರುಳ್ಳ ಮನುವನ್ನು ಪುತ್ರನನ್ನಾಗಿ ಪಡೆದನು. ಆ ಮನುವಿಗೆ ನಡ್ವಲೆಯೆಂಬ ಭಾರ್ಯೆಯಲ್ಲಿ ಅತ್ಯಂತ ಶುದ್ಧಾತ್ಮರಾದ ಹನ್ನೆರಡುಮಂದಿ ಮಕ್ಕಳುಂಟಾದರು. ಈ ಹನ್ನೆರಡುಮಂದಿ ಮಕ್ಕಳಿಗೂ ಕ್ರಮವಾಗಿ, ಪ್ರರು, ಕುತ್ಸ, ತ್ರಿತ, ದ್ಯುಮ್ನ, ಸತ್ಯವಂತ, ಋತ, ವ್ರತ, ಅಗ್ನಿಷ್ಟೋಮ, ಅತಿರಾತ್ರ, ಪ್ರದ್ಯುಮ್ನ, ಶಿಬಿ, ಉಲ್ಮುಕರೆಂದು ಹೆಸರು. ಇವರಲ್ಲಿ ಉಲ್ಮುಕನೆಂಬವನು ತನ್ನಪತ್ನಿಯಾದ ಪುಷ್ಕರಿಣಿ

ಯಲ್ಲಿ ಅಂಗನೆಂದೂ, ಸುಮನಸನೆಂದೂ, ಸ್ವಾತಿಯೆಂದೂ, ಕ್ರತುವೆಂದೂ, ಅಂಗಿರಸ್ಸೆಂದೂ, ಗಯನೆಂದೂ ಪ್ರಸಿದ್ಧರಾದ ಆರುಮಂದಿ ಮಕ್ಕಳನ್ನು ಪಡೆದನು. ಇವರಲ್ಲಿ ಜ್ಯೇಷ್ಠನಾದ ಅಂಗನೆಂಬವನು, ಸುನೀಥೆಯೆಂಬ ಪತ್ನಿಯಲ್ಲಿ, ವೇನನೆಂಬ ಹೆಸರುಳ್ಳ ದುರಾತ್ಮನಾದ ಒಬ್ಬಪುತ್ರನನ್ನು ಪಡೆದನು. ಈ ಪುತ್ರನ ದುಸ್ಸ್ವಭಾವವನ್ನು ನೋಡಿ ಇವನ ತಂದೆಯು, ಬಹಳ ದುಃಖಾಕ್ರಾಂತನಾಗಿ, ಅವನ ಕಣ್ಣೆದಿರಿಗೆ ನಿಲ್ಲಲಾರದೆ ಸ್ವಲ್ಪ ಕಾಲದೊಳಗಾಗಿಯೇ ಪಟ್ಟಣವನ್ನು ಬಿಟ್ಟು ಹೊರಟುಹೋದನು. ಇತ್ತಲಾಗಿ ಮೇಲೆಮೇಲೆ ಅಕೃತ್ಯಗಳನ್ನು ನಡೆಸುತ್ತಿರುವ ಈ ವೇನನ ಸ್ವಭಾವವನ್ನು ನೋಡಿ, ಮಹರ್ಷಿಗಳೆಲ್ಲರೂ ಅವನನ್ನು ಅನೇಕವಿಧವಾಗಿ ಕ್ರೂರವಾಕ್ಯದಿಂದ ಶಪಿಸುತಿದ್ದರು. ಈ ಶಾಪದಿಂದ ಅವನು ಅಲ್ಪಾಯುಸ್ಸಿನಲ್ಲಿಯೇ ಮೃತನಾದನು. ರಾಜ್ಯವು ಅನಾಯಕವಾದುದರಿಂದ ಕಳ್ಳರು ತಲೆಯೆತ್ತಿ, ಪ್ರಜೆಗಳನ್ನು ಬಾಧಿಸಿ, ಅವರ ವಸ್ತುಗಳೆಲ್ಲವನ್ನೂ ಅಪಹರಿಸುತಿದ್ದರು. ಆಗ ಮಹರ್ಷಿಗಳೆಲ್ಲರೂ ಸೇರಿ, ವೇನನ ಮೃತದೇಹವನ್ನು ತರಿಸಿ, ಅದರ ಬಲಗೈಯನ್ನು ಮಥಿಸಿದರು. ಆ ಹಸ್ತದಲ್ಲಿ ಭಗವಂತನ ಅಂಶಾವತಾರದಿಂದ ಪೃಥುವೆಂಬ ಕುಮಾರನು ಹುಟ್ಟಿದನು" ಎಂದನು. ಈ ನಡುವೆ ವಿದುರನು ಮೈತ್ರೇಯನನ್ನು ಕುರಿತು, „ಓ, ಮಹಾತ್ಮಾ! ಏನಿದು? ಅಂಗರಾಜನಾದರೋ ಬಹಳ ಸಾಧುಸ್ವಭಾವವುಳ್ಳವನು. ಸಮಸ್ತ ಸದ್ಗುಣಗಳಿಗೂ ನಿಧಿಯಂತಿದ್ದನು. ಬ್ರಾಹ್ಮಣಭಕ್ತಿಯುಳ್ಳವನು. ಇಂತಹ ಮಹಾತ್ಮನಾದ ರಾಜನ ಗರ್ಭದಲ್ಲಿ, ಕೇವಲಕ್ರೂರಸ್ವಭಾವವುಳ್ಳ ಆ ದುಷ್ಪುತ್ರನು ಹೇಗೆ ಹುಟ್ಟಿದನು? ತಂದೆಯು ಕೆಲವುದಿನಗಳೊಳಗಾಗಿಯೇ ಈ ಪುತ್ರನನ್ನು ತೊರೆದು, ರಾಜ್ಯವನ್ನೂ ಬಿಟ್ಟು, ಕಾಡಿಗೆ ಹೋಗಬೇಕೆಂದರೆ, ಆ ಬಾಲಕನ ದೌಷ್ಟ್ಯವು ಅತಿದುಸ್ಸಹವಾಗಿರಬೇಕಲ್ಲವೆ? ವೇನನು ರಾಜ್ಯಕ್ಕೆ ಬಂದಮೇಲೆ, ಅವನಲ್ಲಿ ಯಾವ ತಪ್ಪನ್ನು ನೋಡಿ ಧರ್ಮವಿಶಾರದರಾದ ಋಷಿಗಳೆಲ್ಲರೂ ಅವನನ್ನು ಶಪಿಸಿದರು? ದಿಕ್ಪಾಲಕರ ಅಂಶದಿಂದ ಹುಟ್ಟಿದವನೇ ಅರಸನಾಗಿ ರಾಜ್ಯವನ್ನು ಪರಿಪಾಲಿಸತಕ್ಕವನೆಂದು ಕೇಳಿರುವೆನು. ಹಾಗೆ ರಾಜ್ಯಾಧಿಕಾರವನ್ನು ವಹಿಸಿದವನು ಪಾಪಾತ್ಮ

ನಾಗಿದ್ದರೂ, ದುರ್ಮಾರ್ಗದಲ್ಲಿ ಪ್ರವರ್ತಿಸಿದರೂ, ಅವನನ್ನು ಕೊಲ್ಲಬಾರ ದೆಂದೂ ಹೇಳುವರು. ಹೀಗಿರುವಾಗ ಧರ್ಮಜ್ಞರಾದ ಋಷಿಗಳು ಅವನನ್ನು ಶಾಪದಿಂದ ಕೊಂದುದೇಕೆ? ನೀನು ತತ್ವಜ್ಞನಾದುದರಿಂದ ಆ ವೇನನ ಚರಿತ್ರೆಗಳೆಲ್ಲವನ್ನೂ ವಿಸ್ತರಿಸಿ ತಿಳಿಸಬೇಕು" ಎಂದನು. ಅದಕ್ಕಾ ಮೈತ್ರೇ ಯನು. ವಿದುರನನ್ನು ಕುರಿತು "ವಿದುರಾ ಕೇಳು! ಅಂಗರಾಜನು ಒಮ್ಮೆ ಅಶ್ವಮೇಧಯಾಗವನ್ನು ನಡೆಸಲಾರಂಭಿಸಿದನು. ಆ ಯಾಗಕಾಲದಲ್ಲಿ ವೇದ ಪಾಠಕರಾದ ಋತ್ವಿಕ್ಕುಗಳು, ಮಂತ್ರೋಚ್ಚಾರಣಪೂರ್ವಕವಾಗಿ ಕರೆಯು ತಿದ್ದರೂ ದೇವತೆಗಳು ತಮ್ಮ ಹವಿರ್ಭಾಗಗಳನ್ನು ಸ್ವೀಕರಿಸುವುದಕ್ಕೆ ಬಾರದೆ ಹೋದರು. ಅದನ್ನು ನೋಡಿ ಋತ್ವಿಕ್ಕುಗಳೆಲ್ಲರೂ ಆಶ್ಚರ್ಯಭರಿತರಾಗಿ, ಯಜ್ಞದೀಕ್ಷಿತನಾದ ರಾಜನನ್ನು ಕುರಿತು "ಓ ರಾಜೇಂದ್ರಾ! ನೀನು ದೇವ ತೆಗಳಿಗಾಗಿ ಕೊಡುತ್ತಿರುವ ಹವಿರ್ಭಾಗಗಳನ್ನು, ಆಯಾ ದೇವತೆಗಳು ಗ್ರಹಿಸುವಹಾಗೆ ಕಾಣಲಿಲ್ಲ. ಈ ನಿನ್ನ ಯಾಗಕ್ಕಾಗಿ ಎಷ್ಟೋ ಶ್ರದ್ಧೆ ಯಿಂದ ನಾವು ನಿರ್ದುಷ್ಟವಾದ ಹವಿಸ್ಸುಗಳನ್ನು ಸಂಗ್ರಹಿಸಿರುವೆವು. ವೇದಮಂತ್ರಗಳನ್ನುಚ್ಚರಿಸುವುದರಲ್ಲಿ ಬಹಳ ಬಳಿಕೆಯುಳ್ಳ ಅನೇಕ ಋತ್ವಿ ಕ್ಕುಗಳು ಸ್ವರಗಳಲ್ಲಿಯಾಗಲಿ, ವರ್ಣಗಳಲ್ಲಿಯಾಗಲಿ, ಲೋಪವಿಲ್ಲದಂತೆ ಶುದ್ಧವಾದ ಮಂತ್ರಗಳನ್ನುಚ್ಚರಿಸುತ್ತಿರುವರು- ಇಷ್ಟಾದರೂ ದೇವ ತೆಗಳು ಈ ನಮ್ಮ ಯಜ್ಞದಲ್ಲಿ ತಮ್ಮ ಹವಿರ್ಭಾಗವನ್ನು ಕೈಕೊಳ್ಳದೆ ನಿರಾ ಕರಿಸುವುದಕ್ಕೆ ಕಾರಣವೇನೋ ತಿಳಿಯಲಿಲ್ಲ! !ನಾವು ಇದುವರೆಗೆ ಮಾಡಿ ರುವ ಕಾರ್ಯದಲ್ಲಿ ಅಣುಮಾತ್ರವಾದರೂ ಲೋಪವಿರುವಂತೆ ಕಾಣಲಿಲ್ಲ! ಇಂತಹ ಯಾಗಾದಿಕರ್ಮಗಳಲ್ಲಿ ಗುಣದೋಷಗಳನ್ನು ಪರಿಶೀಲಿಸಿ ನೋಡ ತಕ್ಕ ಸ್ವಭಾವವುಳ್ಳ ದೇವತೆಗಳು, ನಮ್ಮಲ್ಲಿ ಯಾವ ತಪ್ಪನ್ನು ಕಂಡು ತಮ್ಮ ಹವಿರ್ಭಾಗಗಳನ್ನು ಕೈಕೊಳ್ಳದಿರುವರೋ ಕಾಣೆವು. ಯಾವುದೋ ಭಾಗದಲ್ಲಿ ಲೋಪವು ನಡೆದಿರಬೇಕು" ಎಂದರು. ಇದನ್ನು ಕೇಳಿ ಯಜ್ಞ ದೀಕ್ಷಿತನಾದ ಅಂಗರಾಜನು, ಮನಸ್ಸಿನಲ್ಲಿ ಬಹಳವಾಗಿ ದುಃಖಿಸುತ್ತ, ಯಜ್ಞವು ಪೂರ್ಣವಾಗುವವರೆಗೆ ತಾನು ಮೌನವ್ರತದಲ್ಲಿರಬೇಕಾದರೂ, ಸಭಾಸದರ ಅನುಮತಿಯಿಂದ ಮೌನವನ್ನು ಬಿಟ್ಟು, ಆ ಸಭೆಯಲ್ಲಿದ್ದವ

ರನ್ನು ಕುರಿತು ಹೀಗೆಂದು ಹೇಳುವನು- "ಎಲೈ ಸಭಾಸದರೆ? ಏನಿದಾಶ್ಚರ್ಯವು? ಈ ಯಜ್ಞದಲ್ಲಿ ನಾವು ಮಂತ್ರೋಚ್ಚಾರಣಪೂರ್ವಕವಾಗಿ ಕರೆಯುತಿದ್ದರೂ ದೇವತೆಗಳು ಯಾರೂ ತಮ್ಮ ಸೋಮಪಾತ್ರಗಳನ್ನು ಗ್ರಹಿಸುವುದಕ್ಕಾಗಿ ಬರಲಿಲ್ಲ. ಎಲೈ ಸದಸ್ಯರೆ? ನಾನು ದೇವತೆಗಳ ವಿಷಯದಲ್ಲಿ ಯಾವ ಅಪರಾಧವನ್ನು ಮಾಡಿರುವೆನು? ನನ್ನಲ್ಲಿ ಲೋಪವೇನಾದರೂ ಇದ್ದರೆ ಕೃಪೆಯಿಟ್ಟು ಅದನ್ನು ನನಗೆ ತಿಳಿಸಬೇಕು" ಎಂದನು. ಅಧಕ್ಕಾ ಸಭಾಸದರು "ರಾಜೇಂದ್ರಾ! ನೀನು ಈ ಜನ್ಮದಲ್ಲಿ ಲೇಶಮಾತ್ರವಾದರೂ ಪಾಪಕಾರ್ಯವನ್ನು ನಡೆಸಿದವನಲ್ಲ. ನೀನು ಪೂರ್ವಜನ್ಮದಲ್ಲಿ ಮಾಡಿದ ಪಾಪಶೇಷವೇ ಇದಕ್ಕೆ ಕಾರಣವು. ಅದೇನೆಂದು ಕೇಳುವೆಯಾ? ನಿನ್ನ ಪೂರ್ವಜನ್ಮದ ಪಾಪಶೇಷದಿಂದ ನಿನಗೆ ಈ ಜನ್ಮದಲ್ಲಿ ಪುತ್ರಸಂತಾನವಿಲ್ಲದಂತಾಯಿತು. ನೀನು ಸರ್ವವಿಧದಲ್ಲಿಯೂ ಗುಣಾಢ್ಯನಾಗಿದ್ದರೂ, ಸಂತತಿಯಿಲ್ಲದವನಾದುದರಿಂದ, ದೇವತೆಗಳು ನಿನ್ನ ಯಜ್ಞದಲ್ಲಿ ಹವಿರ್ಭಾಗಗಳನ್ನು ಸ್ವೀಕರಿಸದಿರುವರು- ಆದುದರಿಂದ, ಈಗ ನೀನು ಮೊದಲು,ಪುತ್ರಕಾಮೇಷ್ಟಿಯನ್ನು ಮಾಡಿ ಪುತ್ರಸಂತಾನವನ್ನು ಪಡೆಯುವುದಕ್ಕೆ ಯತ್ನಿಸು. ಆ ಯಾಗದಿಂದ ನೀನು ಭಗವಂತನನ್ನಾರಾಧಿಸಿದಪಕ್ಷದಲ್ಲಿ, ಯಜ್ಞಫಲಪ್ರದನಾದ ಭಗವಂತನು, ನಿನಗೆ ಸಂತಾನವನ್ನು ಕೊಡುವುದರಲ್ಲಿ ಸಂದೇಹವಿಲ್ಲ. ನೀನು ಪುತ್ರಾರ್ಥಿಯಾಗಿ ದೇವದೇವೋತ್ತಮನಾಗಿಯೂ,ಸಮಸ್ತಯಜ್ಞಗಳಿಂದಲೂ ಆರಾಧಿಸಲ್ಪಡತಕ್ಕವನಾಗಿಯೂ ಇರುವ ಆ ಶ್ರೀಹರಿಯನ್ನೇ ಮರೆಹೊಕ್ಕು, ಅವನನ್ನಾರಾಧಿಸುವುದಕ್ಕೆ ತೊಡಗಿದಪಕ್ಷದಲ್ಲಿ, ಅವನಹಿಂದೆ ಇತರ ದೇವತೆಗಳೂ ತಾವಾಗಿಯೇ ಬಂದು ನಿನ್ನ ಯಜ್ಞಭಾಗಗಳನ್ನು ಸ್ವೀಕರಿಸುವರು. "ಮೋಕ್ಷಪ್ರದನಾದ ಭಗವಂತನಲ್ಲಿ ನಾವು ಈ ಅಲ್ಪಫಲವನ್ನು ಯಾಚಿಸುವುದು ಹೇಗೆ?" ಎಂದು ನೀನು ಶಂಕಿಸಬೇಕಾದುದಿಲ್ಲ. ದಯಾಸಮುದ್ರನಾದ ಆ ಭಗವಂತನು ಯಾರು ಯಾರು ಯಾವಯಾವ ಫಲವನ್ನು ಕೋರಿದರೂ ಅದನ್ನು ಕೊಡುವುದಕ್ಕೆ ಸಿದ್ಧನಾಗಿರುವನು. ಜನರು ಆ ಭಗವಂತನನ್ನು ಯಾವಯಾವ ರೀತಿಯಿಂದ ಆರಾಧಿಸುವರೋ, ಅದಕ್ಕೆ ತಕ್ಕಂತೆಯೇ ಅವರವರಿಗೆ ಫಲಪ್ರಾಪ್ತಿಯುಂ

ಟಾಗುವುದರಲ್ಲಿ ಸಂದೇಹವಿಲ್ಲ” ಎಂದರು. ವಿದುರಾ ! ಸಭಾಸದರು ಹೇಳಿದ ಈ ಮಾತನ್ನು ಕೇಳಿ, ಋತ್ವಿಕ್ಕುಗಳೆಲ್ಲರೂ ಪುತ್ರಕಾಮೇಷ್ಟಿಯನ್ನು ನಡೆಸುವುದಕ್ಕೆ ಬೇಕಾದ ಸನ್ನಾಹಗಳಿಂದ ಶ್ರೀವಿಷ್ಣುವನ್ನುದ್ದೇಶಿಸಿ ಪುರೋಡಾಶವೆಂಬ ಹವಿಸ್ಸನ್ನು ಕಲ್ಪಿಸಿ,ಅಗ್ನಿಯಲ್ಲಿ ಹೋಮಮಾಡಿದರು.ಒಡನೆಯೇ ಕಂಠದಲ್ಲಿ ಸುವರ್ಣಮಾಲಿಕೆಯನ್ನು ಧರಿಸಿ,ಧೌತವಸ್ತ್ರವನ್ನುಟ್ಟ ದಿವ್ಯಪುರುಷನೊಬ್ಬನು, ಪಾಯಸಾನ್ನದಿಂದ ತುಂಬಿದ ಒಂದು ಸುವರ್ಣಕಲಶವನ್ನು ಕೈಯಲ್ಲಿ ಹಿಡಿದು ಆ ಅಗ್ನಿಕುಂಡದಿಂದ ಮೇಲೆದ್ದು ಬಂದನು.ಇದನ್ನು ನೋಡಿ ಅಂಗರಾಜನು,ಅಲ್ಲಿ ನೆರೆದಿದ್ದ ಬ್ರಾಹ್ಮಣೋತ್ತಮರ ಆಜ್ಞಾನುಸಾರವಾಗಿ ಮುಂದೆ ಬಂದು, ಬೊಗಸೆಯನ್ನು ನೀಡಿ, ಆ ಪಾಯಸವನ್ನು ಕೈಗೆ ತೆಗೆದುಕೊಂಡನು. ಮೊದಲು ತಾನು ಅದರ ಸುಗಂಧವನ್ನಾಘ್ರಾಣಿಸಿ, ಸಂತೋಷಪೂರ್ವಕವಾಗಿ ಅದನ್ನು ತನ್ನ ಪತ್ನಿಯ ಕೈಗೆ ಕೊಟ್ಟನು. ರಾಜಪತ್ನಿಯಾದ ಸುನೀಥೆಯು, ಸಂತಾನಫಲವನ್ನು ಕೊಡತಕ್ಕ ಆ ಪಾಯಸವನ್ನು ಭಕ್ತಿಯಿಂದ ಭುಜಿಸಿದಳು. ಸ್ವಲ್ಪದಿನಗಳಲ್ಲಿಯೇ ಅವಳು ಪತಿಯ ಅನುಗ್ರಹದಿಂದ ಗರ್ಭವತಿಯಾಗಿ, ಪ್ರಸವಕಾಲವು ಬಂದೊಡನೆ ಒಬ್ಬ ಕುಮಾರನನ್ನು ಪಡೆದಳು. ಈ ಬಾಲಕನು ಬಾಲ್ಯದಿಂದಲೂ ತನ್ನ (ಮಾತಾಮಹನ) ತಾಯಿಯತಂದೆಯಾದ ಮೃತ್ಯುವೆಂಬವನ ಮನೆಯಲ್ಲಿಯೇ ಇದ್ದು ಅವನಿಂದ ಪೋಷಿಸಲ್ಪಡುತಿದ್ದನು. ಅಧರ್ಮವಂಶದಲ್ಲಿ ಹುಟ್ಟಿದ ಈ ಮೃತ್ಯುವಿನ ಸಹವಾಸದಲ್ಲಿದ್ದುದರಿಂದ,ಈ ಬಾಲಕನಿಗೂ ಕ್ರಮಕ್ರಮವಾಗಿ ಅಧರ್ಮದಲ್ಲಿಯೇ ಬುದ್ಧಿಯು ಪ್ರವರ್ತಿಸುತಿತ್ತು. ಹೀಗೆ ಸಹವಾಸದೋಷದಿಂದ ಪಾಪಕಾರ್ಯಗಳಲ್ಲಿಯೇ ಪ್ರವರ್ತಿಸುತಿದ್ದ ಈ ಬಾಲಕನು, ಯಾವಾಗಲೂ ಧನುರ್ಬಾಣಗಳನ್ನು ಹಿಡಿದು, ಬೇಡನಂತೆ ಕಾಡಿನಲ್ಲಿಯೇ ತಿರುಗುತ್ತ, ಸಿಕ್ಕಿದ ಪ್ರಾಣಿಗಳನ್ನು ಕೊಲ್ಲುತಿದ್ದನು. ಮನಸ್ಸಿನಲ್ಲಿ ಸ್ವಲ್ಪಮಾತ್ರವೂ ಮರುಕವಿಲ್ಲದೆ, ನಿರಪರಾಧಿಗಳಾದ ಜಂತುಗಳನ್ನು ಕೊಲ್ಲುತ್ತಿರುವ ಇವನ ಕ್ರೂರಸ್ವಭಾವವನ್ನು ನೋಡಿ, ಅವನ ಹೆಸರನ್ನು ಕೇಳಿದಮಾತ್ರಕ್ಕೆ ಜನರು ನಡುಗುತಿದ್ದರು. ಎಲ್ಲಿಯಾದರೂ ದೂರದಲ್ಲಿ ಅವನ ಮುಖವನ್ನು ಕಂಡೊಡನೆ “ಅಯ್ಯೋ ಇನ್ನೇನು ಗತಿ! ವೇನನು ಬರುತ್ತಿರುವನಲ್ಲಾ !

ಎಂದು ಕೂಗುತ್ತ ಅಲ್ಲಿ ನಿಲ್ಲದೆ ಓಡುತಿದ್ದರು. ಪರಮದುರಾತ್ಮನಾದ ಆ ವೇನನು,ಅಲ್ಲಲ್ಲಿ ಬೀದಿಗಳಲ್ಲಿ ಆಡುತ್ತಿರುವ ಬಾಲಕರನ್ನು ಕಂಡೊಡನೆ, ಅವರನ್ನು ಹಿಡಿದು ಯಜ್ಞಪಶುಗಳನ್ನು ಕೊಲ್ಲುವಂತೆ ಕೊಲ್ಲುತಿದ್ದನು. ಇವನ ತಂದೆಯಾದ ಅಂಗರಾಜನು ಅವನ ಕ್ರೂರಕೃತ್ಯಗಳನ್ನು ತಪ್ಪಿಸಬೇಕೆಂದು ಎಷ್ಟೆಷ್ಟೋವಿಧದಿಂದ ನಯಭಯಗಳನ್ನು ತೋರಿಸುತಿದ್ದರೂ, ಅವನ ಕೆಟ್ಟ ಚಾಳಿಯನ್ನು ಬಿಡಿಸುವುದಕ್ಕೆ ಸಾಧ್ಯವಿಲ್ಲದೆ ಹೋಯಿತು. ಇದಕ್ಕಾಗಿ ರಾಜನು ಅನವರತವೂ ಮನಸ್ಸಿನಲ್ಲಿ ಸಂಕಟಪಟ್ಟು, ಕೊರಗುತ್ತ "ಗೃಹಸ್ಥರಲ್ಲಿ ಮಕ್ಕಳಿಲ್ಲದವರೇ ಧನ್ಯರು ! ಒಂದುವೇಳೆ ಮಕ್ಕಳನ್ನು ಪಡೆದರೂ, ದುಷ್ಪುತ್ರರಿಂದುಂಟಾಗುವ ದುಃಖಕ್ಕೊಳಗಾಗದೆ, ಅವರ ಅಕೃತ್ಯಗಳನ್ನು ಕಣ್ಣಿಂದ ನೋಡದವವರೇ ಭಾಗ್ಯಶಾಲಿಗಳು! ಇಂತವರೇ ಜನ್ಮಾಂತರದಲ್ಲಿ ಭಗವಂತನನ್ನಾರಾಧಿಸಿ, ಆತನ ಅನುಗ್ರಹಕ್ಕೆ ಪಾತ್ರರಾದವರೆಂದು ಹೇಳಬಹುದು. ಪಡೆದರೆ ಸತ್ಪುತ್ರರನ್ನು ಪಡೆಯಬೇಕು. ಇಲ್ಲದಿದ್ದರೆ ಮಕ್ಕಳಿಲ್ಲದಿರುವುದೇ ಉತ್ತಮವು. ದುಷ್ಪುತ್ರರಿಂದುಂಟಾಗುವ ಅನರ್ಥಗಳು ಅಷ್ಟಿಷ್ಟಲ್ಲ. ಇಂತಹ ಕುಪುತ್ರರಿಂದ ವಂಶದ ಕೀರ್ತಿಯೇ ಕೆಟ್ಟುಹೋಗುವುದು. ಅಧರ್ಮವು ಹೆಚ್ಚುವುದು. ಎಲ್ಲರಲ್ಲಿಯೂ ವಿರೋಧವು ಬೆಳೆಯುವುದು. ಕೊನೆಮೊದಲಿಲ್ಲದ ದುಃಖಕ್ಕೆ ಗುರಿಯಾಗಬೇಕಾಗುವುದು. ಇಂತಹ ದುಸ್ಸ್ವಭಾವವುಳ್ಳ ಮಕ್ಕಳು ಹೊಟ್ಟೆಯಲ್ಲಿ ಹುಟ್ಟುವುದರಿಂದ ಹೆಸರಿಗೆಮಾತ್ರ ಪುತ್ರರೆಂದು ಹೇಳಿಸಿಕೊಳ್ಳುವರೇ ಹೊರತು, ಅವರನ್ನು ಕೊರಲಿಗೆ ಕಟ್ಟಿದ ಸಂಸಾರಪಾಶವೆಂದೇ ಎಣಿಸಬೇಕು. ಪಂಡಿತರಾದವರು ಅಂತವರನನ್ನು ಪುತ್ರರೆಂದೇ ಕರೆಯಲಾರರು. ಸೂಕ್ಷ್ಮದೃಷ್ಟಿಯಿಂದ ವಿಚಾರಿಸಿ ನೋಡಿದರೆ, ಒಂದುವಿಧದಲ್ಲಿ ಸತ್ಪುತ್ರರನ್ನು ಪಡೆಯುವುದಕ್ಕಿಂತಲೂ, ಇಂತಹ ದುಷ್ಪುತ್ರರನ್ನು ಪಡೆಯುವುದರಿಂದಲೇ ಗುಣವುಂಟೆಂದು ಹೇಳಬಹುದು. ಏಕೆಂದರೆ, ಮನುಷ್ಯನಿಗೆ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ಗುಣಾಢ್ಯರಾಗಿ,ತಂದೆತಾಯಿಗಳಿಗೆ ತೃಪ್ತಿಕರವಾದ ನಡತೆಯುಳ್ಳವರಾಗಿದ್ದಪಕ್ಷದಲ್ಲಿ, ಹೆತ್ತವರಿಗೆ ಅವರಲ್ಲಿ ಮೋಹವು ಹೆಚ್ಚುತ್ತಬರುವುದು. ಇದರಿಂದ ಅವರು ಅನವರತವೂ ಅವನ ಕ್ಷೇಮಚಿಂತೆಯಿಂದ ಕಳ

ವಳಿಸುವರು. ಅವನಿಗೆ ಆಸ್ತಿಯನ್ನು ಸೇರಿಸಿಡಬೇಕೆಂದು ಕಷ್ಟಪಡುವರು. ಅವನಿಗೆ ಹೆಣ್ಣು, ಹೊನ್ನು, ಮಣ್ಣು (ಹೊಲಗದ್ದೆಗಳು) ಮುಂತಾದ ಸೌಕರ್ಯಗಳನ್ನು ಕಲ್ಪಿಸಿಡಬೇಕೆಂಬುದಕ್ಕಾಗಿ ಎಷ್ಟೋಶ್ರಮಪಡುವರು.ಅವನಿಗೆ ಕಣ್ಣು, ಮೂಗು, ನೋವಾದರೆ ಮರಣಭಯದಿಂದ ತತ್ತಳಿಸುವರು. ಹೀಗೆಯೇ ಇನ್ನೂ ಅನೇಕವಿಧದಲ್ಲಿ ಕಷ್ಟಕ್ಕೂ, ಚಿಂತೆಗೂ ಗುರಿಯಾಗುವರು. ದುಷ್ಪುತ್ರನು ಹುಟ್ಟಿದರೆ ಈ ವಿಧವಾದ ಕಷ್ಟವೊಂದೂ ಇರುವುದಿಲ್ಲ. ಅಂತಹ ದುಷ್ಪುತ್ರನನ್ನು ಪಡೆದವರಿಗೆ, ಕ್ರಮಕ್ರಮವಾಗಿ ಸಂಸಾರದಲ್ಲಿ ಜಿಹಾಸೆಯು ಹುಟ್ಟುತ್ತಬರುವುದು. ಆಸ್ತಿಪಾಸ್ತಿಗಳಾಗಲಿ, ಮನೆಮಂದಿ ಮಕ್ಕಳಾಗಲಿ ಯಾವುದೂ ಬೇಡವೆಂದೇ ತೋರುವುದು. ಆದುದರಿಂದ ಸಂಸಾರದುಃಖವನ್ನು ಮೇಲೆಮೇಲೆ ಹೆಚ್ಚಿಸತಕ್ಕ ಸುಪುತ್ರನಿಗಿಂತಲೂ ಸಂಸಾರದಲ್ಲಿ ಜಿಹಾಸೆಯನ್ನು ಹುಟ್ಟಿಸಿ,ಮುಕ್ತಿಮಾರ್ಗವನ್ನು ಹುಡುಕುವಹಾಗೆ ಮಾಡತಕ್ಕ ದುಷ್ಪುತ್ರನೇ ಮೇಲೆಂದು ಹೇಳಬಹುದು.” ಎಂದು ನಿಶ್ಚಯಿಸಿಕೊಂಡನು. ಈ ನಿಶ್ಚಯದಿಂದ ಅಂಗರಾಜನು ಅದೇದಿನದ ಅರ್ಧರಾತ್ರಿಯಲ್ಲಿ ಯಾರಿಗೂ ತಿಳಿಯದಂತೆ ಹಾಸಿಗೆಯಿಂದೆದ್ದು, ಪಕ್ಕದಲ್ಲಿ ಮಲಗಿದ್ದ ತನ್ನ ಭಾರ್ಯೆಗೂ ತಿಳಿಸದೆ, ಸಕಲೈಶ್ವರ್ಯಸಮೃದ್ಧವಾದ ತನ್ನ ಅರಮನೆಯನ್ನು ಬಿಟ್ಟು ಹೊರಟು ಅಡವಿಗೆ ಹೋದನು. ಮರುದಿನದ ಬೆಳಿಗ್ಗೆ ಮಂತ್ರಿ ಮೊದಲಾದ ಪ್ರಜೆಗಳೆಲ್ಲರೂ, ಅರಮನೆಯಲ್ಲಿ ರಾಜನಿಲ್ಲದುದನ್ನು ನೋಡಿ, ಅವನು ವಿರಕ್ತಿಯಿಂದ ತಪೋವನಕ್ಕೆ ಹೊರಟುಹೋದುದನ್ನೂ ತಿಳಿದು ಬಹಳವಾಗಿ ದುಃಖಿಸುತ್ತ, “ಅಯ್ಯೋ! ಇನ್ನು ನಮ್ಮನ್ನು ಕಾಪಾಡುವರಾರು? ಇನ್ನು ರಾಜ್ಯಕ್ಕೆ ಕ್ಷೇಮವೆಲ್ಲಿ” ಎಂದು ಭಯಪಟ್ಟು, ಭೂಮಿಯ ನಾನಾಕಡೆಗಳಿಗೂ ದೂತರನ್ನು ಕಳುಹಿಸಿ, ಅವನನ್ನು ಹುಡುಕುತಿದ್ದರು. ತಮ್ಮ ಹೃದಯದಲ್ಲಿಯೇ ಮರೆಗೊಂಡಿರತಕ್ಕ ಪರಮಪುರುಷನನ್ನು, ಪ್ರಯತ್ನಪಟ್ಟು ಹುಡುಕಿದರೂ ಕಾಣಲಾರದ ಕುತ್ಸಿತಯೋಗಿಗಳಂತೆ,ಆ ಪ್ರಜೆಗಳೂಕೂಡ ಎಷ್ಟೆಷ್ಟು ಹುಡುಕಿದರೂ ಆರಾಜನನ್ನು ಕಾಣಲಾರದೆ ಹೋದರು. ಅಲ್ಲಲ್ಲಿ ಹುಡುಕುವುದಕ್ಕಾಗಿ ಹೋದ ಮಂತ್ರಿ ಪುರೋಹಿತಾದಿಗಳೆಲ್ಲರೂ ವಿಫಲಪ್ರಯತ್ನರಾಗಿ,ದುಃಖದಿಂದ ಹಿಂತಿರುಗಿಪಟ್ಟಣಕ್ಕೆ

ಬಂದರು. ಇತ್ತಲಾಗಿ ರಾಜವಿಯೋಗದಿಂದ ದುಃಖಿತರಾದ ಋಷಿಗಳೆಲ್ಲರೂ, ತಮ್ಮನ್ನೇ ಇದಿರುನೋಡುತ್ತ, ಅಲ್ಲಲ್ಲಿ ಗುಂಪುಗೂಡಿರುವುದನ್ನು ನೋಡಿ, ವ್ಯಸನದಿಂದ ಕಣ್ಣೀರುಬಿಡುತ್ತ ಮುಂದೆ ಬಂದು ಅವರಿಗೆ ನಮಸ್ಕರಿಸಿ ರಾಜನು ಸಿಕ್ಕಲಿಲ್ಲವೆಂದು ಹೇಳಿದರು. ಇಲ್ಲಿಗೆ ಹದಿಮೂರನೆಯ ಅಧ್ಯಾಯವು.

---

ಬ್ರಾಹ್ಮಣರೆಲ್ಲರೂ ನೇರಿ ವೇನನಿಗೆ ರಾಜ್ಯಾಭಿಷೇಕವನ್ನು ಮಾಡಿದುದು. ಋಷಿಗಳು ಅವನು ಅಧರ್ಮದಲ್ಲಿ ಪ್ರವರ್ತಿಸುವುದನ್ನು ಕಂಡು ಕೋಪಗೊಂಡು ಶಪಿಸಿದುದು.

ವಿದುರಾ ಕೇಳು ! ಪ್ರಜಾಕ್ಷೇಮಚಿಂತಕರಾದ ಭೃಗು ಮೊದಲಾದ ಮಹರ್ಷಿಗಳೆಲ್ಲರೂ, ಅವರ ಮಾತನ್ನು ಕೇಳಿ ನಿರಾಶರಾಗಿ ದುಃಖಿಸುತ್ತ, ರಾಜ್ಯವು ಅನಾಯಕವಾಗಿದ್ದಪಕ್ಷದಲ್ಲಿ, ಪ್ರಜೆಗಳೆಲ್ಲರೂ ಪಶುಪ್ರಾಯರಾಗಿ ಒಬ್ಬರನ್ನೊಬ್ಬರು ಹಿಂಸಿಸುತ್ತ, ಅಧರ್ಮದಲ್ಲಿ ಪ್ರವರ್ತಿಸುವರೆಂದಾಲೋಚಿಸಿ, ವೇನನಿಗೆ ರಾಜ್ಯದಲ್ಲಿ ಪಟ್ಟವನ್ನು ಕಟ್ಟಬೇಕೆಂದು ನಿಶ್ಚಯಿಸಿದರು. ಬ್ರಹ್ಮವಾದಿಗಳಾದ ಆ ಮಹರ್ಷಿಗಳೆಲ್ಲರೂ ಈ ನಿಶ್ಚಯದಿಂದ ವೇನನ ತಾಯಿಯಾದ ಸುನೀಥೆಯನ್ನು ಕರೆಸಿ,ಅವಳಿಗೆ ಈ ವಿಚಾರಗಳೆಲ್ಲವನ್ನೂ ತಿಳಿಸಿದರು.ವೇನನಿಗೆ ಪಟ್ಟವನ್ನು ಕಟ್ಟುವುದು ಪ್ರಜೆಗಳಲ್ಲಿ ಯಾರಿಗೂ ಇಷ್ಟವಿಲ್ಲದಿದ್ದರೂ, ರಾಜ್ಯವನ್ನು ಅನಾಯಕವಾಗಿ ಬಿಡಬಾರದೆಂದು ಅವರೆಲ್ಲರನ್ನೂ ಒಪ್ಪಿಸಿ, ಆ ವೇನನನ್ನೇ ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟವನ್ನು ಕಟ್ಟಿದರು. ಅಧರ್ಮಿಷ್ಠನಾದ ವೇನನು ರಾಜ್ಯಕ್ಕೆ ಬಂದುದನ್ನು ತಿಳಿದೊಡನೆ,ಊರೂರಿನಲ್ಲಿ ಕಳ್ಳರು ತಲೆಯೆತ್ತಿ,ಹಾವನ್ನು ಕಂಡ ಇಲಿಗಳಂತೆ, ಅಲ್ಲಲ್ಲಿ ಮರೆಯಾಗಿ ಕೊಳ್ಳೆಹೊಡೆಯುವುದಕ್ಕೆ ತೊಡಗಿದರು. ಇತ್ತಲಾಗಿ ವೇನನೂಕೂಡ ಸಿಂಹಾಸನವನ್ನೇರಿದೊಡನೆ, ಲೋಕಪಾಲರಂತೆ ಅಷ್ಟೈಶ್ವರ್ಯಗಳನ್ನನುಭವಿಸುತ್ತ, ಈ ಭೋಗಸಮೃದ್ಧಿಯಿಂದ ಮತ್ತಷ್ಟು ಗರ್ವಿತನಾಗಿ, ಯುಕ್ತಾಯುಕ್ತವಿವೇಕವಿಲ್ಲದೆ,ಲೋಕದಲ್ಲಿ ತನ್ನ ಭಾಗ್ಯಕ್ಕೂ,ತನ್ನ ಬುದ್ಧಿಗೂ ಎಣೆಯೇ ಇಲ್ಲವೆಂದು ತಿಳಿದು,ಬೀಗಿ ಬೇರೆಯುತಿದ್ದನು!ಕೊಬ್ಬಿದಕಾಡಾನೆಯಂತೆ

ಮದಾಂಧನಾದ ಆ ವೇನನು,ಬುದ್ಧಿಹೀನನಾಗಿ,ಮನಸ್ಸು ಬಂದಹಾಗೆ ಪ್ರವರ್ತಿಸುತ್ತ, ತನ್ನ ವಿಜಯರಥವನ್ನೇರಿ, ಭೂಮ್ಯಾಕಾಶಗಳೆಲ್ಲವನ್ನೂ ನಡುಗಿಸುವಂತೆ ಸಿಕ್ಕಿದ ಕಡೆಯಲ್ಲಿ ಸುತ್ತುತಿದ್ದನು. ಊರೂರುಗಳಲ್ಲಿ ಡಂಗುರವನ್ನು ಹೊಡೆಯಿಸಿ, "ಬ್ರಾಹ್ಮಣರು ಯಾರೂ ಎಲ್ಲಿಯೂ ಯಾಗಗಳನ್ನು ನಡೆಸಬಾರದು! ಅಗ್ನಿಹೋತ್ರಗಳನ್ನು ಮಾಡಬಾರದು! ದಾನಧರ್ಮಗಳನ್ನು ನಡೆಸಬಾರದು!"ಎಂದು ಸಾರಿಸುತ್ತ ವರ್ಣಾಶ್ರಮಧರ್ಮಗಳೆಲ್ಲವನ್ನೂ ಕ್ರಮಕ್ರಮವಾಗಿ ತಪ್ಪಿಸುತ್ತ ಬಂದನು. ದುರಾತ್ಮನಾದ ವೇನನ ಈ ಕ್ರೂರಶಾಸನವನ್ನು ನೋಡಿ,ಯಜ್ಞಶೀಲರಾದ ಮಹರ್ಷಿಗಳೆಲ್ಲರೂ ಒಂದು ಕಡೆಯಲ್ಲಿ ಸಭೆಸೇರಿ,ತಮ್ಮೊಳಗೆ ತಾವು ಲೋಕಕ್ಕೆ ಸಂಭವಿಸಿದ ಈ ಮಹಾನರ್ಥವನ್ನು ಕುರಿತು ಆಲೋಚಿಸಿದರು."ಅಯ್ಯೋ!ಇನ್ನೇನು ಗತಿ!ಇನ್ನು ಪ್ರಜೆಗಳು ಬದುಕುವ ಬಗೆಯೇನು? ಇತ್ತಲಾಗಿ ರಾಜನ ಬಾಧೆ!ಅತ್ತಲಾಗಿ ಕಳ್ಳಕಾಕರ ಹಾವಳಿ! ಈ ಉಭಯಸಂಕಟದಲ್ಲಿ ಸಿಕ್ಕಿ ನರಳಬೇಕಾಯಿತಲ್ಲಾ! ಎರಡು ಕಡೆಗಳಿಂದಲೂ ಉರಿದು ಬರುತ್ತಿರುವ ಕಟ್ಟಿಗೆಯ ನಡುವೆ ಸಿಕ್ಕಿ, ಪ್ರಾಣಭಯದಿಂದ ತತ್ತಳಿಸುವ ಹುಳುಗಳಂತೆ,ಮಹಾವಿಪತ್ತಿನಲ್ಲಿ ಸಿಕ್ಕಿಬಿದ್ದಿರುವ ಈ ಪ್ರಜೆಗಳನ್ನು ಕಾಪಾಡುವ ಉಪಾಯವೇನು?ದೇಶವು ಅರಾಜಕವಾಗಿದ್ದರೆ, ಚೋರಾದಿಬಾಧೆಗಳು ಹೆಚ್ಚುವುವೆಂಬ ಭಯಕ್ಕಾಗಿ,ಅಯೋಗ್ಯನಾಗಿದ್ದರೂ ಈ ವೇನನನ್ನು ರಾಜಾಸನದಲ್ಲಿ ಕುಳ್ಳಿರಿಸಿ ಪಟ್ಟವನ್ನು ಕಟ್ಟಿದೆವು. ಇದರಿಂದ ಮತ್ತಷ್ಟು ಕೇಡುಂಟಾಯಿತು. ಮುಂದೇನು ಗತಿ!ಪ್ರಜೆಗಳಿಗೆ ಕ್ಷೇಮವನ್ನುಂಟುಮಾಡುವ ಮಾರ್ಗವೇನು? ಅಯ್ಯೋ! ನಾವು ಈ ದುರಾತ್ಮನಿಗೆ ರಾಜ್ಯವನೊಪ್ಪಿಸಿದುದು ಹಾವಿಗೆ ಹಾಲೆರೆದಂತಾಯಿತು! ದುಷ್ಟಜಂತುವನ್ನು ಪೋಷಿಸುವುದರಿಂದ ಪೋಷಕನಿಗೇ ಮಹಾನರ್ಥವುಂಟಾಗುವಂತೆ, ನಾವು ಈ ದುಷ್ಟನಿಗೆ ರಾಜ್ಯವನ್ನೊಪ್ಪಿಸಿದುದರಿಂದ, ನಾವೇ ಅದರ ಫಲವನ್ನನುಭವಿಸಬೇಕಾಯಿತು ! ಮೀರಿದ ಕೆಲಸಕ್ಕೆ ಮಾಡುವುದೇನು ? ಲೋಕವನ್ನು ಪಾಲಿಸತಕ್ಕ ರಾಜನೇ ಕೊಲ್ಲುವುದಾದರೆ,ಅದನ್ನು ತಡೆಯುವವರಾರು ? ಹಾಗಿದ್ದರೂ ಇರಲಿ ! ನಮ್ಮಿಂದಾದಷ್ಟು ಪ್ರಯತ್ನಮಾಡಿ ನೋಡಬೇಕು ! ಒಳ್ಳೆಯಮಾತಿನಿಂದಲೇ ಇವನಿಗೆ ಬುದ್ಧಿವಾದವನ್ನು

ಹೇಳಿ ನೋಡುವೆವು. ಹೇಳಿದ ಮಾತನ್ನೂ ಕೇಳದೆ, ಅವನು ಮೀರಿನಡೆದ ಪಕ್ಷದಲ್ಲಿ, ಆಗ ನಮ್ಮ ತಪ್ಪಿಲ್ಲ! ನಾವು ಮೊದಲಿಂದಲೂ ಇವನ ದುಷ್ಟ ಸ್ವಭಾವವನ್ನು ತಿಳಿದಿದ್ದರೂ, ಇವನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿದೆವು. ಆ ಅಧಿಕಾರಮದದಿಂದ ಇವನು ಪ್ರಜೆಗಳನ್ನು ಹಿಂಸಿಸುತ್ತಿರುವನು. ನಾವು ಮೊದಲು ಇವನನ್ನು ರಾಜನನ್ನಾಗಿ ಮಾಡಿದುದೇ ತಪ್ಪು! ಈಗ ಧರ್ಮೋಪದೇಶದಿಂದ ಅವನ ಮನಸ್ಸನ್ನು ತಿದ್ದಿದರೆ ಆಗ ನಮ್ಮ ತಪ್ಪು ಕಳೆದುಹೋಗುವುದು. ಒಂದುವೇಳೆ ಇವನು ನಮ್ಮ ಮಾತನ್ನು ಕೇಳಿ ದಾರಿಗೆ ಬಂದರೂ ಬರಬಹುದು. ಆಗಲೂ ಅವನು ತನ್ನ ದುರ್ಬುದ್ಧಿಯನ್ನು ಬಿಡದೆ ಮೀರಿ ನಡೆದಪಕ್ಷದಲ್ಲಿ, ಆ ಪಾಪಕ್ಕೆ ನಾವು ಗುರಿಯಾಗಲಾರೆವು. ಇಷ್ಟಾದರೂ ಇವನು ನಮ್ಮ ಮಾತನ್ನು ಮೀರಿ ನಡೆಯುತಿದ್ದಪಕ್ಷದಲ್ಲಿ ದುರಾತ್ಮನಾದ ಇವನನ್ನು ನಾವೇ ನಮ್ಮ ಶಾಪಾಗ್ನಿಯಿಂದ ದಹಿಸಿಬಿಡುವೆವು” ಎಂದು ತಮ್ಮೊಳಗೆ ತಾವು ನಿಶ್ಚಯಿಸಿಕೊಂಡರು. ಈ ನಿಶ್ಚಯದಿಂದ, ಭೃಗುಮೊದಲಾದ ಮಹರ್ಷಿಗಳೆಲ್ಲರೂ, ತಮ್ಮ ಕೋಪವನ್ನು ಹೊರಕ್ಕೆ ಕಾಣಿಸದೆ, ವೇನನ ಬಳಿಗೆ ಬಂದು, ಸಾಮವಾಕ್ಯದಿಂದ ಅವನನ್ನು ಕುರಿತು, “ರಾಜೇಂದ್ರಾ! ನಮ್ಮ ವಿಜ್ಞಾಪನೆಯನ್ನು ಲಾಲಿಸಬೇಕು. ಇದರಿಂದ ನಿನಗೆ ಆಯುಸ್ಸೂ, ಕೀರ್ತಿಯೂ, ಬಲವೂ, ಐಶ್ವರ್ಯವೂ ಹೆಚ್ಚುವುದು. ಇದರಿಂದ ಸರ್ವವಿಧದಲ್ಲಿಯೂ ನಿನಗೆ ಕ್ಷೇಮವುಂಟು. ಮನುಷ್ಯರು ತಮ್ಮ ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ ತಮ್ಮತಮ್ಮ ವಿಹಿತಧರ್ಮವನ್ನಾಚರಿಸುತಿದ್ದಾಗಮಾತ್ರವೇ ಸಮಸ್ತಲೋಕಗಳಿಗೂ ಕ್ಷೇಮವುಂಟು. ಭಗವದಾರಾಧನರೂಪವಾದ ಆ ಧರ್ಮವೇ ವಿರಕ್ತರಿಗೆ ಶಾಶ್ವತವಾದ ಮೋಕ್ಷಸುಖವನ್ನೂ ಕೊಡುವುದು. ಆದುದರಿಂದ ಎಲೈ ವೀರನೆ! ನೀನು ಧರ್ಮವನ್ನು ಮೀರಿ ನಡೆಯಬೇಡ! ಧರ್ಮವನ್ನು ಮೀರಿದ ರಾಜನು, ತನ್ನ ಐಶ್ವರ್ಯಗಳೆಲ್ಲವನ್ನೂ ಕಳೆದುಕೊಂಡು, ಶೀಘ್ರದಲ್ಲಿಯೇ ರಾಜ್ಯಭ್ರಷ್ಟನಾಗುವನು. ಹೇ ರಾಜೇಂದ್ರಾ, ದುಷ್ಟರಾದ ತನ್ನ ಕಡೆಯ ಅಧಿಕಾರಿಗಳಿಂದಲೂ, ಚೋರಾದಿಗಳಿಂದಲೂ ಭಯವಿಲ್ಲದಂತೆ ಪಾಲಿಸುವ ರಾಜನನ್ನು ಸಮಸ್ತಲೋಕವೂ ಗೌರವಿಸುವುದು. ಅವನಿಗೆ ಪರದಲ್ಲಿಯೂ ಸುಖವುಂಟು! ಯಾವ ರಾಷ್ಟ್ರದಲ್ಲಿ ಪ್ರಜೆಗ

ಳು, ತಮ್ಮ ವರ್ಣಾಶ್ರಮಧರ್ಮಗಳಿಂದ ಯಜ್ಞಾರಾಧ್ಯನಾದ ಭಗವಂತನನ್ನು ಕ್ರಮವಾಗಿ ಆರಾಧಿಸುತ್ತಿರುವರೋ,ಅಂತಹ ರಾಜ್ಯವನ್ನಾಳತಕ್ಕ ರಾಜನಲ್ಲಿ,ಸರ್ವಾತ್ಮನಾದಭಗವಂತನು ಪ್ರಸನ್ನನಾಗಿ,ಅವನಿಗೆ ಸರ್ವವಿಧದಲ್ಲಿಯೂ ಕ್ಷೇಮವನ್ನುಂಟುಮಾಡುವನು. ಯಾವ ರಾಜನು ಭಗವಂತನಿಂದ ವೇದಗಳ ಮೂಲಕವಾಗಿ ವಿಧಿಸಲ್ಪಟ್ಟ ಪ್ರಜಾಪಾಲನರೂಪವಾದ ತನ್ನ ಧರ್ಮವನ್ನು ತಪ್ಪದೆ ನಡೆಸುತ್ತಿರುವನೋ ಅಂತವನ ವಿಷಯದಲ್ಲಿಮಾತ್ರವೇ ಭಗವಂತನು ಸಂತೋಷಿಸುವನು.ಬ್ರಹ್ಮಾದಿಗಳಿಗೂ ಪ್ರಭುವಾದ ಆ ಭಗವಂತನು ಸಂತೋಷಿಸಿದಪಕ್ಷದಲ್ಲಿ,ಮನುಷ್ಯನಿಗೆ ದುರ್ಲಭವಾದ ಕೋರಿಕೆಯೊಂದೂ ಇರುವುದಿಲ್ಲ.ಲೋಕಪಾಲರೊಡಗೂಡಿದ ಸಮಸ್ತಲೋಕವೂ ಅಂತವನನ್ನು ಭಕ್ತಿಯಿಂದ ಗೌರವಿಸುವುದು.ಸಮಸ್ತಲೋಕಗಳನ್ನೂ, ಆ ಲೋಕಪಾಲಕರಾದ ದೇವತೆಗಳನ್ನೂ, ಆ ದೇವತ್ವವನ್ನು ಕೊಡುವುದಕ್ಕೆ ಕಾರಣಗಳಾದ ಯಜ್ಞಗಳನ್ನೂ ನಿಯಮಿಸತಕ್ಕವನು ಆಭಗವಂತನೊಬ್ಬನೇ! ಮತ್ತು ಆ ಭಗವಂತನೇ ಧರ್ಮಾಧರ್ಮಗಳನ್ನು ತಿಳಿಸತಕ್ಕ ವೇದಸ್ವರೂಪನಾಗಿಯೂ,ಯಾಗಸ್ವರೂಪನಾಗಿಯೂ,ತಪಸ್ಸ್ವರೂಪನಾಗಿಯೂ ಬೆಳಗುತ್ತಿರುವನು.ಪ್ರಜೆಗಳೆಲ್ಲರೂ ತಮ್ಮ ರಾಜನ ಕ್ಷೇಮಕ್ಕಾಗಿಯೇ ಯಜ್ಞಾದಿಗಳಿಂದ ಆ ಭಗವಂತನನ್ನಾರಾಧಿಸುತ್ತಿರುವರು. ಅಂತಹ ಪ್ರಜೆಗಳನ್ನು ಅಪಾಯವಿಲ್ಲದೆ ರಕ್ಷಿಸಬೇಕಾದುದೇ ರಾಜನ ಧರ್ಮವು. ಆದುದರಿಂದ ಎಲೈ ರಾಜೇಂದ್ರನೆ! ನೀನು ನಿನ್ನ ಪ್ರಜೆಗಳ ಮನಸ್ಸಿಗೆ ಅನುಕೂಲನಾಗಿ ನಡೆಯುವುದರಿಂದ ನಿನಗೆ ಸರ್ವವಿಧದಲ್ಲಿಯೂ ಕ್ಷೇಮವುಂಟು. ಮತ್ತು ನಿನ್ನದೇಶದಲ್ಲಿರುವ ಬ್ರಾಹ್ಮಣಾದಿವರ್ಣತ್ರಯದವರೂ ಶಾಸ್ತ್ರೋಕ್ತವಾಗಿ ಯಾಗಗಳನ್ನು ನಡೆಸಿ, ಭಗವದಂಶಭೂತರಾದ ಇಂದ್ರಾದಿದೇವತೆಗಳನ್ನು ಪೂಜಿಸುತ್ತಿರಬೇಕಾದುದೂ ನಿನ್ನ ಕ್ಷೇಮಕ್ಕಲ್ಲದೆ ಬೇರೆಯಲ್ಲ! ಈ ಯಜ್ಞಾದಿಗಳಿಂದ ಸಂತುಷ್ಟರಾದ ದೇವತೆಗಳು, ನಿನಗೆ ಬೇಕಾದ ವರಗಳನ್ನು ಕೊಡುವುದಕ್ಕೆ ಸಿದ್ಧರಾಗಿರುವರು. ಅಂತಹ ದೇವತೆಗಳಿಗೆ ನಡೆಯತಕ್ಕ ಪೂಜಾದಿಗಳನ್ನು ತಪ್ಪಿಸುವುದು ನಿನಗೆ ಧರ್ಮವಲ್ಲ, ಆದುದರಿಂದ ಪ್ರಜೆಗಳಿಗೂ, ದೇವಬ್ರಾಹ್ಮಣರಿಗೂ ಅನುಕೂಲನಾಗಿ ನಡೆಯುವುದರಿಂದ, ನಿನಗೆ ಕ್ಷೇಮವುಂ

ಟು” ಎಂದರು. ಹೀಗೆ ದೈನ್ಯದಿಂದ ಪ್ರಾರ್ಥಿಸುತ್ತಿರುವ ಋಷಿಗಳನ್ನು ನೋಡಿ, ದುರಾತ್ಮನಾದ ವೇನನು, ಹಾಸ್ಯಮಾಡುತ್ತ “ಎಲೈ ಋಷಿಗಳೆ! ಸಾಕು ಸುಮ್ಮನಿರಿ ! ನೀವು ಬುದ್ಧಿಯಿಲ್ಲದವರೆಂಬುದರಲ್ಲಿ ಸಂದೇಹವಿಲ್ಲ ಅಧರ್ಮವನ್ನೇ ಧರ್ಮವೆಂದು ತಿಳಿದು, ವಿವೇಕವಿಲ್ಲದೆ ನೀವು ಈ ಮಾತನ್ನಾಡುವ ಹಾಗಿದೆ ! ಲೋಕದಲ್ಲಿ ಅನ್ನಾದಿಗಳನ್ನು ಕೊಟ್ಟು ಜೀವಾವಧಿ ತನ್ನನ್ನು ಪೋಷಿಸತಕ್ಕ ಕೈಹಿಡಿದ ಗಂಡನನ್ನು ಬಿಟ್ಟು,ವಿಟನನ್ನು ಪ್ರೀತಿಸತಕ್ಕ ಜಾರಿಣಿಯರಂತೆ, ಬುದ್ಧಿಹೀನರಾದ ನೀವೂ ಈಗ, ನಿಮ್ಮನ್ನು ಪೋಷಿಸತಕ್ಕ ರಾಜನನ್ನು ಬಿಟ್ಟು ಬೇರೆಯವರನ್ನು ಭಜಿಸಬೇಕೆಂದರೆ ಅಧರ್ಮದಲ್ಲಿ ಬಿದ್ದವರು ನೀವೋ ನಾನೋ ಯೋಚಿಸಿ ನೋಡಿರಿ ! ಲೋಕದಲ್ಲಿ ಯಾವ ಮೂಢರು ರಾಜರೂಪದಿಂದ ತಮ್ಮನ್ನು ಕಾಪಾಡತಕ್ಕ ಈಶ್ವರನನ್ನು ನಿರಾಕರಿಸುವರೋ, ಅಂತವರು ದುಃಖದಲ್ಲಿ ಸಿಕ್ಕಿ ನರಳಬೇಕೇ ಹೊರತು,ಈ ಲೋಕದಲ್ಲಿಯಾಗಲಿ, ಪರಲೋಕದಲ್ಲಿಯಾಗಲಿ ಸುಖವನ್ನು ಹೊಂದಲಾರರು. ಜಾರಸ್ತ್ರೀಯರು ಪತಿಯಲ್ಲಿಡಬೇಕಾದ ಭಕ್ತಿಯನ್ನು ವಿಟನಲ್ಲಿ ತೋರಿಸುವಂತೆ, ನೀವು ಪ್ರಭುವಾದ ನನ್ನಲ್ಲಿ ಭಕ್ತಿಯಿಡದೆ ಬೇರೆ ಯಾವನನ್ನೋ ಯಜ್ಞಪುರುಷನೆಂದು ತಿಳಿದು, ಅವನಲ್ಲಿ ಭಕ್ತಿಯನ್ನು ತೋರಿಸುತ್ತಿರುವಿರಿ!ಆ ಯಜ್ಞಪುರುಷನೆಂಬವನಾವನು? ಲೋಕದಲ್ಲಿ ನಿಗ್ರಹಾನುಗ್ರಹಸಮರ್ಥರೆನಿಸಿದ ಸಮಸ್ತದೇವತೆಗಳ ಅಂಶವೂ ರಾಜನೊಬ್ಬನಲ್ಲಿಯೇ ಅಡಗಿರುವುದು, ವಿಷ್ಣುವೆಂದೂ, ಬ್ರಹ್ಮನೆಂದೂ, ರುದ್ರನೆಂದೂ ಕರೆಯಲ್ಪಡುವ ತ್ರಿಮೂರ್ತಿಗಳಾಗಲಿ, ಇಂದ್ರ, ಅಗ್ನಿ, ಯಮ, ವರುಣ, ಕುಬೇರ,ವಾಯು ಮೊದಲಾದ ದಿಕ್ಪಾಲಕರಾಗಲಿ,ಸೂರ್ಯಚಂದ್ರರಾಗಲಿ,ಪರ್ಜನ್ಯದೇವತೆಯಾಗಲಿ,ಭೂಮಿಯಾಗಲಿ,ಇನ್ನೂ ಬೇರೆ ಯಾವಯಾವ ದೇವತೆಗಳುಂಟೋ,ಅವರೆಲ್ಲರೂ ರಾಜ್ಯವನ್ನಾಳತಕ್ಕ ನನ್ನಂತಹ ರಾಜನ ದೇಹದಲ್ಲಿಯೇ ಅಡಗಿಹೋಗಿರುವುದರಿಂದಲ್ಲವೇ ರಾಜನನ್ನು ಸರ್ವದೇವತಾತ್ಮಕನೆಂದು ಹೇಳುವರು. ಆದುದರಿಂದ ಎಲೈ ಬ್ರಾಹ್ಮಣರೆ!ನೀವು ಇನ್ನು ಮೇಲಾದರೂ ವಿವೇಕಿಗಳಾಗಿ,ನನ್ನಲ್ಲಿ ಅಸೂಯೆಯನ್ನು ಬಿಟ್ಟು, ನನ್ನನ್ನೇ ಪೂಜಿಸಿರಿ? ನೀವು ಬೇರೆ ದೇವತೆಗಳಿಗೆ ಕೊಡತಕ್ಕ ಬಲಿಗಳೆಲ್ಲವನ್ನೂ ನನಗಾಗಿಯೇ ಅರ್ಪಿಸಿರಿ!

ಲೋಕದಲ್ಲಿ ನನಗಿಂತಲೂ ಪೂಜ್ಯನಾದ ಪುರುಷನು ಬೇರೊಬ್ಬನೂ ಇ ಲ್ಲವು" ಎಂದನು. ಪಾಪಿಯಾಗಿಯೂ, ದುರ್ಮಾರ್ಗಪ್ರವರ್ತಕನಾಗಿಯೂ ಇರುವ ವೇನನು, ಹೀಗೆ ವಿಪರೀತಬುದ್ಧಿಯುಳ್ಳವನಾಗಿ, ಮಿತಿಮೀರಿದ ಗರ್ವದಿಂದ ಆ ಋಷಿಗಳ ಪ್ರಾರ್ಥನೆಯನ್ನು ತಿರಸ್ಕರಿಸಿ, ತನ್ನ ಕ್ಷೇಮದಲ್ಲಿ ದೃಷ್ಟಿಯಿಡದೆ, ಕೆಟ್ಟದಾರಿಯಲ್ಲಿಯೇ ಪ್ರವರ್ತಿಸುತಿದ್ದನು. ತಾನೇ ಪಂಡಿತ ನೆಂಬ ಗರ್ವದಿಂದ ಹಿಂದುಮುಂದುಕಾಣದೆ ಹೀಗೆ ತಮ್ಮನ್ನು ತಿರಸ್ಕರಿಸು ತ್ತಿರುವ ಆ ವೇನನಲ್ಲಿ, ತಮ್ಮ ಪ್ರಾರ್ಥನೆಯು ವ್ಯರ್ಥವಾದುದನ್ನು ನೋಡಿ ಋಷಿಗಳಿಗೆ ತಡೆಯಲಾರದ ಕೋಪವುಂಟಾಯಿತು. ಈ ಕೋಪಾವೇಶದಿಂದ ಋಷಿಗಳೆಲ್ಲರೂ ಸೇರಿ "ಈ ವೇನನಾದರೋ ಸಹಜವಾಗಿಯೇ ಕ್ರೂರನು ! ಪಾಪಕಾರ್ಯಕ್ಕೆ ಹಿಂಜರಿಯತಕ್ಕವನಲ್ಲ! ಇವನು ಬದುಕಿದ್ದಪಕ್ಷದಲ್ಲಿ, ಲೋ ಕವೆಲ್ಲವೂ ನಿಶ್ಶೇಷವಾಗಿ ನಾಶಹೊಂದುವುದರಲ್ಲಿ ಸಂದೇಹವಿಲ್ಲ. ಆದುದ ರಿಂದ ಈ ದುರಾತ್ಮನು ಈಗಲೇ ಸಾಯಲಿ! ಈ ದುರಾತ್ಮನು ಯಾವನ ಅನುಗ್ರಹಬಲದಿಂದ ಈ ಪದವಿಯನ್ನು ಹೊಂದಿರುವನೋ, ಯಜ್ಞಾರಾಧ್ಯ ನಾದ ಆ ವಿಷ್ಣುವನ್ನೇ ನಾಚಿಕೆಯಿಲ್ಲದೆ ನಿಂದಿಸುತ್ತಿರುವನಲ್ಲವೆ ? ಈ ನೀಚನು ರಾಜಸಿಂಹಾಸನದಲ್ಲಿ ಕುಳ್ಳಿರುವುದಕ್ಕೆ ಯೋಗ್ಯನಲ್ಲ. ಲೋಕದಲ್ಲಿ ಇಂತಹ ದುರಾತ್ಮನು ಬೇರೆ ಯಾವನೂ ಇರಲಾರನು." ಎಂದು ಆ ಮಹ ರ್ಷಿಗಳೆಲ್ಲರೂ ತಮ್ಮೊಳಗೆ ತಾವು ನಿಶ್ಚಯಿಸಿಕೊಂಡು, ಭಗವನ್ನಿಂದೆಯಿಂದ ಮೊದಲೇ ಮೃತಪ್ರಾಯನಾದ ಆ ವೇನನನ್ನು, ಶಾಪಪೂರ್ವಕವಾದ ತಮ್ಮ ಹುಂಕಾರಗಳಿಂದ ದಹಿಸಿಬಿಟ್ಟರು. ಹೀಗೆ ಭೃಗು ಮೊದಲಾದ ಮಹ ರ್ಷಿಗಳೆಲ್ಲರೂ ಕ್ರೂರಶಾಪದಿಂದ ವೇನನನ್ನು ಕೊಂದು, ತಮ್ಮ ತಮ್ಮ ಆಶ್ರ ಮಗಳಿಗೆ ಹಿಂತಿರುಗಿದಮೇಲೆ, ಇತ್ತಲಾಗಿ ವೇನನ ತಾಯಿಯಾದ ಸುನೀ ಥೆಯು, ಪುತ್ರವಿರಹದಿಂದ ದುಃಖಿಸುತ್ತ ಆ ವೇನನ ಮೃತದೇಹವನ್ನು ತನ್ನ ಮಂತ್ರವಿದ್ಯೆಯ ಮಹಿಮೆಯಿಂದ ರಕ್ಷಿಸಿಟ್ಟುಕೊಂಡಿದ್ದಳು ಆಮೇಲೆ ಒಂದಾನೊಂದುಕಾಲದಲ್ಲಿ ಆ ಮಹರ್ಷಿಗಳೆಲ್ಲರೂ ಸರಸ್ವತೀನದಿಯಲ್ಲಿ ಸ್ನಾನಮಾಡಿ, ಪ್ರಾತಃಕಾಲದಲ್ಲಿ ನಡೆಸಬೇಕಾದ ಅಗ್ನಿಕಾರ್ಯಗಳನ್ನು ಮುಗಿಸಿಕೊಂಡು, ಆ ನದೀತೀರದಲ್ಲಿ ಕುಳಿತು, ಭಗವತ್ಕಥಾಪ್ರಸಂಗವನ್ನು

ಮಾಡುತಿದ್ದರು. ಆಗ ಇವರ ಮುಂದೆ ಸಮಸ್ತಲೋಕಗಳಿಗೂ ಭಯವನ್ನು ಹುಟ್ಟಿಸತಕ್ಕ ಮಹೋತ್ಪಾತಗಳು ಕಾಣಿಸಿಕೊಂಡುವು. ಅದನ್ನು ನೋಡಿ ಅವರೆಲ್ಲರೂ ತಮ್ಮೊಳಗೆತಾವು "ಆಹಾ! ಈ ಮಹೋತ್ಪಾತಗಳನ್ನು ನೋಡಿದರೆ, ಲೋಕಕ್ಕೆ ಯಾವುದೋ ಅನರ್ಥವುಂಟಾಗುವಹಾಗಿದೆ. ರಾಜ್ಯವು ಅನಾಯಕವಾಗಿರುವಾಗ ಪ್ರಜೆಗಳಿಗೆ ಹೇಗೆತಾನೇ ಚೋರಾದ್ಯುಪದ್ರವಗಳು ತಪ್ಪುವುವು ? ಎಂದಿಗೂ ತಪ್ಪಲಾರದು!" ಎಂದು ಒಬ್ಬರಿಗೊಬ್ಬರು ಮಾತಾಡಿಕೊಳ್ಳುತಿದ್ದರು. ಇವರು ಹೀಗೆ ಮತಾಡಿಕೊಳ್ಳುತ್ತಿರುವಷ್ಟರಲ್ಲಿಯೇ, ಅಲ್ಲಲ್ಲಿ ಊರೂರುಗಳನ್ನು ಕೊಳ್ಳೆಹೊಡೆದು,ಒಡವೆವಸ್ತುಗಳನ್ನು ಹೊತ್ತುಕೊಂಡು, ನಾನಾಕಡೆಗಳಿಂದಲೂ ಬಂದು ಕೂಡುತ್ತಿರುವ ಕಳ್ಳರ ಸಂಚಾರವೇಗದಿಂದ, ದೊಡ್ಡ ಕೆಂಧೂಳಿಯು ಮೇಲಕ್ಕೆದ್ದು, ಆಕಾಶವನ್ನು ಮರೆಸಿ ಕತ್ತಲೆಕವಿದಂತೆ ಮಾಡಿತ್ತು. ರಾಜ್ಯವು ಅನಾಯಕವಾಗಿ ದುಷ್ಟರನ್ನು ದಂಡಿಸುವವರಿಲ್ಲದೆಹೋದುದರಿಂದ,ನಿರ್ಭಯರಾಗಿ ಜನಗಳು ಒಬ್ಬರನ್ನೊಬ್ಬರು ಕೊಲ್ಲುವುದಕ್ಕೆ ತೊಡಗಿದರು. ದುಷ್ಟರ ಬಾಧೆಯಿಂದ ಪ್ರಜೆಗಳ ಮನಸ್ಸಿಗೆ ನೆಮ್ಮದಿಯಿಲ್ಲದೆ, ಒಬ್ಬೊಬ್ಬರೂ ಬಲಹೀನರಾಗುತ್ತ ಬಂದರು. ಹೀಗೆ ಲೋಕೋಪದ್ರವವು ಹೆಚ್ಚಿ, ದೇಶಗಳೆಲ್ಲವೂ ಹಾಳುಬೀಳುತ್ತಿರುವುದನ್ನು ಕೇಳಿ, ಇಲ್ಲಿದ್ದ ಮಹರ್ಷಿಗಳಿಗೆ ಬಹಳ ಕನಿಕರವುಂಟಾಯಿತು. ಆದರೆ ಇವರು ವೇನನನ್ನು ಕೊಂದಂತೆ,ತಮ್ಮ ತಪೋಮಹಿಮೆಯಿಂದ ತಾವೇ ಆ ದುಷ್ಟರನ್ನಡಗಿಸಬಹುದಾಗಿದ್ದರೂ, ಈ ಕಾರ್ಯಕ್ಕಾಗಿ ತಾವು ಗಳಿಸಿಟ್ಟ ತಪಃಫಲವನ್ನು ಕಳೆದುಕೊಳ್ಳಬಾರದೆಂದೂ, ಮತ್ತೊಬ್ಬ ರಾಜನಮೂಲಕವಾಗಿಯೇ ಅವರನ್ನು ಅಡಗಿಸಬೇಕೆಂದೂ ನಿಶ್ಚಯಿಸಿ,ತಟಸ್ಥರಾಗಿದ್ದರು. ಬ್ರಾಹ್ಮಣರು ಸಾಮಾನ್ಯವಾಗಿ ಸಮಸ್ತಭೂತಗಳನ್ನೂ ಬ್ರಹ್ಮಾತ್ಮಕವೆಂಬುದನ್ನು ತಿಳಿದು, ಎಲ್ಲವನ್ನೂ ಸಮದೃಷ್ಟಿಯಿಂದ ನೋಡತಕ್ಕವರು. ಇದರಿಂದ ತಮಗೆ ಕೇಡನ್ನು ಕೋರಿದವರಲ್ಲಿಯೂ ತಾಳ್ಮೆಯನ್ನು ವಹಿಸತಕ್ಕ ಸ್ವಭಾವವುಳ್ಳವರು. ಈ ಕಾರಣದಿಂದ ಅವರು ಬೇರೊಬ್ಬರನ್ನು ತಾವಾಗಿ ದಂಡಿಸಲಾರರು.ಹಾಗಿದ್ದರೂ ಅವರು ತಮ್ಮ ತಪಃಫಲವು ನಷ್ಟವಾಗುವುದೆಂಬ ಭಯಕ್ಕಾಗಿ ಚೋರಾದಿಗಳನ್ನು ಶಪಿಸದೆ ಬಿಟ್ಟರೂ, ಅನಾ

ಥರಾದ ಪ್ರಜೆಗಳ ಕಷ್ಟವನ್ನು ತಪ್ಪಿಸದೆ ತಟಸ್ಥರಾಗಿದ್ದಪಕ್ಷದಲ್ಲಿ,ಅಗಲೂ, ಒಡೆದ ಮಡಕೆಯಲ್ಲಿ ತುಂಬಿದ ನೀರು ಕ್ರಮಕ್ರಮವಾಗಿ ಸೋರಿಹೋಗು ವಂತೆ, ಅವರ ತಪಃಫಲವು ಕ್ರಮಕ್ರಮವಾಗಿ ಕ್ಷೀಣಿಸಿ ಹೋಗುವುದು.

ಧರ್ಮಸೂಕ್ಷ್ಮವನ್ನು ಪರ್ಯಾಲೋಚಿಸಿ, ಆ ಮಹರ್ಷಿಗಳೆಲ್ಲರೂ ತಾವೇ ಸಾಕ್ಷಾತ್ತಾಗಿ ಆ ಚೋರರನ್ನು ದಂಡಿಸದಿದ್ದರೂ, ಮತ್ತೊಬ್ಬ ರಾ ಜನ ಮೂಲಕವಾಗಿ ಆ ದುಷ್ಟರನ್ನಡಗಿಸಬೇಕೆಂದು ನಿಶ್ಚಯಿಸಿಕೊಂಡರು. ಇದಲ್ಲದೆ ರಾಜರ್ಷಿಯಾದ ಅಂಗಭೂಪಾಲನ ವಂಶವು ಸಂತಾನವಿಲ್ಲದೆ ನಿಂತು ಹೋಗಿರುವುದನ್ನೂ ಯೋಚಿಸಿದರು. ಈ ರಾಜವಂಶವಾದರೋ ಅತಿಪವಿತ್ರ ವಾದುದು. ಆ ರಾಜಸಂತತಿಯವರೆಲ್ಲರೂ ಭಗವಂತನಲ್ಲಿ ಭಕ್ತಿಯುಳ್ಳವರು. ಅಮೋಘಪರಾಕ್ರಮವುಳ್ಳವರು. ಹೀಗೆ ಸರ್ವೋತ್ತಮವಾದ ಆ ಸದ್ವಂ ಶವು ಸಂತಾನವಿಲ್ಲದೆ ಅಷ್ಟಕ್ಕೇ ನಿಂತು ಹೋಗಿರುವುದರಿಂದ, ಅದೇ ವಂಶ ದಲ್ಲಿ, ಒಬ್ಬ ರಾಜನನ್ನು ಹುಟ್ಟಿಸಿ, ಅವನ ಮೂಲಕವಾಗಿ ಪ್ರಜಾಕ್ಷೇಮವ ನ್ನುಂಟುಮಾಡಬೇಕೆಂಬ ನಿಶ್ಚಯದಿಂದ, ಆ ಮಹರ್ಷಿಗಳೆಲ್ಲರೂ ಆ ನದೀತೀ ರದಿಂದ ಹೊರಟು ಬಂದು, ಇತ್ತಲಾಗಿ ವೇನನ ಮೃತದೇಹವನ್ನು ತರಿಸಿ, ಅದರ ತೊಡೆಯನ್ನು ಬಲವಾಗಿ ಮಥಿಸಿದರು.ಹೀಗೆ ಋಷಿಗಳೆಲ್ಲರೂ ಕಡೆಯು ತಿದ್ದಾಗ, ಆ ತೊಡೆಯಿಂದ ಭಯಂಕರವಾದ ವಿಕಾರರೂಪವುಳ್ಳ ಒಂದಾ ನೊಂದು ಪುರುಷಾಕೃತಿಯು ಉತ್ಪನ್ನವಾಯಿತು. ವಿದುರಾ! ಇವನಿಗೆ ಬಾ ಹುಕನೆಂದು ಹೆಸರು. ಇವನಿಗಾದರೋ ಕಾಗೆಯಂತೆ ಕಪ್ಪಾದ ಮೈ. ಬಹಳ ಕುಳ್ಳಾದ ಆಕೃತಿ!ಹ್ರಸ್ವವಾದ ತೋಳುಗಳು! ದೊಡ್ಡಮುಸುಡಿ!ಚಿಕ್ಕಬಾ ಯಿ! ಗುಳಿಬಿದ್ದಮೂಗು!ಕೆಂಡದಂತೆ ಕಣ್ಣು! ಕೆಂಪಾದ ಕೂದಲು! ಹೀಗೆ ವಿಕಾರರೂಪದಿಂದಿದ್ದ ಆ ಬಾಹುಕನು, ದೈನ್ಯದಿಂದ ಕುಗ್ಗಿ ಕೈಮುಗಿದು ನಿಂತು, “ಎಲೈ ಋಷಿಶ್ರೇಷ್ಠರೆ!ಏನಪ್ಪಣೆ”ಎಂದು ಕೇಳಿದನು. ಆಗ ಋಷಿ ಗಳು, ಅವನ ಸ್ವರೂಪವನ್ನು ನೋಡಿ, ಇವನು ರಾಜ್ಯಕ್ಕೆ ಯೋಗ್ಯನಲ್ಲವೆಂ ದು ನಿಶ್ಚಯಿಸಿ, ಅವನನ್ನು ಕುರಿತು “ಎಲೈ ಸುಮ್ಮನೆ ಕುಳ್ಳಿರು” ಎಂದು ಹೇಳಿ ಕುಳ್ಳಿರಿಸಿದರು. ವಿದುರಾ! ಹೀಗೆ ಋಷಿಗಳು ಅವನನ್ನು ನೋಡಿ “ನಿಷೀದ” ಎಂದು ಹೇಳಿದುದರಿಂದ, ಅವನು ನಿಷಾದರ (ಬೇಡರ) ಜಾತಿಗೆ

ಮೂಲಪುರುಷನಾದನು. ಈ ಬಾಹುಕನ ವಂಶದಲ್ಲಿ ಹುಟ್ಟಿದವರೆಲ್ಲರೂ ನಿಷಾದಜಾತಿಗೆ ಸೇರಿದವರು. ಇವರು ಕಾಡುಗುಡ್ಡಗಳಲ್ಲಿ ವಾಸಮಾಡುತ್ತ, ಮೃಗಜೀವಿಗಳಾಗಿ ಹೊಟ್ಟೆಹೊರೆಯುತ್ತಿರುವರೇಹೊರತು ಇವರಿಗೆ ಪುರಪ್ರವೇಶವಿಲ್ಲ. ಇವರೆಲ್ಲರೂ ಕೇವಲ ಪಾಪಸ್ವರೂಪವುಳ್ಳವರು. ಏಕೆಂದರೆ, ಈ ನಿಷಾದರಿಗೆ ಮೂಲಪುರುಷನಾದ ಬಾಹುಕನು, ಆ ವೇನನ ದೇಹದಿಂದ ಹುಟ್ಟುವಾಗ, ಆತನ ಕ್ರೂರಪಾಪಗಳೆಲ್ಲವನ್ನೂ ತನ್ನೊಡನೆ ಹೊರಕ್ಕೆ ತಂದುಬಿಟ್ಟನು. ಹೀಗೆ ಬಾಹುಕನು ಪಾಪಸ್ವರೂಪನಾಗಿ ಹುಟ್ಟಿದುದರಿಂದ, ಅವನ ಸಂತತಿಯವರೆಲ್ಲರೂ ಪಾಪಕಾರ್ಯದಲ್ಲಿಯೇ ನಿರತರಾದರು ಆಮೇಲೆ ಬ್ರಾಹ್ಮಣರೆಲ್ಲರೂ,ತಿರುಗಿ ಆ ವೇನನಲ್ಲಿ ತಕ್ಕ ಸಂತಾನವನ್ನು ಹುಟ್ಟಿಸಬೇಕೆಂಬ ಉದ್ದೇಶದಿಂದ,ಮತ್ತೊಮ್ಮೆ ಆ ಮೃತದೇಹದ ತೋಳುಗಳೆರಡನ್ನೂ ಕಡೆದರು. ಆ ತೋಳುಗಳಿಂದ ಕ್ರಮವಾಗಿ ಒಂದು ಪುರುಷವ್ಯಕ್ತಿಯೂ, ಒಂದು ಸ್ತ್ರೀವ್ಯಕ್ತಿಯೂ ಹುಟ್ಟಿದುವು. ಈ ಸ್ತ್ರೀಪುರುಷರ ದಿವ್ಯಾಕೃತಿಯನ್ನು ಕಂಡು,ವೇದವಿತ್ತುಗಳಾದ ಆ ಮಹರ್ಷಿಗಳೆಲ್ಲರೂ, ಆ ಮಿಥುನವು ಭಗವಂತನ ಅಂಶದಿಂದ ಹುಟ್ಟಿದುದೆಂದು ತಿಳಿದು, ಸಂತೋಷದಿಂದ ತಮ್ಮೊಳಗೆ ತಾವು ಹೀಗೆಂದು ಹೇಳಿಕೊಳ್ಳುವರು. ''ಆಹಾ ! ಈ ಪುರುಷನು ಭಗವದಂಶದಿಂದ ಹುಟ್ಟಿದವನೆಂಬುದರಲ್ಲಿ ಸಂದೇಹವಿಲ್ಲ. ಜ್ಞಾನಾದಿಷಡ್ಗುಣಪರಿಪೂರ್ಣನಾದ ಭಗವಂತನು,ನಮ್ಮ ದುಃಖವನ್ನು ತಿಳಿದು, ಲೋಕರಕ್ಷಣೆಗಾಗಿ ತನ್ನ ಅಂಶದಿಂದಲೇ ಹೀಗೆ ಅವತರಿಸಿರುವನು. ಈ ಸ್ತ್ರೀರತ್ನವೂಕೂಡ ಆತನಿಗೆ ನಿತ್ಯಾನಪಾಯಿನಿಯಾದ ಶ್ರೀಮಹಾಲಕ್ಷ್ಮಿಯ ಅಂಶದಿಂದಲೇ ಹುಟ್ಟಿರುವಳು.ಈ ದಂಪತಿಗಳಲ್ಲಿ ಪುರುಷನು ರಾಜಕುಲಕ್ಕೆ ಪ್ರಧಾನಪುರುಷನಾಗುವನು ಮುಂದೆ ಅನೇಕ ಕ್ಷೇಮಕಾರ್ಯಗಳನ್ನು ನಡೆಸಿ ತನ್ನ ಕೀರ್ತಿಯನ್ನು ಸಮಸ್ತಲೋಕಗಳಿಗೂ ವಿಸ್ತರಿಸುವವನು. ಪೃಥುವೆಂಬ ಹೆಸರಿನಿಂದ ಚಕ್ರವರ್ತಿಯಾಗಿ ರಾಜ್ಯವನ್ನು ಪಾಲಿಸುವನು. ಪರಮಸುಂದರಿಯಾದ ಈ ತರುಣಿಯೂಕೂಡ ದೇವತಾಂಶದಿಂದ ಹುಟ್ಟಿದವಳೇಹೊರತು,ಸಾಮಾನ್ಯಸ್ತ್ರೀಯಲ್ಲ ; ಇವಳ ಸೌಂದರ್ಯವು ಆಭರಣಕ್ಕೂ ಆಭರಣದಂತಿರುವುದು. ಇವಳ ಸ್ವಭಾವವು ಸದ್ಗುಣಗಳಿಗೂ ಗುಣವನ್ನು ಹೆಚ್ಚಿಸುವುದು. ಇ

ವಳು ಅರ್ಚಿಯೆಂಬ ಹೆಸರಿನಿಂದ ಪ್ರಸಿದ್ಧಳಾಗುವಳು. ತನ್ನ ಗುಣಸ್ವಭಾವ ಗಳಿಂದ ಆ ಪೃಥುಚಕ್ರವರ್ತಿಯನ್ನು ಸರ್ವವಿಧದಲ್ಲಿಯೂ ಅನುವರ್ತಿಸಿ ನಡೆಯುವಳು. ಈ ಸ್ತ್ರೀಪುರುಷರಿಬ್ಬರೂ ಲೋಕರಕ್ಷಣಾರ್ಥವಾಗಿ ಲಕ್ಷ್ಮೀ ನಾರಾಯಣರ ಅಂಶದಿಂದಲೇ ಅವತರಿಸಿರುವರು." ಎಂದರು. ಹೀಗೆ ಭೃಗು ಮೊದಲಾದ ಮಹರ್ಷಿಗಳೆಲ್ಲರೂ ಸ್ತೋತ್ರಮಾಡುವಕಾಲದಲ್ಲಿಯೇ, ಆ ಕಾಶದಲ್ಲಿ ಗಂಧರ್ವರು ಸಂತೋಷದಿಂದ ಗಾನಮಾಡುತಲಿದ್ದರು. ಸಿದ್ಧ ರು ಆಕಾಶದಿಂದ ಪುಷ್ಪವರ್ಷವನ್ನು ಕರೆದರು, ಅಪ್ಸರಸ್ತ್ರೀಯರು ನರ್ತನ ಮಾಡುತಿದ್ದರು. ಮತ್ತು ಆಕಾಶದಲ್ಲಿ ದೇವದುಂದುಭಿಗಳೂ, ಶಂಖ, ತೂ ರ್ಯ, ಮೃದಂಗಗಳೇ ಮೊದಲಾದ ಮಂಗಳವಾದ್ಯಗಳೂ ಮೊಳಗುತಿದ್ದು ವು. ಈ ಪೃಥುಚಕ್ರವರ್ತಿಯ ಜನ್ಮವೃತ್ತಾಂತವನ್ನು ಕೇಳಿದೊಡನೆ ಅಲ್ಲ ಲ್ಲಿಂದ ದೇವತೆಗಳೂ, ಋಷಿಗಳೂ, ಪಿತೃಗಳೂ, ಗುಂಪುಗುಂಪಾಗಿ ಬಂದು ಆ ಸ್ಥಳದಲ್ಲಿ ಸೇರಿದರು. ಜಗದ್ಗುರುವೆನಿಸಿದ ಚತುರ್ಮುಖನೂಕೂಡ, ಇಂ ದ್ರಾದಿಲೋಕಪಾಲಕರೊಡನೆ, ವೇನಪುತ್ರನಾದ ಆ ಪೃಥುಚಕ್ರವರ್ತಿ ಯ ದರ್ಶನಾರ್ಥವಾಗಿ ಈ ಸ್ಥಳಕ್ಕೆ ಹೊರಟುಬಂದನು. ಹೀಗೆ ಚತುರ್ಮು ಖನು ಆ ಪೃಥುವಿನ ದಿವ್ಯಾಕೃತಿಯನ್ನು ನೋಡುವಾಗ, ಅವನ ಬಲಗೈಯ್ಯ ಲ್ಲಿ ಮಹಾವಿಷ್ಣುವಿಗೆ ಚಿಹ್ನವಾದ ಚಕ್ರರೇಖೆಯನ್ನೂ, ಅವನ ಪಾದಗ ಳಲ್ಲಿ ಪದ್ಮರೇಖೆಯನ್ನೂ ಕಂಡು, "ಇವನು ಆ ಶ್ರೀಮನ್ನಾರಾಯಣನ ಅಂ ಶದಿಂದಲೇ ಅವತರಿಸಿದವನು" ಎಂದು ನಿಶ್ಚೈಸಿದನು. ಬೇರೆ ರೇಖೆಗಳ ಸಂಬಂಧವಿಲ್ಲದೆ ವ್ಯಕ್ತವಾಗಿ ಕಾಣುತ್ತಿರುವ ಚಕ್ರರೇಖೆಯಿಂದ, ಆ ಪೃಥು ವು ಭಗವದಂಶವೆಂಬುದನ್ನು ತಿಳಿದು,ಅಲ್ಲಿದ್ದ ಬ್ರಾಹ್ಮಣರೆಲ್ಲರೂ ಬ್ರಹ್ಮನ ನ್ನು ಮುಂದಿಟ್ಟುಕೊಂಡು ಅವನಿಗೆ ರಾಜ್ಯಾಭಿಷೇಕವನ್ನು ನಡೆಸಬೇಕೆಂದು ಯತ್ನಿಸಿದರು.ಜನರು ನಾನಾದಿಕ್ಕುಗಳಿಂದಲೂ ಅಭಿಷೇಕಸಾಮಗ್ರಿಗಳನ್ನು ಸಂಗ್ರಹಿಸಿ ತಂದರು. ನದಿಗಳೂ, ಸಮುದ್ರಗಳೂ, ಪರ್ವತಗಳೂ, ನಾಗ ರೂ,ಗೋವುಗಳೂ,ಪಕ್ಷಿಗಳೂ,ಮೃಗಗಳೂ,ಭೂಮ್ಯಾಕಾಶಗಳೂ, ಇನ್ನೂ ಇತರ ಸಮಸ್ತಭೂತಗಳೂ ಅತ್ಯುತ್ಸಾಹದಿಂದ ಈ ಪೃಥುವಿನ ಅಭಿಷೇಕ ಮಹೋತ್ಸವಕ್ಕಾಗಿ,ಕೈಕಾಣಿಕೆಗಳನ್ನು ಸಂಗ್ರಹಿಸಿ ತರುತ್ತಿದ್ದವು. ಹೀಗೆ

ಋಷಿಗಳೆಲ್ಲರೂ ಸೇರಿ ಮಹಾವೈಭವದಿಂದ ಆ ಪೃಥುವಿಗೆ ರಾಜ್ಯಾಭಿಷೇಕ ವನ್ನು ನಡೆಸಿದರು. ಪೃಥುಚಕ್ರವರ್ತಿಯು ಪಟ್ಟಾಭಿಷಿಕ್ತನಾದಮೇಲೆ, ವಸ್ತ್ರಾಲಂಕಾರಗಳಿಂದ ಭೂಷಿತನಾಗಿ,ಜ್ವಾಲೆಯೊಡಗೂಡಿದ ಅಗ್ನಿಯಂತೆ, ಅರ್ಚಿಯೆಂಬ ತನ್ನ ಪತ್ನಿಯೊಡಗೂಡಿ ಪ್ರಕಾಶಿಸುತ್ತಿದ್ದನು. ರಾಜ್ಯಾಭಿಷಿಕ್ತನಾದ ಆ ಪೃಥುವಿಗೆ,ಕುಬೇರನು ಸುವರ್ಣಮಯವಾದ ಒಂದು ಸಿಂಹಾಸನ ವನ್ನು ತಂದು ಸಮರ್ಪಿಸಿದನು. ವರುಣನು ಶೀತಲಜಲವನ್ನು ತೊಟ್ಟಿಕ್ಕುತ್ತಿರುವ ಚಂದ್ರಬಿಂಬಸಮಾನವಾದ ಶ್ವೇತಚ್ಛತ್ರವನ್ನು ತಂದೊಪ್ಪಿಸಿದನು.ವಾಯುದೇವನು ಎರಡು ಚಾಮರಗಳನ್ನೂ,ಧರ್ಮಪುರುಷನು ಕೀರ್ತಿಮಯವಾದ ಪುಷ್ಪಮಾಲಿಕೆಯನ್ನೂ, ದೇವೇಂದ್ರನು ರತ್ನಕಿರೀಟವನ್ನೂ, ಯಮನು ದುಷ್ಟನಿಗ್ರಹಾರ್ಥವಾದ ಒಂದುದಂಡವನ್ನೂ, ಬ್ರಹ್ಮನು ವೇದಮಯವಾದ ಒಂದು ಕವಚವನ್ನೂ,ಸರಸ್ವತೀದೇವಿಯು ಮುತ್ತಿನ ಹಾರವನ್ನೂ, ತಂದೊಪ್ಪಿಸಿದರು. ಶ್ರೀಮಹಾವಿಷ್ಣುವು ಸುದರ್ಶನಾಂಶದಿಂದ ಹುಟ್ಟಿದ ಒಂದು ಚಕ್ರವನ್ನು ತಂದುಕೊಟ್ಟನು. ಲಕ್ಷ್ಮೀದೇವಿಯು ಶಾಶ್ವತವಾದ ಸಂಪತ್ಸಮೃದ್ಧಿಯನ್ನು ಅನುಗ್ರಹಿಸಿದಳು. ರುದ್ರನು ಚಂದ್ರಾಕಾರವಾದ ಹತ್ತು ರೇಖೆಗಳಿಂದ ಪ್ರಕಾಶಿಸುವ ಒಂದಾನೊಂದು ಖಡ್ಗವನ್ನು ತಂದುಕೊಟ್ಟನು. ರುದ್ರಪತ್ನಿಯಾದ ಅಂಬಿಕೆಯು, ನೂರು ಚಂದ್ರಬಿಂಬರೇಖೆಯುಳ್ಳ ಮತ್ತೊಂದು ಖಡ್ಗವನ್ನು ಕೊಟ್ಟಳು.ಚಂದ್ರನು ಅಮೃತಮಯಗಳಾದ ಕುದುರೆಗಳನ್ನೂ, ದೇವಶಿಲ್ಪಿಯಾದ ತ್ವಷ್ಟನು ರಥವನ್ನೂ, ಅಗ್ನಿಯು ಆಜಗವವೆಂಬದೃಢವಾದ ಒಂದುಧನುಸ್ಸನ್ನೂ,ಸೂರ್ಯನುಕಿರಣಮಯವಾದ ಬಾಣಗಳನ್ನೂ, ಭೂದೇವಿಯು ಯೋಗಮಯಗಳಾದ ಎರಡುಪಾದುಕೆಗಳನ್ನೂ,ಆಕಾಶವು, ಪ್ರತಿದಿನದ ಪೂಜೆಗೆ ಬೇಕಾದ ಪುಷ್ಪಗಳನ್ನೂ,ಕ್ರಮವಾಗಿ ತಂದೊಪ್ಪಿಸಿದರು. ಸಿದ್ಧ,ಸಾಧ್ಯ, ಗಂಧರ್ವರೇಮೊದಲಾದ ಖೇಚರರೆಲ್ಲರೂ ನಾಟ್ಯಸಾಮಗ್ರಿಗಳನ್ನೂ ಗಾನಸಾಮಗ್ರಿಗಳನ್ನೂ,ಇತರವಾದ್ಯಗಳನ್ನೂ ಅಂತರ್ಧಾನಶಕ್ತಿಯನ್ನೂ ಅನುಗ್ರಹಿಸಿಕೊಟ್ಟರು.ಋಷಿಗಳು ಅವೋಘವಾದಆಶೀರ್ವಾದಗಳನ್ನು ನಡೆಸುತ್ತಿದ್ದರು. ಸಮುದ್ರರಾಜನು ತನ್ನಲ್ಲಿ ಹುಟ್ಟಿದ ಉತ್ತಮವಾದ ಶಂಖವನ್ನು ತಂದೊಪ್ಪಿಸಿದನು. ನದನದೀ ಪರ್ವತಗಳೆಲ್ಲವೂ ಮ

ಹಾತ್ಮನಾದ ಆ ಪೃಥುವಿಗೆ ತಮ್ಮಲ್ಲಿ ತಡೆಯಿಲ್ಲದ ರಥಮಾರ್ಗಗಳನ್ನು ಕಲ್ಪಿಸಿಕೊಟ್ಟುವು. ಹೀಗೆ ಸಮಸ್ತದಿಕ್ಪಾಲಕರೂ, ಇತರಭೂತಗಳೂ ತಮತಮಗೆ ತೋರಿದಂತೆ ಕಾಣಿಕೆಗಳನ್ನು ತಂದೊಪ್ಪಿಸಿದಮೇಲೆ, ವಂದಿ, ಮಾಗಧ, ಸೂತರೆಂಬ ಹೊಗಳುಭಟರೆಲ್ಲರೂ ಅವನನ್ನು ನಾನಾವಿಧವಾದ ಸ್ತುತಿವಾಕ್ಯಗಳಿಂದ ಸಂತೋಷಗೊಳಿಸತೊಡಗಿದರು.ವೇನಪುತ್ರನಾಗಿಯೂವೀರ್ಯವಂತನಾಗಿಯೂ ಇರುವ ಪೃಥುಚಕ್ರವರ್ತಿಯು, ಹೀಗೆ ಸ್ತೋತ್ರಮಾಡುತ್ತಿರುವ ಆ ಹೊಗಳುಭಟರನ್ನು ನೋಡಿ, ಮುಖದಲ್ಲಿ ಮಂದಹಾಸದೊಡನೆ, ಮೇಘಗಂಭೀರವಾದ ಧ್ವನಿಯಿಂದ ಹೀಗೆಂದು ಹೇಳುವನು "ಎಲೈ ವಂದಿಗಳೆ ! ನಾನು ಈಗಲೇ ಈ ರಾಜ್ಯಭಾರವನ್ನು ವಹಿಸಿರುವೆನು. ನನ್ನ ಗುಣಾವಗುಣಗಳೊಂದೂ ಈಗಾಗಲೇ ನಿಮಗೆ ತಿಳಿಯುವುದಕ್ಕೆ ಅವಕಾಶವಿಲ್ಲ. ಇದುವರೆಗೆ ನಾನು ಯಾವ ರಾಜಕಾರ್ಯವನ್ನೂ ನಡೆಸಿದವನಲ್ಲ. ಹೀಗಿರುವಾಗಲೂ ನೀವು ಯಾವ ಗುಣವನ್ನು ಕಂಡು ನನ್ನನ್ನು ಸ್ತೋತ್ರಮಾಡುವಿರಿ? ನಿಮ್ಮ ಸ್ತೋತ್ರಕ್ಕೆ ನಾನು ಹೇಗೆತಾನೇ ಅರ್ಹನಾಗುವೆನು. ಲೋಕದಲ್ಲಿ ಸ್ಪಷ್ಟವಾಗಿ ತೋರಿಬಂದ ಗುಣಗಳೇ ಸ್ತೋತ್ರಾರ್ಹಗಳಾಗುವವೇ ಹೊರತು, ಹೊರಗೆ ಕಾಣದ ಗುಣಗಳನ್ನು ಸ್ತುತಿಸುವುದು ಯುಕ್ತವಲ್ಲ. ಅಂತಹ ಸ್ತುತಿವಾಕ್ಯಗಳೆಲ್ಲವೂ ನಿರರ್ಥಕಗಳೆನಿಸುವವು.ಆದುದರಿಂದ ನನ್ನಲ್ಲಿರುವ ಗುಣಾವಗುಣಗಳನ್ನು ತಿಳಿಯುವುದಕ್ಕೆ ಮೊದಲೇ ನೀವು ಹೀಗೆ ನನ್ನ ಮುಂದೆ ನಿಂತು ಸ್ತೋತ್ರಮಾಡುವುದು ಯುಕ್ತವಲ್ಲ. ಇಲ್ಲದ ಗುಣಗಳನ್ನು ಹೇಳುವುದರಿಂದ, ನಿಮ್ಮ ಮಾತು ಸುಳ್ಳಾಗಬಹುದಲ್ಲದೆ, ಅದರಿಂದ ನಾನೂ ಲೋಕದಲ್ಲಿ ಹಾಸ್ಯಾಸ್ಪದನಾಗುವೆನು. ಆದುದರಿಂದ ನೀವು ಇನ್ನೂ ಕೆಲವು ಕಾಲದವರೆಗೆ ನಿರೀಕ್ಷಿಸುತಿದ್ದು,ನನ್ನಲ್ಲಿರುವ ಅಲ್ಪಸ್ವಲ್ಪಗುಣಗಳಾದರೂ ಹೊರಕ್ಕೆ ಬಂದಮೇಲೆ,ಯಥೇಷ್ಟವಾಗಿ ನನ್ನ ಕೀರ್ತಿಯನ್ನೂ ,ಗುಣಗಳನ್ನೂ ಕೊಂಡಾಡಬಹುದು. ಎಲೈ ಸೂತರೆ!ನಿಮ್ಮ ವಾಙ್ಮಾಧುರ್ಯಕ್ಕಾಗಿ ನಾನು ಬಹಳಸಂತೋಷಪಟ್ಟೆನು. ಯಾವಾಗಲೂ ಪ್ರಶಸ್ತಕೀರ್ತಿಯುಳ್ಳ ಭಗವಂತನಗುಣಗಳನ್ನು ಅನುವಾದಮಾಡುತ್ತಿರಬೇಕಾದುದೇ ಸಾಧುಗಳ ಸ್ವಭಾವವು.ಅಂತಹ ಭಗವದ್ಗುಣಗಳನ್ನು ಬಿಟ್ಟು ನ

ನ್ನಂತವರನ್ನು ಸ್ತುತಿಸುವವಿಷಯದಲ್ಲಿ ತತ್ವಜ್ಞರಾದ ಈ ಸಭ್ಯರೂ ಸಮ್ಮತಿಸಲಾರರು. "ಪ್ರಕೃತದಲ್ಲಿ ಯಾವ ಗುಣಗಳೂ ಸ್ಪಷ್ಟವಾಗಿ ಕಾಣದಿದ್ದರೂ, ಮುಂದೆ ಕಾಣಬಹುದಾದ ಗುಣಗಳನ್ನಾದರೂ ಈಗಲೇ ಸೂಚಿಸಬಾರದೆ" ಎಂದು ನೀವು ಕೇಳಬಹುದು.ಅದೂ ಯುಕ್ತವಲ್ಲ ! ಲೋಕದಲ್ಲಿ ಯಾವನಾದರೂ ಒಬ್ಬ ಮನುಷ್ಯನು, ಮುಂದೆ ಕಾಲಕ್ರಮವಾಗಿ, ಭಗವದನುಗ್ರಹದಿಂದ, ಮಹಾತ್ಮರ ಗುಣಗಳನ್ನು ತನ್ನಲ್ಲಿ ಸಂಪಾದಿಸಬಲ್ಲವನಾಗಿದ್ದರೂ, ಅದಕ್ಕೆ ಮೊದಲೇ ಬೇರೆಯವರಿಂದ ಆ ಗುಣಗಳನ್ನು ಹೊಗಳಿಸಿಕೊಂಡರೆ, ಅವನನ್ನು ಬುದ್ಧಿಯಿಲ್ಲದವನೆಂದೇ ಹೇಳಬೇಕು. ಅಂತವನು ಮುಂದೆ ತಾನು ಜನಗಳಲ್ಲಿ ಅಪಹಾಸ್ಯಕ್ಕೆ ಗುರಿಯಾಗುವುದನ್ನು ತಿಳಿಯದೆ ಮೋಸಹೋಗುವನು.ವಿವೇಕಿಗಳಾದರೋ ತಾವು ಎಣೆಯಿಲ್ಲದ ಔದಾರ್ಯಾದಿಗುಣಗಳಿಂದ ಪ್ರಸಿದ್ಧರಾಗಿದ್ದರೂ,ಮುಂದೆ ಇನ್ನೂ ಅನೇಕಸದ್ಗುಣಗಳನ್ನು ಸಂಪಾದಿಸಬಲ್ಲವರಾಗಿದ್ದರೂ,ಆತ್ಮಸ್ತುತಿಯನ್ನು ಕೇಳುವವಿಷಯದಲ್ಲಿ ನಾಚಿಕೆಯಿಂದ ಜುಗುಪ್ಸೆಪಡುವರು. ತಮ್ಮಲ್ಲಿ ಸ್ಪಷ್ಟವಾಗಿ ಕಂಡುಬಂದ ಪೌರುಷವನ್ನು ಹೊಗಳಿಸಿಕೊಳ್ಳುವುದಕ್ಕೂ ಇಷ್ಟಪಡಲಾರರು. ಆದುದರಿಂದ ಎಲೈ ಮಾಗಧರೆ!ನಾನು ಈಗಲೇ ರಾಜ್ಯಕ್ಕೆ ಬಂದವನು. ಇನ್ನೂ ನನ್ನಹೆಸರೇ ಲೋಕದಲ್ಲಿ ಯಾರಿಗೂ ತಿಳಿಯದು. ಯಶಸ್ಸಿಗೆ ಕಾರಣವಾದ ಯಾವ ಕಾರ್ಯವನ್ನೂ ಮಾಡಿದವನಲ್ಲ.ಹೀಗಿರುವಾಗ ಮುಖಸ್ತುತಿಗೆ ಸಂತೋಷಪಟ್ಟು ಹಿಗ್ಗುವ ಅರಿಯದ ಮಕ್ಕಳಂತೆ, ನಿಮ್ಮಿಂದ ಹೇಗೆತಾನೇ ಸ್ತೋತ್ರಮಾಡಿಸಿಕೊಳ್ಳಲಿ! ಈಗಾಗಲೇ ನಾನು ಇಷ್ಟೊಂದು ಪ್ರಶಂಸೆಗೆ ಪಾತ್ರನಲ್ಲ!" ಎಂದನು. ಇಲ್ಲಿಗೆ ಹದಿನಾಲ್ಕನೆಯ ಅಧ್ಯಾಯವು.

---

(ಗಂಭೀರಸ್ವಭಾವವುಳ್ಳ ಪೃಥುವಿನಿಂದ ನಿವಾರಿಸಲ್ಪಟ್ಟರೂ, ಸ್ತುತಿಪಾಠಕರು, ಮಹರ್ಷಿಗಳ ಪ್ರೇರಣೆಯಿಂದ ಅವನ ಗುಣಗಳನ್ನು ಕೊಂಡಾಡುತಿದ್ದುದು.)

ವಿದುರಾ ಕೇಳು ! ಪೃಥುಚಕ್ರವರ್ತಿಯು ಹೇಳಿದ ಅಮೃತಸಮಾನವಾದ ಈ ವಾಕ್ಯವನ್ನು ಕೇಳಿ, ಆ ಸ್ತುತಿಪಾಠಕರಿಗೆ ಮತ್ತಷ್ಟು ಸಂತೋಷವುಂಟಾಯಿತು. ಪೃಥುವು ತಮ್ಮನ್ನು ನಿವಾರಿಸುತ್ತಿದ್ದರೂ ಬಿಡದೆ, ಅವರು

ಮಹರ್ಷಿಗಳ ಪ್ರೇರಣೆಯಿಂದ ತಿರುಗಿ ಸ್ತುತಿಸುವುದಕ್ಕೆ ತೊಡಗಿದರು, “ಓ ಮಹಾತ್ಮಾ! ನಿನ್ನ ಮಹಾಮಹಿಮೆಯನ್ನೆಲ್ಲಾ ವರ್ಣಿಸುವುದಕ್ಕೆ ನಾವು ಸಮರ್ಥರಲ್ಲ. ದೇವದೇವನಾದ ನೀನು ನಿನ್ನ ಸಂಕಲ್ಪರೂಪವಾದ ಮಾಯೆಯಿಂದ ಭೂಲೋಕದಲ್ಲಿ ಈ ರೂಪದಿಂದವತರಿಸಿರುವೆ! ದುರಾತ್ಮನಾದ ವೇನನ ಶರೀರದಲ್ಲಿ ಹುಟ್ಟಿದ್ದರೂ, ನೀನು ದೇವಾಂಶಸಂಭೂತನಾದುದರಿಂದ ಅನಂತಕಲ್ಯಾಣಗುಣಪರಿಪೂರ್ಣನಾದ ನಿನ್ನ ಪೌರುಷಗಳನ್ನು ವರ್ಣಿಸುವಾಗ, ವಾಕ್ಪತಿಯೆನಿಸಿದ ಬ್ರಹ್ಮಾದಿಗಳೇ ಬುದ್ಧಿಭ್ರಮವನ್ನು ಹೊಂದುವರು. ಇನ್ನು ನಮ್ಮಂತವರ ಪಾಡೇನು ? ಹಾಗಿದ್ದರೂ ಭಗವದಂಶದಿಂದ ಅವತರಿಸಿರತಕ್ಕ ನಿನ್ನ ಮುಂದಿನ ಚರಿತ್ರವನ್ನು ಲೋಕಕ್ಕೆ ತಿಳಿಸಬೇಕೆಂಬ ಕುತೂಹಲವು ನಮಗೆ ಬಹಳವಾಗಿರುವುದರಿಂದಲೂ, ಈ ಮಹರ್ಷಿಗಳು ನಮ್ಮನ್ನು ಪ್ರೋತ್ಸಾಹಿಸುತ್ತಿರುವುದರಿಂದಲೂ ನಾವು ನಿನ್ನ ಶ್ಲಾಘ್ಯಕರ್ಮಗಳನ್ನು ನಮ್ಮಿಂದಾದಮಟ್ಟಿಗೆ ವರ್ಣಿಸುವೆವು ” ಎಂದು ಹೇಳಿ, ಆತನ ಮುಂದಿನ ಚರಿತ್ರಗಳನ್ನು ಆ ಸಭೆಯಲ್ಲಿ ವಿವರಿಸತೊಡಗಿದರು.

ಭಗವಂತನೇ ಈ ಪೃಥುರೂಪದಿಂದವತರಿಸಿ, ತಾನಾಗಿ ವರ್ಣಾಶ್ರಮಧರ್ಮಗಳನ್ನನುಷ್ಠಿಸಿ ತೋರಿಸುವುದರಿಂದ ಇತರ ಸಮಸ್ತಪ್ರಜೆಗಳನ್ನೂ ಧರ್ಮಾಚರಣೆಯಲ್ಲಿ ಪ್ರವರ್ತಿಸುವಹಾಗೆ ಮಾಡುವನು. ಮತ್ತು ಧರ್ಮವಿರೋಧಿಗಳನ್ನು ನಿಗ್ರಹಿಸಿ ಧರ್ಮಮರ್ಯಾದೆಯನ್ನು ರಕ್ಷಿಸುವನು. ಹೀಗೆ ನಿಜಾನುಷ್ಠಾನದಿಂದಲೂ, ಆಜ್ಞಾಬಲದಿಂದಲೂ ಇವನು ಇತರ ಪ್ರಜೆಗಳೆಲ್ಲರನ್ನೂ ಧರ್ಮಾನುಷ್ಠಾನದಲ್ಲಿ ನೆಲೆಗೊಳಿಸುವನು. ಇಷ್ಟೇ ಹೊರತು ಇವನಿಗೆ ಆ ಧರ್ಮಾನುಷ್ಠಾನದಿಂದ ಪಡೆಯಬೇಕಾದ ಬೇರೊಂದು ಪ್ರಯೋಜನವಿಲ್ಲ. ಇವನೊಬ್ಬನೇ ಇಂದ್ರಾದಿ ಸಮಸ್ತಲೋಕಪಾಲಕರ ಅಂಶವನ್ನೂ ತನ್ನ ದೇಹದಲ್ಲಿ ಧರಿಸಿ, ಆಯಾ ಕಾಲಗಳಲ್ಲಿ ಆಯಾ ಅಂಶದಿಂದ ಬೇರೆಬೇರೆಯಾಗಿ ಇಹಪರಲೋಕಗಳೆರಡಕ್ಕೂ ಹಿತವಾದ ಕಾರ್ಯಗಳನ್ನು ನಡೆಸುವನು. ಪಾಲನಪೋಷಣಾದಿಗಳಿಂದ ಈ ಲೋಕದವರಿಗೂ, ಯಜ್ಞಾದಿಗಳಿಂದ ಸ್ವರ್ಗಾದಿಲೋಕದವರಿಗೂ ಕ್ಷೇಮವನ್ನುಂಟುಮಾಡುವನು. ಸೂರ್ಯನು ಒಂದೊಂದು ವರ್ಷದಲ್ಲಿಯೂ ಎಂಟುತಿಂ

ಗಳ ಕಾಲದವರೆಗೆ ಬಿಸಿಲನ್ನು ಕಾದು, ಅದರ ಉಷ್ಣದಿಂದ ಭೂಮಿಯಲ್ಲಿ ರುವ ನೀರನ್ನೆಳೆದು, ಮಳೆಗಾಲದಲ್ಲಿ ಅದನ್ನು ತಿರುಗಿ ಭೂಮಿಯಮೇಲೆಯೇ ವರ್ಷಿಸಿ, ಜನಗಳಿಗೆ ಜೀವನಾಧಾರವನ್ನು ಕಲ್ಪಿಸುವಂತೆ, ಇವನೂ, ಕಾಲೋಚಿತವಾಗಿ ಪ್ರಜೆಗಳಿಂದ ತೆರಿಗೆಯನ್ನು ತೆಗೆದು, ಉಚಿತಕಾಲದಲ್ಲಿ ಅದನ್ನು ಪ್ರಜಾರಕ್ಷಣಕ್ಕಾಗಿಯೇ ಉಪಯೋಗಿಸುವನು. ಸಮಸ್ತಭೂತಗಳಲ್ಲಿಯೂ ಸಮಬುದ್ಧಿಯಿಂದ ವರ್ತಿಸುವನು. ಇದರಿಂದ ಸರ್ವಸಾಕ್ಷಿಯಾದ ಸೂರ್ಯದೇವನ ಅಂಶವು ಇವನಲ್ಲಿ ಸ್ಪಷ್ಟವಾಗುವುದು. ಪ್ರಾಣಿಗಳು ಕಾಲಿಂದ ಮೆಟ್ಟಿದರೂ ತಾಳ್ಮೆಯಿಂದ ತಡೆದುಕೊಳ್ಳುವ ಭೂದೇವಿಯಂತೆ, ಇವನೂ ಕೂಡ, ಪ್ರಜೆಗಳು ಅಕ್ರಮದಿಂದ ಮೇಲೆಬಿದ್ದು ಬಂದರೂ, ದೀನರಾದ ಆ ಪ್ರಜೆಗಳಲ್ಲಿ ಸಹನಗುಣವನ್ನೇ ತೋರಿಸಿ ಅವರಿಗೆ ಕ್ಷೇಮವನ್ನು ಕೋರುವನು. ಇದರಿಂದ ಸರ್ವಂಸಹೆಯೆನಿಸಿಕೊಂಡ ಭೂದೇವಿಯ ಅಂಶವು ಇವನಲ್ಲಿ ವ್ಯಕ್ತವಾಗುವುದು. ಲೋಕದಲ್ಲಿ ಮಳೆಯಿಲ್ಲದೆ ಪ್ರಾಣಿಗಳಿಗೆ ಪ್ರಾಣಾಪಾಯವುಂಟಾದಾಗ, ಇಂದ್ರನಂತೆ ಮಳೆಯನ್ನು ಸುರಿಸಿ ಪ್ರಾಣಿಗಳನ್ನು ಕಾಪಾಡುವನು. ಇದರಿಂದ ಇವನಲ್ಲಿ ಇಂದ್ರಾಂಶವು ಸ್ಪಷ್ಟವಾಗುವುದು. ಪ್ರೇಮಪೂರ್ವಕವಾದ ಪ್ರಸನ್ನದೃಷ್ಟಿಯಿಂದಲೂ, ಮನೋಹರವಾದ ಮಂದಹಾಸದಿಂದಲೂ ಕೂಡಿದ ಮುಖಚಂದ್ರದಿಂದಲೇ, ಇವನು ಸಮಸ್ತಲೋಕಕ್ಕೂ ಆಪ್ಯಾಯನವನ್ನುಂಟುಮಾಡುವುದರಿಂದ ಚಂದ್ರಾಂಶವು ಇವನಲ್ಲಿ ಸ್ಪಷ್ಟವಾಗುವುದು. ಇವನು ಹೋಗತಕ್ಕ ದಾರಿಯನ್ನಾಗಲಿ, ಇವನು ನಡೆಸತಕ್ಕ ಕಾರ್ಯವನ್ನಾಗಲಿ, ಇವನ ಅಭಿಪ್ರಾಯಗಳನ್ನಾಗಲಿ ಯಾರೂ ಕಾಣಲಾರರು. ಇವನು ಧನವನ್ನು ತನ್ನಲ್ಲಿ ಸುರಕ್ಷಿತವಾಗಿ ಬಚ್ಚಿಟ್ಟು, ಅದರಿಂದ ಆಪತ್ಕಾಲದಲ್ಲಿ ಪ್ರಜೆಗಳನ್ನು ಕಾಪಾಡುವನು. ಮತ್ತು ಎಲ್ಲೆಯಿಲ್ಲದ ಮಹಾಮಹಿಮೆಯುಳ್ಳವನಾಗಿ, ಸಮಸ್ತಗುಣಗಳಿಗೂ ಮುಖ್ಯಸ್ಥಾನವೆನಿಸಿಕೊಂಡು, ಗಂಭೀರಸ್ವಭಾವವುಳ್ಳವನಾದುದರಿಂದ, ಸಮುದ್ರಾಧಿಪತಿಯಾದ ವರುಣನ ಅಂಶಗಳೆಲ್ಲವೂ ಇವನಲ್ಲಿ ವ್ಯಕ್ತವಾಗುವುದು. ಈತನ ಪ್ರತಾಪವು ಸಹಿಸಲಸಾಧ್ಯವಾದುದರಿಂದ, ಸಮೀಪದಲ್ಲಿದ್ದರೂ ಶತ್ರುಗಳು ಇವನ ತೇಜಸ್ಸನ್ನು ಸಹಿಸಲಾರದೆ ದೂರದಲ್ಲಿರುವಂತೆ

ಯೇ ತಿಳಿದು, ಮನಸ್ಸಿನಿಂದಲಾದರೂ ಇವನಿಗೆ ಕೇಡನ್ನು ಬಯಸುವುದ ಕ್ಕೆ ಹೆದರುವರು. ಹೀಗೆ ವೇನಶರೀರವೆಂಬ ಅರಣಿಯಿಂದ ಹುಟ್ಟಿದ ಬೆಂಕಿ ಯಂತೆ, ಈತನ ತೇಜಸ್ಸು ಶತ್ರುದುಸ್ಸಹವಾಗುವುದರಿಂದ, ಅಗ್ನ್ಯಂಶ ವೂ ಇವನಲ್ಲಿ ಕಾಣುತ್ತಿರುವುದು. ಇತರಪ್ರಾಣಿಗಳು ಅಂತರಂಗದಲ್ಲಿಯಾ ಗಲಿ. ಬಹಿರಂಗದಲ್ಲಿಯಾಗಲಿ ನಡೆಸತಕ್ಕ ಕಾರ್ಯಗಳನ್ನು ಇವನು, ಚಾರರ ಮೂಲಕವಾಗಿ ಚೆನ್ನಾಗಿ ತಿಳಿದು, ಶಿಕ್ಷೆರಕ್ಷೆಗಳಿಂದ ಅವರನ್ನು ಕಾಪಾಡು ವನು. ಆ ಪ್ರಜೆಗಳ ಸ್ತೋತ್ರಕ್ಕಾಗಲಿ, ನಿಂದೆಗಾಗಲಿ ಕಿವಿಗೊಡದೆ ಉ ದಾಸೀನನಾಗಿಯೇ ಇರುವನು. ದೇಹದಲ್ಲಿ ಸೇರಿರುವ ಪ್ರಾಣವಾಯುವಿ ನಂತೆ ಅವರ ದೇಹಧಾರಣವನ್ನು ತಾನು ಮಾಡುವುದರಿಂದ ವಾಯು ವಿನ ಅಂಶವೂ ಇವನಲ್ಲಿ ಸ್ಪಷ್ಟವಾಗುವುದು. ಶತ್ರುವಿನ ಮಗನ ನ್ನಾದರೂ ತಪ್ಪಿಲ್ಲದೆ ದಂಡಿಸಲಾರನು. ತಪ್ಪನ್ನು ಕಂಡರೆ ಹೊಟ್ಟೆ ಯಲ್ಲಿ ಹುಟ್ಟಿದ ಮಗನನ್ನಾದರೂ ದಂಡಿಸುವನು. ಹೀಗೆ ಸಮವರ್ತಿಯಾ ಗಿರುವುದರಿಂದ, ಇವನಲ್ಲಿ ಧರ್ಮದೇವನಾದ ಯಮನ ಅಂಶವು ವ್ಯಕ್ತವಾ ಗುವುದು. ಸೂರ್ಯನು ಎಲ್ಲಿಯವರೆಗೆ ತನ್ನ ಕಿರಣವನ್ನು ಪ್ರಸರಿಸುವ ನೋ, ಅಂತಹ ಮಾನಸಪರ್ವತದವರೆಗೂ ಇವನ ಆಜ್ಞೆಗಾಗಲಿ, ಇವನ ರಥಚಕ್ರಕ್ಕಾಗಲಿ ತಡೆಯಿಲ್ಲ. ಇವನು ತನ್ನ ಕಾರ್ಯಗಳಿಂದಲೂ, ಗುಣಗ ಳಿಂದಲೂ ಲೋಕರಂಜಕನಾಗಿ, ಪ್ರಜೆಗಳಿಂದ ರಾಜನೆಂದು ಕೀರ್ತಿಸಲ್ಪಡು ವನು. ಇವನ ಉದ್ದೇಶಕ್ಕೆ ಎಂದಿಗೂ ಭಂಗವಿರುವುದಿಲ್ಲ. ಯಾವಾಗಲೂ ಇ ವನ ಬಾಯಿಂದ ಅಸತ್ಯವೆಂಬುದು ಹೊರಡುವುದಿಲ್ಲ. ಇವನುಬ್ರಾಹ್ಮಣಪ್ರಿ ಯನಾಗಿಯೂ,ಗುರುಹಿರಿಯರನ್ನು ಸೇವಿಸತಕ್ಕವನಾಗಿಯೂ,ಸಮಸ್ತಭೂ ತಗಳಿಗೂ ರಕ್ಷಕನಾಗಿಯೂ,ಪೂಜ್ಯರನ್ನು ಪೂಜಿಸತಕ್ಕವನಾಗಿಯೂ, ದೀನ ವತ್ಸಲನಾಗಿಯೂ ಇದ್ದು ಲೋಕವನ್ನು ರಕ್ಷಿಸತಕ್ಕವನು. ಪರಸ್ತ್ರೀಯ ರನ್ನು ತಾಯಿಯಂತೆ ಭಕ್ತಿಯಿಂದ ಭಾವಿಸುವನು. ಪತ್ನಿಯನ್ನು ತನಗೆ ಅ ರ್ಧಶರೀರದಂತೆ ನೋಡುವನು. ಪ್ರಜೆಗಳನ್ನು ಪುತ್ರವಾತ್ಸಲ್ಯದಿಂದ ಭಾವಿ ಸುವನು. ಬ್ರಹ್ಮವಾದಿಗಳಿಗೆ ಕಿಂಕರನಂತೆ ವಿಧೇಯನಾಗಿ ವರ್ತಿಸುವನು. ಪ್ರಾಣಿಗಳಿಗೆ ಆತ್ಮದಂತೆ ಪ್ರಿಯನಾದವನು. ಮಿತ್ರರಿಗೆ ಚಂದ್ರನಂತೆ ಉ

ಲ್ಲಾಸಗೊಳಿಸತಕ್ಕವನು. ವಿರಕ್ತರಾದ ಮಹಾತ್ಮರಲ್ಲಿ ಸಹವಾಸಮಾಡಿ ಅವರ ವಿರಕ್ತಿಮಾರ್ಗವನ್ನನುಸರಿಸತಕ್ಕವನು. ಲೋಕಕಂಟಕರಾದ ದುರ್ಜನರನ್ನು ಯಮನಂತೆ ದಂಡಿಸತಕ್ಕವನು. ಮತ್ತು ಮಹಾವೀರನಾದ ಈ ಪೃಥುರಾಜನು, ತನ್ನ ಬಲದಿಂದ ಗೋರೂಪಿಣಿಯಾದ ಭೂಮಿಯನ್ನು ಕರೆದು, ಸರ್ವೌಷಧಿಗಳನ್ನೂ ಸಂಗ್ರಹಿಸುವನು. ಮತ್ತು ಇವನು ತನ್ನ ಬಿಲ್ಲಿನ ಕೊನೆಯಿಂದ ನಿಮ್ನೋನ್ನತವಾದ ಈ ಭೂಮಿಯನ್ನು ಸಮಮಾಡುವನು. ಇನ್ನು ಹೆಚ್ಚು ಮಾತಿನಿಂದೇನು? ಅನಂತಕಲ್ಯಾಣಗುಣಗಳುಳ್ಳ ಸಾಕ್ಷಾದ್ಭಗವಂತನೇ ಈ ರೂಪದಿಂದವತರಿಸಿರುವನಲ್ಲದೆ ಬೇರೆಯಲ್ಲ. ಪ್ರಕೃತಿಸಂಬಂಧಿಗಳಾದ ವಿಕಾರಗಳೊಂದಕ್ಕೂ ಈಡಾಗದೆ, ತ್ರೈಲೋಕ್ಯಕ್ಕೂ ನಿಯಾಮಕನಾಗಿರುವ ಆ ಪರಮಾತ್ಮನೇ ತನ್ನ ಅಂಶವಾದ ಜೀವನಮೂಲಕವಾಗಿ ಈ ರೂಪದಿಂದವತರಿಸಿರುವನು. ಆ ಪರಮಪುರುಷನಲ್ಲಿ ಈವಿಧವಾದ ದೇವಮನುಷ್ಯಾದಿದೋಷಗಳು ತೋರಿದರೂ, ಆ ತೋರಿಕೆಯು ನಮ್ಮ ಅಜ್ಞಾನದಿಂದೇರ್ಪಟ್ಟುದೇ ಹೊರತು ನಿಜವಲ್ಲ ದೇಹಸಂಬಂಧದಿಂದ ಕಾಣುವ ಬಾಲ್ಯಯೌವನಾದಿಗಳೆಲ್ಲವೂ ಆತ್ಮನಿಗೆ ಹೇಗೆ ಸಂಬಂಧಿಸುವುದಿಲ್ಲವೋ, ಹಾಗೆಯೇ ಪರಮಪುರುಷನು ಜೀವನಮೂಲಕವಾಗಿ ಅವತರಿಸಿದ್ದರೂ, ಆ ಜೀವದೋಷವಾಗಲಿ, ಶರೀರದೋಷವಾಗಲಿ ಅವನಿಗೆ ಸಂಬಂಧಿಸಲಾರದು. ಆದುದರಿಂದ ಭಗವದಂಶದಿಂದ ಹುಟ್ಟಿದ ಮಹಾವೀರನಾದ ಈ ಚಕ್ರವರ್ತಿಯು, ಉದಯಪರ್ವತದವರೆಗಿರುವ ಈ ಸಮಸ್ತಭೂಮಂಡಲವನ್ನೂ ಏಕಾಧಿಪತ್ಯದಿಂದ ಪರಿಪಾಲಿಸುವನು. ಇವನು ಧನುರ್ಧಾರಿಯಾಗಿ ತನ್ನ ವಿಜಯರಥವನ್ನೇರಿ, ಸೂರ್ಯನಂತೆ ಭೂಮಂಡಲವೆಲ್ಲವನ್ನೂ ತಡೆಯಿಲ್ಲದೆ ಸಂಚರಿಸುವನು.ಮುಂದೆ ಇವನ ಜಯಪ್ರಯಾಣದಲ್ಲಿ ಇಂದ್ರಾದಿಲೋಕಪಾಲಕರೂ, ಇತರರಾಜರೂ ಅಲ್ಲಲ್ಲಿ ಕಪ್ಪಗಳನ್ನು ತಂದೊಪ್ಪಿಸುವರು. ಅವರ ಪತ್ನಿಯರೆಲ್ಲರೂ ಇವನನ್ನು ಚಕ್ರಧಾರಿಯಾದ ಶ್ರೀಹರಿಯನ್ನಾಗಿಯೇ ಭಾವಿಸಿ, ಇವನ ಕೀರ್ತಿಯನ್ನು ಹೀಗೆಂದು ಕೊಂಡಾಡುವರು.

“ಈ ಪೃಥುಚಕ್ರವರ್ತಿಯು ಪ್ರಜೆಗಳಿಗೆ ಜೀವನವನ್ನು ಕಲ್ಪಿಸುವುದಕ್ಕಾಗಿಗೋರೂಪಿಣಿಯಾದಭೂಮಿಯನ್ನು ಕರೆದು,ಬೆಳೆಯನ್ನು ತರಿಸಿದವನು.

ಇಂದ್ರನು ಪರ್ವತಗಳನ್ನು ಭೇದಿಸಿದಂತೆ ಧನುಸ್ಸಿನ ತುದಿಯಿಂದಭೂಮಿಯ ಮೇಲಿನ ಹಳ್ಳತಿಟ್ಟುಗಳನ್ನು ಕಡಿದು ನೆಲವನ್ನು ಸಮಮಾಡಿರುವನು. ಸಿಂಹವು ಬಾಲವನ್ನೆತ್ತಿಕೊಂಡು ಸುತ್ತುವಂತೆ, ಇವನು ಅಜಗವವೆಂಬ ಹೆಸರಿನಿಂದ ಪ್ರಖ್ಯಾತವಾದ ತನ್ನ ಧನುಸ್ಸನ್ನು ನಾಣೇರಿಸಿ ಹಿಡಿದು,ಶತ್ರುಗಳಿಗೆ ಸಹಿಸಲಸಾಧ್ಯವಾದ ಪರಾಕ್ರಮವುಳ್ಳವನಾಗಿ, ಭೂಮಿಯನ್ನು ಸುತ್ತಿದಾಗ, ದುಷ್ಟರೆಲ್ಲರೂ ಸಿಂಹವನ್ನು ಕಂಡ ನರಿಗಳಂತೆ ದಿಕ್ಕುದಿಕ್ಕುಗಳಲ್ಲಿ ಅಡಗಿಕೊಂಡರು. ಮತ್ತು ಇವನು ಸರಸ್ವತೀನದಿಗೆ ಉತ್ಪತ್ತಿಸ್ಥಾನವಾದ ಬ್ರಹ್ಮಾವರ್ತವೆಂಬ ದೇಶದಲ್ಲಿ,ನೂರು ಅಶ್ವಮೇಧಯಾಗಗಳನ್ನು ಮಾಡಬೇಕೆಂದು ಸಂಕಲ್ಪಿಸಿ, ಅವುಗಳಲ್ಲಿ ತೊಂಭತ್ತೊಂಬತ್ತು ಯಾಗಗಳನ್ನು ಮುಗಿಸಿ, ನೂರನೆಯ ಯಾಗವನ್ನು ಮುಗಿಸುವಷ್ಟರಲ್ಲಿ,ಇಂದ್ರನು ಇವನ ಯಾಗದ ಕುದುರೆಯನ್ನು ಅಪಹರಿಸಿಕೊಂಡುಹೋದನು. ಮತ್ತೊಮ್ಮೆ ಇವನುತನ್ನಗೃಹೋದ್ಯಾನದಲ್ಲಿ ಏಕಾಂತವಾಗಿ ಸನತ್ಕುಮಾರನನ್ನು ಕಂಡು ಭಕ್ತಿಯಿಂದ ಅವನಲ್ಲಿ ಬ್ರಹ್ಮಜ್ಞಾನೋಪದೇಶವನ್ನು ಪಡೆದಿರುವನು" ಎಂದು ಲೋಕಪಾಲಪತ್ನಿಯರೆಲ್ಲರೂ ಇವನ ಪುಣ್ಯಚರಿತ್ರೆಗಳನ್ನು ಕೊಂಡಾಡುವರು. ಈ ಮಹಾರಾಜನು ಹೀಗೆ ಅಲ್ಲಲ್ಲಿ ಸ್ತುತಿಸಲ್ಪಡುವ ತನ್ನ ಕೀರ್ತಿಯನ್ನು ಕಿವಿಯಿಂದ ಕೇಳುತ್ತ, ನಿರಂಕುಶಪರಾಕ್ರಮವುಳ್ಳವನಾಗಿ, ಲೋಕಸಂಚಾರವನ್ನು ಮಾಡಿ, ದುಷ್ಟರನ್ನಡಗಿಸಿ ಶಿಷ್ಟರನ್ನು ಪಾಲಿಸುವನು. ಇವನ ಆಜ್ಞೆಗೆ ಎಲ್ಲಿಯೂ ತಡೆಯಿರುವುದಿಲ್ಲ. ಸಮಸ್ತದಿಕ್ಕುಗಳನ್ನೂ ಜಯಿಸುವನು. ದೇವಾದಿದೇವತೆಗಳೂ ಇವನ ಮಹಾಮಹಿಮೆಯನ್ನು ಕೊಂಡಾಡುವರು. ಇವನು ಸಮಸ್ತಭೂಮಂಡಲವನ್ನೂ ತಾನೇ ಏಕಾಧಿಪತ್ಯದಿಂದಾಳುತ್ತ, ಆದಿರಾಜನೆಂಬ ಪ್ರಸಿದ್ಧಿಯನ್ನು ಹೊಂದುವನು" ಎಂದರು. ಇಲ್ಲಿಗೆ ಹದಿನೈದನೆಯ ಅಧ್ಯಾಯವು.

---

(ಪೃಥುವು ಭೂಮಿಯನ್ನು ಕೊಲ್ಲುವುದಕ್ಕಾಗಿ ಯತ್ನಿಸಿದಾಗ, ಭೂದೇವಿಯು ಅವನನ್ನು ಸ್ತುತಿಸಿದುದು.)

ಹೀಗೆ ವಂದಿಮಾಗಧಸೂತರೆಲ್ಲರೂ ತನ್ನ ಗುಣಗಳನ್ನೂ, ತಾನು ಮುಂದೆ ನಡೆಸತಕ್ಕ ಸತ್ಕಾರ್ಯಗಳನ್ನೂ ವರ್ಣಿಸುತ್ತಿರುವುದನ್ನು ಕೇಳಿ,

ಪೃಥುವು, ಅವರ ಭಕ್ತಿಗೆ ಮೆಚ್ಚಿ, ಅವರನ್ನು ಮನ್ನಿಸಿ, ಅವರಿಗೆ ವಸ್ತ್ರಾಭರಣಾದಿಗಳನ್ನು ಕೊಟ್ಟು ಬಹುಮಾನಿಸಿದನು. ಮತ್ತು ಅವನು ರಾಜ್ಯವನ್ನಾಳುವಾಗ, ಬ್ರಾಹ್ಮಣಾದಿ ವರ್ಣದವರನ್ನೂ, ಭೃತ್ಯರನ್ನೂ, ಮಂತ್ರಿ ಪುರೋಹಿತರನ್ನೂ, ಪುರವಾಸಿಗಳನ್ನೂ, ದೇಶವಾಸಿಗಳನ್ನೂ, ವರ್ತಕರನ್ನೂ, ಇನ್ನೂ ಇತರ ಪ್ರಜೆಗಳನ್ನೂ ಅವರವರ ಗೌರವಕ್ಕೆ ತಕ್ಕಂತೆ ಮನ್ನಿಸಿ ಪೋಷಿಸುತಿದ್ದನು" ಎಂದನು. ಮೈತ್ರೇಯನು ಹೇಳಿದ ಈ ಮಾತನ್ನು ಕೇಳಿ ವಿದುರನು, "ಓ ಮಹಾತ್ಮಾ ! ಭೂಮಿಯು ಗೋರೂಪವನ್ನು ಧರಿಸಿದುದೇಕೆ ? ಪೃಥುಚಕ್ರವರ್ತಿಯು ಅವಳ ಸ್ತನಗಳನ್ನು ಕರೆದುದು ಹೇಗೆ ? ಗೋರೂಪದಿಂದ ಭೂಮಿಯನ್ನು ಕರೆಯುವಾಗ ಕರುವಾಗಿದ್ದವರಾರು ? ಕರೆಯುವ ಪಾತ್ರೆಗಳಾವುವು ? ಬೆಟ್ಟಗುಡ್ಡಗಳಿಂದ ತುಂಬಿ ಸಹಜವಾಗಿಯೇ ನಿಮ್ನೋನ್ನತವಾದ ಭೂಮಿಯನ್ನು, ಆ ಪೃಥುಚಕ್ರವರ್ತಿಯು ಸಮವಾಗಿ ಮಾಡಿದುದು ಹೇಗೆ? ಆ ರಾಜನು ಯಾಗವನ್ನು ನಡೆಸುವಾಗ ಆತನ ಯಜ್ಞದ ಕುದುರೆಯನ್ನು ಇಂದ್ರನು ಕದ್ದುಯ್ಯುವುದಕ್ಕೆ ಕಾರಣವೇನು? ಬ್ರಹ್ಮವಿದರಲ್ಲಿ ಮೇಲೆನಿಸಿದ ಸನತ್ಕುಮಾರನಿಂದ, ಆ ಪೃಥುಚಕ್ರವರ್ತಿಯು ಬ್ರಹ್ಮಜ್ಞಾನವನ್ನು ಪಡೆದಮೇಲೆ ಯಾವ ಸದ್ಗತಿಯನ್ನು ಹೊಂದಿದನು? ಈ ವೃತ್ತಾಂತಗಳೆಲ್ಲವನ್ನೂ ನನಗೆ ವಿವರಿಸಿ ತಿಳಿಸಬೇಕು. ಇದಲ್ಲದೆ ಪುಣ್ಯಶ್ಲೋಕನಾದ ಭಗವಂತನ ಅಂಶದಿಂದ ಹುಟ್ಟಿ, ಆದಿರಾಜನೆನಿಸಿಕೊಂಡ ಆ ಪೃಥುಚಕ್ರವರ್ತಿಯ ಪುಣ್ಯಚರಿತ್ರೆಗಳು ಇನ್ನೂ ಯಾವ ಯಾವುವುಂಟೋ ಅವೆಲ್ಲವನ್ನೂ ನನಗೆ ತಿಳಿಸಬೇಕು. ಓ ಮಹಾತ್ಮಾ! ಭಗವಂತನಲ್ಲಿ ಭಕ್ತಿಯಿಟ್ಟು ನಿನ್ನ ಪಾದಗಳನ್ನಾಶ್ರಯಿಸಿರುವ ನನಗೆ ಯಶಸ್ಕರಗಳಾದ ಆ ಚರಿತ್ರೆಗಳನ್ನು ಕೇಳಬೇಕೆಂದು ಬಹಳ ಕುತೂಹಲವಿರುವುದು. ಶ್ರದ್ಧೆಯಿಂದ ಕೇಳಬೇಕೆಂದಿರುವ ನನಗೆ, ಪೃಥುರೂಪದಿಂದವತರಿಸಿದ ಆ ಭಗವಂತನು ಭೂಮಿಯನ್ನು ಕರೆದ ಕಥೆಯೆಲ್ಲವನ್ನೂ ಸವಿಸ್ತರವಾಗಿ ತಿಳಿಸಬೇಕು." ಎಂದನು. ಭಗವತ್ಕಥೆಯನ್ನು ಕೇಳಬೇಕೆಂದು ಕುತೂಹಲಪಡುತ್ತಿರುವ ವಿದುರನ ಪ್ರಶ್ನೆಗಾಗಿ ಮೈತ್ರೇಯನು ಸಂತೋಷಗೊಂಡು, ವಿದುರನಿಗೆ ಆ ಕಥೆಯನ್ನು ವಿಸ್ತರಿಸುವನು. "ವಿದುರಾ ಕೇಳು! ಪೃಥುಮಹಾರಾಜನು ಬ್ರಾಹ್ಮಣ

ರಿಂದ ರಾಜ್ಯಾಭಿಷಿಕ್ತನಾದಮೇಲೆ, ಪ್ರಜಾರಕ್ಷಣಕಾರ್ಯದಲ್ಲಿ ನಿಯೋಗಿಸ ಲ್ಪಟ್ಟನು. ಇವನು ರಾಜ್ಯವನ್ನು ನಡೆಸುವುದಕ್ಕೆ ತೊಡಗಿದಾಗ, ಭೂಮಿ ಯಲ್ಲಿ ಯಾವವಿಧವಾದ ಬೆಳೆಯೂ ಇಲ್ಲದುದರಿಂದ, ಪ್ರಾಣಿಗಳೆಲ್ಲವೂ ಅನ್ನ ವಿಲ್ಲದೆ ಕೃಶವಾಗಿ, ಸಾಯುವ ಸ್ಥಿತಿಯಲ್ಲಿದ್ದುವು. ಹೀಗೆ ಅನ್ನವಿಲ್ಲದೆ ಕೃಶ ರಾದ ಪ್ರಜೆಗಳೆಲ್ಲರೂ ರಾಜನಬಳಿಗೆ ಬಂದು "ಓ ರಾಜಾ! ಪ್ರಾಣಿಗ ಳೆಲ್ಲವೂ ಆಹಾರವಿಲ್ಲದೆ ಸಾಯುತ್ತಿರುವುವು.. ಮರದಪೊಟ್ಟರೆಯಲ್ಲಿ ಸೇರಿದ ಬೆಂಕಿಯು ಒಳಗೊಳಗಿನಿಂದ ಆ ಮರವನ್ನು ಸುಡುತ್ತಬರುವಂತೆ, ಜಾಠ ರಾಗ್ನಿಯು ನಮ್ಮ ದೇಹವನ್ನು ದಹಿಸುತ್ತಿರುವುದು. ನಾವು ನಿನ್ನನ್ನು ಮರೆ ಹೊಕ್ಕಿರುವೆವು. ಪ್ರಜಾರಕ್ಷಣೆಗಾಗಿಯೇ ಬ್ರಾಹ್ಮಣರು ನಿನ್ನನ್ನು ರಾಜಸಿಂ ಹಾಸನದಲ್ಲಿ ಕುಳ್ಳಿರಿಸಿರುವುದರಿಂದ, ನಮಗೆ ಜೀವನವನ್ನು ಕಲ್ಪಿಸಿಕೊಡತ ಕ್ಕಭಾರವು ನಿನ್ನದು! ಆದುದರಿಂದ ಎಲೈ ಸಾರ್ವಭೌಮನೆ! ಹಸಿವಿನಿಂದ ಪೀ ಡಿತರಾಗಿ ಸಾಯುತ್ತಿರವ ನಮಗೆ ಅನ್ನವನ್ನುಕೊಟ್ಟು ಬದುಕಿಸಬೇಕು. ಈ ವಿಷಯದಲ್ಲಿ ನೀನು ಸ್ವಲ್ಪಮಾತ್ರವೂ ಕಾಲವಿಳಂಬವನ್ನು ಮಾಡಬಾರದು. ಪ್ರಾಣಿಗಳೆಲ್ಲವೂ ಹಸಿವಿನ ಬಾಧೆಯಿಂದ ಸಾಯುವುದರೊಳಗಾಗಿಯೇ ನೀ ನು ಅನ್ನಾದಿಗಳನ್ನು ಕಲ್ಪಿಸಿ ರಕ್ಷಿಸುವುದಕ್ಕೆ ಯತ್ನಿಸು!" ಎಂದರು. ಹೀ ಗೆ ದೈನ್ಯದಿಂದ ಮೊರೆಯಿಡುತ್ತಿರುವ ಪ್ರಜೆಗಳ ಪ್ರಾರ್ಥನೆಯನ್ನು ಕೇಳಿ ಪೃಥುರಾಜನು, ಅವರಲ್ಲಿ ಕನಿಕರಗೊಂಡು, ಭೂಮಿಯಲ್ಲಿ ಬೆಳೆಯಿಲ್ಲದಿರುವು ದಕ್ಕೆ ಕಾರಣವೇನೆಂದು ಬಹಳ ಹೊತ್ತಿನವರೆಗೆ ತನ್ನಲ್ಲಿಯೇ ಆಲೋಚಿಸಿ, ಕೊನೆಗೆ ಅದರ ಕಾರಣವನ್ನು ಕಂಡುಕೊಂಡನು. ಓಷಧಿಗಳನ್ನು ಹೊರಕ್ಕೆ ಬಿಡದೆ ನಟ್ಟ ಬೀಜಗಳನ್ನು ಭೂಮಿಯೇ ನುಂಗುತ್ತಿರುವುದೆಂದು ಅವನ ಮನಸ್ಸಿಗೆ ನಿಶ್ಚಯವು ಹುಟ್ಟಿತು. ಒಡನೆಯೇ ಆ ಪೃಥುಚಕ್ರವರ್ತಿಯು, ತ್ರಿಪುರಸಂಹಾರಿಯಾದ ರುದ್ರನಂತೆ ಕೋಪಾವಿಷ್ಟನಾಗಿ, ಭೂಮಿಯನ್ನು ಭೇದಿಸಿಬಿಡಬೇಕೆಂದು ನಿಶ್ಚಯಿಸಿ, ತನ್ನ ಬಿಲ್ಲಿಗೆ ನಾಣೇರಿಸಿ, ಬಾಣಸಂ ಧಾನಮಾಡಿದನು. ಹೀಗೆ ಧನುರ್ಧಾರಿಯಾಗಿ ಬಾಣವನ್ನು ತನ್ನ ಕಡೆಗೆ ಗುರಿಯಿಟ್ಟು, ನಿಂತಿರುವ ಪೃಥುಮಹಾರಾಜನನ್ನು ನೋಡಿ ಭೂಮಿಯು, ಭಯದಿಂದ ನಡುಗುತ್ತ, ಒಡನೆಯೇ ಒಂದು ಹಸುವಿನ ಆಕೃತಿಯನ್ನು ತಾ

ಳಿ,ಬೇಡನಿಗೆ ಭಯಪಟ್ಟೋಡುವ ಹೆಣ್ಣು ಜಿಂಕೆಯಂತೆ ಓಡಲಾರಂಭಿಸಿದಳು. ಇದನ್ನು ನೋಡಿ ಪೃಥುವು ಮತ್ತಷ್ಟು ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ, ಧನುರ್ಬಾಣಗಳನ್ನು ಹಿಡಿದು,ಗೋರೂಪಿಣಿಯಾದ ಆ ಭೂಮಿಯು ಓಡಿದಕಡೆಗೆಲ್ಲಾ ತಾನೂ ಬೆನ್ನಟ್ಟಿ ಹೋಗುತಿದ್ದನು. ಭೂಮಿಯು ದಿಕ್ಕುವಿದಿಕ್ಕುಗಳನ್ನೂ,ಭೂಮ್ಯಾಕಾಶಗಳನ್ನೂ, ಅಂತರಿಕ್ಷವನ್ನೂ ಸುತ್ತಿಸುತ್ತಿಬರುತ್ತ, ತಾನು ಹೋದಕಡೆಗೆಲ್ಲಾ ಪೃಥುರಾಜನೂ ತನ್ನನ್ನು ಬಿಡದೆ ಬೆನ್ನಟ್ಟಿ ಬರುತ್ತಿರುವುದನ್ನು ಕಂಡಳು. ಎಲ್ಲೆಲ್ಲಿ ಹೋದರೂ ಬದುಕುವ ದಾರಿಯನ್ನು ಕಾಣದೆ, ಮೃತ್ಯುವನ್ನುಕಂಡ ಪ್ರಜೆಯಂತೆ ಪ್ರಾಣಭಯದಿಂದ ತತ್ತಳಿಸುತ್ತ, ಹಿಂತಿರುಗಿ ಆ ಪೃಥುರಾಜನಲ್ಲಿಯೇ ಮರೆಹೊಕ್ಕು ಪ್ರಾರ್ಥಿಸುವಳು. “ಓ ಮಹಾತ್ಮಾ ! ನೀನು ಸಮಸ್ತಧರ್ಮಗಳನ್ನೂ ಬಲ್ಲವನು! ವಿಪತ್ತಿನಲ್ಲಿ ಸಿಕ್ಕಿ ಬಿದ್ದವರನ್ನು ವಾತ್ಸಲ್ಯದಿಂದ ಕಾಪಾಡತಕ್ಕವನು.ಸಮಸ್ತಭೂತಗಳಿಗೂ ಕ್ಷೇಮವನ್ನು ಕೋರತಕ್ಕವನು. ಇಂತಹ ನೀನು ನನ್ನನ್ನು ಕೊಲ್ಲಬಹುದೆ? ರಾಜೇಂದ್ರಾ!ನನ್ನನು ರಕ್ಷಿಸು! ನಿರಪರಾಧಿನಿಯಾಗಿಯೂ, ದೀನೆಯಾಗಿಯೂ ಇರುವ ನನ್ನನ್ನೇಕೆ ಕೊಲ್ಲುವೆ?ಸಮಸ್ತ ಧರ್ಮಗಳನ್ನೂ ತಿಳಿದ ನಿನ್ನಂತವರು, ಹೀಗೆ ಸ್ತ್ರೀಹತ್ಯೆಗೆ ಪ್ರಯತ್ನಿಸುವರೆ ? ಒಂದುವೇಳೆ ತಪ್ಪಿದ್ದರೂ, ಜನರು ಸ್ತ್ರೀಯರನ್ನು ಕೊಲ್ಲರಾರರು. ಹೀಗಿರುವಾಗ ದಯಾಳುಗಳಾಗಿಯೂ, ದೀನವತ್ಸಲರಾಗಿಯೂ ಇರುವ ನಿನ್ನಂತವರು ಈ ಕ್ರೂರಕೃತ್ಯಕ್ಕೆ ಕೈಯಿಕ್ಕುವುದೆಂದರೇನು ? ನಾನು ಸಮಸ್ತಪ್ರಪಂಚಕ್ಕೂ ಆಧಾರೆಯಾಗಿರುವೆನು. ನನ್ನಲ್ಲಿಯೇ ಎಲ್ಲವೂ ನಿಂತಿರುವುವು.ಅಂತಹ ನನ್ನನ್ನೇ ಈಗ ನೀನು ಕೊಂದರೆ,ನನ್ನಮೇಲಿರುವ ಪ್ರಜೆಗಳ ಗತಿಯೇನು? ಸಮುದ್ರಮಧ್ಯದಲ್ಲಿ ಸಂಚರಿಸುತ್ತಿರುವ ದೃಢವಾದ ನಾವೆಯನ್ನು ಮುರಿದವನು, ಇತರಪ್ರಯಾಣಿಕರೊಡನೆ ತಾನೂ ಜಲದಲ್ಲಿ ಮುಳುಗಿಹೋಗುವಂತೆ,ನನ್ನನ್ನು, ಕೊಂದಮೇಲೆ ನೀನೂ,ಇತರಪ್ರಜೆಗಳೊಡನೆ ನೀರಿನ ಪಾಲಾಗಬೇಕಲ್ಲವೆ? ಆದುದರಿಂದ ಮುಂದಾಲೋಚನೆಯಿಲ್ಲದೆ ಮಹಾನರ್ಥವನ್ನು ತಂದಿಡಬೇಡ!”ಎಂದಳು. ಅದಕ್ಕಾಪೃಥುವು “ಎಲೆ ವಸುಧೆ!ನೀನು ನಿನ್ನನ್ನು ನಿರಪರಾಧಿನಿಯೆಂದು ಹೇಳಿದೆಯಲ್ಲವೆ?ನಿನ್ನಲ್ಲಿ ಒಂದಲ್ಲದೆಎರಡು

ದೊಡ್ಡತಪ್ಪುಗಳಿರುವುವು. ರಾಜನಾದ ನನ್ನ ಆಜ್ಞೆಯಂತೆ ನಡೆಯದಿರುವು ದೊಂದು! ಯಜ್ಞಗಳಲ್ಲಿ ದೇವತೆಗಳಿಗೆ ಸಮಾನವಾಗಿ ನೀನು ಹವಿರ್ಭಾಗ ಗಳನ್ನು ಪಡೆಯುತ್ತಿರುವಾಗಲೂ,ಆ ಉಪಕಾರಸ್ಮರಣೆಯಿಲ್ಲದೆ ಪ್ರಜೆಗಳಿಗೆ ಧಾನ್ಯಾದಿಗಳನ್ನು ಕೊಡದಿರುವುದೊಂದು ! ಈ ಎರಡು ತಪ್ಪುಗಳಿಗಾಗಿ ನಾನು ನಿನ್ನನ್ನು ಕೊಲ್ಲಬೇಕಾಗಿರುವುದು. ಯಥೇಷ್ಟವಾಗಿ ಹುಲ್ಲನ್ನು ತಿನ್ನು ತ್ತ ಸ್ವಲ್ಪವಾದರೂ ಹಾಲನ್ನು ಕರೆಯದಿರುವ ದುಷ್ಟಧೇನುವನ್ನು ದಂಡಿ ಸುವುದರಿಂದೇನೂ ದೋಷವಿರುವುದಿಲ್ಲ. ಹಾಗಿಲ್ಲದೆ ಸಾಧುಸ್ವಭಾವವುಳ್ಳ ಇ ತರಸಾಧಾರಣಗೋವುಗಳನ್ನು ಕೊಲ್ಲುವುದರಲ್ಲಿ ದೋಷವುಂಟು. ಆದುದ ರಿಂದ, ಈಗ ನೀನು ಗೋರೂಪವನ್ನು ಧರಿಸಿದ್ದರೂ, ಉಪಕಾರಸ್ಮರಣೆಯಿ ಲ್ಲದ ನಿನ್ನನ್ನು ಕೊಲ್ಲುವುದರಿಂದ ನಾನು ಗೋಹತ್ಯಾಪಾತಕಕ್ಕೆ ಗುರಿ ಯಾಗಲಾರೆನು. ಪ್ರಾಣಿಗಳ ಆಹಾರಕ್ಕಾಗಿ ಮೊದಲು ಬ್ರಹ್ಮನು ಸೃಷ್ಟಿಸಿರುವ ಓಷಧಿಬೀಜಗಳೆಲ್ಲವನ್ನೂ ನೀನು ಹೊರಕ್ಕೆ ಬಿಡದೆ, ನಿನ್ನ ಲ್ಲಿಯೇ ಬಚ್ಚಿಟ್ಟುಕೊಂಡು, ನನ್ನ ಆಜ್ಞೆಯನ್ನೂ ಲಕ್ಷೀಕರಿಸದೆ ಹೋ ದುದರಿಂದ, ಮೂಢಬುದ್ಧಿಯುಳ್ಳ ನಿನ್ನನ್ನು ಕೊಲ್ಲದೆ ಬಿಡಲಾರೆನು. “ನ ನ್ನನ್ನು ಕೊಂದಮಾತ್ರಕ್ಕೆ ಈ ಪ್ರಾಣಿಗಳ ಕ್ಷುದ್ಬಾಧೆಯನ್ನು ತೀರಿ ಸಿದಂತಾಯಿತೆ? ” ಎಂದು ಕೇಳುವೆಯಾ ? ಇದೋ ! ಈ ನನ್ನ ಬಾಣ ಗಳಿಂದ ನಿನ್ನನ್ನು ಸೀಳಿ,ನಿನ್ನ ಮಾಂಸದಿಂದಲೇ ಕ್ಷುದ್ಬಾಧೆಯಿಂದ ಕಷ್ಟ ಪಡುತ್ತಿರುವ ಈ ಪ್ರಜೆಗಳ ಹಸಿವನ್ನಡಗಿಸಿ, ಅವರಿಗೆ ತೃಪ್ತಿಯನ್ನುಂಟು ಮಾಡುವೆನು ನೋಡು! ಎಲೆ ವಸುಂಧರೆ!ನಿನ್ನನ್ನು ಕೊಲ್ಲುವುದರಿಂದ ಸ್ತ್ರೀ ಹತ್ಯಾಪಾತಕವು ಬರುವುದೆಂದು ಹೇಳಿದೆಯಲ್ಲವೆ? ಎಂದಿಗೂ ಇಲ್ಲ!ಲೋಕ ದಲ್ಲಿ ಸ್ತ್ರೀಯಾಗಿರಲಿ, ಪುರುಷನಾಗಿರಲಿ, ನಪುಂಸಕನಾಗಿರಲಿ, ಯಾರಾದ ರೇನು ? ತನಗೆತಾನೇ ತನ್ನನ್ನು ಮೇಲೆಂದು ಭಾವಿಸಿ, ಇತರಭೂತಗಳಲ್ಲಿ ಸ್ವಲ್ಪಮಾತ್ರವೂ ಕರುಣೆಯಿಲ್ಲದೆ ಕ್ರೂರಸ್ವಭಾವದಿಂದ ವರ್ತಿಸುವ ಅಧ ಮರನ್ನು ಕೊಂದರೂ ದೋಷವಿಲ್ಲ. ರಾಜನಾದವನಿಗೆ ಅಂತವರನ್ನು ಶಿಕ್ಷಿ ಸಬೇಕಾದುದೇ ಧರ್ಮವು. ಈಗ ನೀನಾದರೋ “ಸಮಸ್ತಪ್ರಾಣಿಗಳೂ ನನ್ನ ಆಧಾರದಮೇಲೆಯೇ ನಿಂತಿರುವುವೆಂದೂ, ನಾನಿಲ್ಲದಮೇಲೆ ಈ

ಜಗತ್ತೇ ಸಮುದ್ರದಲ್ಲಿ ಮುಳುಗಿಹೋಗುವು” ವೆಂದೂ ತಿಳಿಯು, ಗರ್ವ ದಿಂದ ಬೀಗಿ, ರಾಜನಾದ ನನ್ನ ಆಜ್ಞೆಯನ್ನೂ ಮೀರಿ ನಡೆಯುತ್ತಿರುವೆ ! ಆದುದರಿಂದ ಹೀಗೆ ಮದಾಂಧಳಾಗಿ, ಮಾಯೆಯಿಂದ ಗೋರೂಪವ ನ್ನು ಧರಿಸಿರುವ ನಿನ್ನನ್ನು, ನನ್ನ ಬಾಣಗಳಿಂದ ಎಳ್ಳುಕಾಳಿನಷ್ಟು ತುಂಡು ತುಂಡಾಗಿ ಕತ್ತರಿಸಿ, ನನ್ನ ಯೋಗಬಲದಿಂದಲೇ ನನ್ನನ್ನೂ ಪ್ರಜೆಗಳನ್ನೂ ಧರಿಸುವೆನು ನೋಡು” ಎಂದನು. ಹೀಗೆ ಕೋಪಮೂರ್ತಿಯನ್ನು ಧರಿಸಿದ ಯಮನಂತೆ ಮುಂದೆ ನಿಂತು ಮಾತಾಡುತ್ತಿರುವ ಪೃಥುವನ್ನು ನೋಡಿ,ಭೂ ಮಿಯು, ಭಯದಿಂದ ನಡುಗುತ್ತ, ಕೈಮುಗಿದು ವಿಜ್ಞಾಪಿಸುವಳು. “ಓ ಮಹಾತ್ಮಾ!ನಿನ್ನ ನಿಜಸ್ಥಿತಿಯನ್ನು ನಾನು ಬಲ್ಲೆನು. ನೀನು ಸಾಕ್ಷಾತ್ಪರಮ ಪುರುಷನ ಅಂಶಾವತಾರವೇಹೊರತು ಸಾಮಾನ್ಯರಾಜನಲ್ಲ. ಇದೋ ! ನಿನ್ನ ಪಾದಗಳಿಗೆ ವಂದಿಸುವೆನು. ನೀನೇ ನಿನ್ನ ಶರೀರವಾದ ಮಾಯೆಯೆಂಬ ಪ್ರ ಕೃತಿಯಿಂದ, ಪ್ರಪಂಚದಲ್ಲಿ ಜೀವನಿಗೆ ದೇವಮನುಷ್ಯಾದಿಶರೀರಭೇದವ ನ್ನು ಕಲ್ಪಿಸತಕ್ಕವನು. ಆ ಪ್ರಕೃತಿಯಮೂಲಕವಾಗಿ ಸತ್ವಾದಿಗುಣಗಳ ನ್ನೂ ನಿನ್ನಲ್ಲಿಯೇ ಪ್ರಕಾಶಗೊಳಿಸತಕ್ಕವನು.ಆ ಪ್ರಕೃತಿಜೀವಗಳೆರಡಕ್ಕಿಂ ತಲೂ ವಿಲಕ್ಷಣನಾದವನು. ಪ್ರಕೃತಿಪುರುಷೇಶ್ವರರೆಂಬ ಮೂರುತತ್ವಗಳ ನಿಜಸ್ಥಿತಿಯನ್ನು ತಿಳಿದಿರುವುದರಿಂದ,ದ್ರವ್ಯವಿಷಯವಾಗಿಯಾಗಲಿ,ಕರ್ಮವಿಷ ಯವಾಗಿಯಾಗಲಿ ಉಂಟಾಗತಕ್ಕ ದೇಹಾತ್ಮಭ್ರಮಗಳಿಲ್ಲದವನು.ಈದೇಹಾ ತ್ಮಭ್ರಮಗಳಿಲ್ಲದದುದರಿಂದ, ಹಸಿವು, ಬಾಯಾರಿಕೆ, ಶೋಕ, ಮೋಹ,ಜರಾ ಮರಣಗಳೆಂಬ ಬಾಧೆಗಳೆಲ್ಲವನ್ನೂ ಅತಿಕ್ರಮಿಸಿದವನು ಆದುದರಿಂದ ಸರ್ವ ಜ್ಞನಾಗಿಯೂ,ಸರ್ವಶಕ್ತನಾಗಿಯೂ ಇರುವ ನಿನ್ನನ್ನು ವಂಚಿಸಬೇಕೆಂದರ ನನ್ನಿಂದ ಸಾಧ್ಯವೆ?ವ್ಯಷ್ಟಿಜೀವಗಳಿಗೂ,ನಿನ್ನಿಂದ ಸೃಷ್ಟವಾದ ಇತರ ದ್ರವ್ಯ ಗಳಿಗೂ ಆಧಾರವಾಗಿ,ನಿನ್ನಿಂದಲೇ ನಾನೂ ನಿರ್ಮಿಸಲ್ಪಟ್ಟಿರುವೆನು. ತ್ರಿಗು ಣಾತ್ಮಕವಾದ ಪ್ರಪಂಚವೆಲ್ಲವೂ ನನ್ನಮೇಲೆ ನಿಂತಿರುವುದು. ಹೀಗೆ ದೇ ವಾದಿಪ್ರಪಂಚಗಳಿಗೆ ಆಧಾರವಾಗಿರುವುದಕ್ಕಾಗಿ ನನ್ನನ್ನು ಸೃಷ್ಟಿಸಿದನೀನೇ ನನ್ನಮೇಲೆ ಆಯುಧವನ್ನೆತ್ತಿ ಹಿಡಿದರೆ,ನಾನು ಬೇರೆ ಯಾರಲ್ಲಿ ಮರೆಹುಗಲಿ! ಸರ್ವಸ್ವತಂತ್ರನಾದ ನೀನು ಕೊಲ್ಲುವುದಕ್ಕೆ ಕೈಯೆತ್ತಿದಪಕ್ಷದಲ್ಲಿ ನನ್ನನ್ನು

ಬಿಡಿಸುವುದಕ್ಕೆ ಬೇರೆ ಸಮರ್ಥರಾರಿರುವರು? ಹೇ ದೇವಾ! ನೀನು ಮೊದಲು ನಿನಗೆ ಶರೀರವಾದ ಪ್ರಕೃತಿಯಿಂದಲೇ ಚರಾಚರಾತ್ಮಕವಾದ ಈ ಪ್ರಪಂಚ ವೆಲ್ಲವನ್ನೂ ಸೃಷ್ಟಿಸಿರತಕ್ಕವನು.ಹೀಗೆಂದು ಚಿಂತಿಸುವುದಕ್ಕೂ ಸಾಧ್ಯವಲ್ಲ ದ ಸಂಕಲ್ಪದಿಂದ ಅವತಾರಗಳನ್ನೆತ್ತಿ ಆ ಪ್ರಪಂಚವೆಲ್ಲವನ್ನೂ ರಕ್ಷಿಸತಕ್ಕ ವನು.ಹೀಗೆ ಪ್ರಜಾಪಾಲನಧರ್ಮದಲ್ಲಿ ಪ್ರವೃತ್ತನಾದ ನೀನು,ಪ್ರಜೆಗಳಿಗೆ ಭೋಗಸ್ಥಾನವಾದ ನನ್ನನ್ನೇ ಕೊಲ್ಲುವುದಕ್ಕೆ ಕೈಯೆತ್ತುವುದುಂಟೆ?ಅಥವಾ ನಿನ್ನ ಮಹಿಮೆಯನ್ನಾಗಲಿ,ನಿನ್ನ ಉದ್ದೇಶವನ್ನಾಗಲಿ ಯಾರುತಾನೇ ಕಾಣಬ ಲ್ಲರು? ಸಮಸ್ತಜೀವರಾಶಿಗಳೂ ನಿನ್ನ ಮಾಯೆಯಿಂದ ಮೋಹಿತವಾಗಿರುವು ವು. ನಿನ್ನ ಅನುಗ್ರಹಬಲದಿಂದ ಮನಸ್ಸನ್ನು ವಶೀಕರಿಸಿದ ಮಹಾತ್ಮರಿಗಲ್ಲದೆ ಆ ಮಾಯೆಯನ್ನು ಮೀರುವುದು ಬೇರೊಬ್ಬರಿಗೆ ಸಾಧ್ಯವಲ್ಲ. ನೀನೊಬ್ಬನೇ ಆಗಿದ್ದರೂ ಬ್ರಹ್ಮರುದ್ರಾದಿಶರೀರಗಳಲ್ಲಿ ಪ್ರವೇಶಿಸುವುದರಿಂದ, ಅನೇಕ ರೂಪಭೇದಗಳನ್ನು ಹೊಂದಿರುವೆ! ಮೊದಲು ಮಹತ್ತು ಮೊದಲಾಗಿ ಪೃಥಿವಿಯವರೆಗಿರುವ ಸಮಷ್ಟಿಸೃಷ್ಟಿಯನ್ನು ಮಾಡಿದವನೂ ನೀನೇ ! ಬ್ರ ಹ್ಮನಮೂಲಕವಾಗಿ ದೇವಮನುಷ್ಯಾದಿವ್ಯಷ್ಟಿಸೃಷ್ಟಿಗಳನ್ನು ಮಾಡಿಸಿದ ವನೂ ನೀನೇ! ಇಂತಹ ಸರ್ವೇಶ್ವರನಾದ ನಿನ್ನ ಕಾರ್ಯೋದ್ದೇಶಗಳನ್ನು ನಿನ್ನ ಮಾಯೆಯಿಂದ ಮೋಹಿತರಾದ ನಾವು ಹೇಗೆತಾನೇ ತಿಳಿಯಬಲ್ಲೆ ವು? ಮತ್ತು ಹೇ ದೇವಾ! ನೀನು, ಪ್ರಕೃತಿಯೆಂದೂ, ಕರ್ಮವೆಂದೂ, ಕಾಲವೆಂದೂ, ಜೀವನೆಂದೂ, ಕರೆಯಲ್ಪಡುವ ನಿನ್ನ ಬೇರೆಬೇರೆ ಶಕ್ತಿಗಳ ಮೂಲಕವಾಗಿ ಸೃಷ್ಟಿಸ್ಥಿತಿಸಂಹಾರಗಳನ್ನು ನಡೆಸುತ್ತಿರುವೆ ! ಹೀಗೆ ವಿವಿ ಧವಿಚಿತ್ರಶಕ್ತಿಯುಳ್ಳವನಾಗಿಯೂ, ಸರ್ವಜಗತ್ಕಾರಣನಾಗಿಯೂ ಇರು ವ ಪರಮಪುರುಷನಾದ ನಿನಗೆ ನಮಸ್ಕಾರವು. ಓ ಮಹಾಪ್ರಭೂ ! ಪೃಥಿ ವ್ಯಾದಿ ಪಂಚಭೂತಗಳಿಂದಲೂ, ಕಣ್ಣು, ಕಿವಿ, ಮೊದಲಾದ ಇಂದ್ರಿಯಗ ಳಿಂದಲೂ, ಅಂತಃಕರಣದಿಂದಲೂ ಏರ್ಪಟ್ಟ ಈ ಸಮಸ್ತಪ್ರಪಂಚವನ್ನೂ ನೀನು ನಿನ್ನ ಶರೀರದಿಂದಲೇ ಸೃಷ್ಟಿಸಿ, ಆ ಜಗತ್ತಿಗೆ ತಕ್ಕ ಆಧಾರವನ್ನು ಕಲ್ಪಿಸಬೇಕೆಂಬ ಉದ್ದೇಶದಿಂದ, ನೀರಿನಲ್ಲಿ ಮುಳುಗಿ ಹೋಗಿದ್ದ ನನ್ನನ್ನು ರಸಾತಲದಿಂದ ಮೇಲಕ್ಕೆತ್ತಿ ಉದ್ಧರಿಸಿದೆಯಲ್ಲವೆ ? ಜನ್ಮಾದಿವಿಕಾರ

ಗಳಿಲ್ಲದವನಾದರೂ, ನೀನು ವರಾಹರೂಪದಿಂದವತರಿಸಿ, ನನ್ನನ್ನುದ್ಧರಿಸಿದೆ! ನೀನೇ ಈಗ, ಜಲಮಧ್ಯದ ನಾವೆಯಂತಿರುವ ನನ್ನ ಮೇಲಿನ ಪ್ರಜೆಗಳನ್ನು ಪಾಲಿಸುವುದಕ್ಕಾಗಿ ಈ ಪೃಥುರೂಪದಿಂಡವತರಿಸಿದೆಯಲ್ಲವೆ ? ಹೀಗೆ ಲೋಕರಕ್ಷಣಾರ್ಥವಾಗಿ ಅವತರಿಸಿದ ನೀನು, ಕೋಪಾವೇಶದಿಂದ ಶಸ್ತ್ರವನ್ನೆತ್ತಿ ನನ್ನನ್ನು ಕೊಲ್ಲವುದಕ್ಕೆ ಯತ್ನಿಸಬಹುದೆ ? ಆದರೇನು ? ನಾನು ಇದಕ್ಕಾಗಿ ಚಿಂತಿಸುವುದೇ ಯುಕ್ತವಲ್ಲ ! ತ್ರಿಗುಣಾತ್ಮಕವಾದ ನಿನ್ನ ಮಾಯೆಯಿಂದ ಮೋಹಿತರಾದ ನಮ್ಮಂತವರಿಗೆ ನಿನ್ನ ಉದ್ದೇಶವೇನೆಂಬುದನ್ನು ತಿಳಿಯುವುದೂ ಸಾಧ್ಯವಲ್ಲ ! ಇದುವರೆಗೆ ವರಾಹಾದ್ಯವತಾರಗಳಲ್ಲಿ ನಿನ್ನಿಂದ ಸಂಹೃತರಾದ ದುಷ್ಟರಾಕ್ಷಸರೂಕೂಡ, ಲೋಕದಲ್ಲಿ ದೊಡ್ಡಕೀರ್ತಿಗೆ ಭಾಜನರಾಗಿ, ಸದ್ಗತಿಯನ್ನು ಹೊಂದಿರುವರು. ಆದುದರಿಂದ ಈಗ ನೀನು ನನ್ನನ್ನು ಕೊಲ್ಲುವುದಕ್ಕಾಗಿ ಕೈಯೆತ್ತಿದ್ದರೂ, ನಿನ್ನ ಉದ್ದೇಶವೇನೆಂದು ನಾನು ತಿಳಿಯಲಾರೆನು. ಯಶಸ್ಕರಗಳಾದ ನಿನ್ನ ವಿಚಿತ್ರಾವತಾರಗಳಿಗೆ ನಮಸ್ಕಾರವು.” ಎಂದಳು. ಇಲ್ಲಿಗೆ ಹದಿನಾರನೆಯ ಅಧ್ಯಾಯವು,

---

## ಪೃಥುಚಕ್ರವರ್ತಿಯು ಗೋರೂಪಿಣಿಯಾದ ಭೂಮಿಯನ್ನು ಕರೆದುದು.

ಇಷ್ಟೊಂದುವಿಧದಿಂದ ಸ್ತುತಿಸುತಿದ್ದರೂ ಪೃಥುವಿಗೆ ಕೋಪಶಾಂತಿಯಿಲ್ಲದೆ ಅವನ ತುಟಿಯು ನಡುಗುತ್ತಿರುವುದನ್ನು ನೋಡಿ,ಭೂಮಿಗೆ ಮೇಲೆಮೇಲೆ ಭಯವು ಹೆಚ್ಚುತಿತ್ತು. ಹಾಗಿದ್ದರೂ ಅವಳು ಎದೆಗುಂದದೆ ತನ್ನಲ್ಲಿ ತಾನೇ ಧೈರ್ಯವನ್ನು ತಂದುಕೊಂಡು,ತಿರುಗಿ ಹೀಗೆಂದು ವಿಜ್ಞಾಪಿಸುವಳು. “ಓ ರಾಜೇಂದ್ರಾ!ಕೋಪವನ್ನು ಬಿಟ್ಟುನನ್ನ ಮಾತನ್ನುಲಾಲಿಸು!ಭ್ರಮರವು ಅಲ್ಲಲ್ಲಿ ಪುಷ್ಪಗಳಿಂದ ಜೇನನ್ನು ತೆಗೆಯುವಂತೆ, ಲೋಕದಲ್ಲಿಪಂಡಿತನಾದವನು,ಸಮಸ್ತವಸ್ತುಗಳಲ್ಲಿಯೂ ಸಾರವನ್ನುಗ್ರಹಿಸಬೇಕು. ತತ್ವಜ್ಞರಾದ ಪುರಾತನಮಹರ್ಷಿಗಳು,ಈಲೋಕದ ಜೀವನಕ್ಕಾಗಿಯೂಪರಲೋಕದ

ವರ ಕ್ಷೇಮಕ್ಕಾಗಿಯೂ ಬೇರೆಬೇರೆ ಉಪಾಯಗಳನ್ನು ಕಂಡು ಹಿಡಿದಿರು ವರು. ಅವುಗಳಲ್ಲಿ ಪರಲೋಕಸುಖಕ್ಕೆ ಬೇಕಾದ ಯಜ್ಞಯಾಗಾದ್ಯುಪಾ ಯಗಳನ್ನು ತಾವಾಗಿಯೇ ಅನುಷ್ಠಿಸಿಯೂ ತೋರಿಸಿರುವರು. ಹಿರಿಯರು ತೋರಿಸಿಕೊಟ್ಟ ಈ ಮಾರ್ಗವನ್ನು ಯಾರು ಕ್ರಮವಾಗಿ ಶ್ರದ್ಧೆಯಿಂದ ಅನುಷ್ಠಿಸುವರೋ, ಅಂತವರು ತಮ್ಮ ಕೋರಿಕೆಗಳನ್ನೆಲ್ಲಾ ಅನಾಯಾಸ ವಾಗಿಯೇ ಪಡೆಯಬಹುದು. ಯಾವ ಮೂಢನು ಆ ಮಾರ್ಗಗಳನ್ನು ನಿರಾ ಕರಿಸಿ, ತನ್ನ ಬುದ್ಧಿಗೆ ತೋರಿದಂತೆ ಸ್ವತಂತ್ರಿಸಿ ಕಾರ್ಯಗಳನ್ನಾರಂಭಿಸು ವನೋ, ಅಂತವನ ಪ್ರಯೋಜನಗಳು ಕೈಗೂಡಿ ಬರಲಾರವು. ತಿರುಗಿತಿರುಗಿ ಪ್ರಯತ್ನಪಟ್ಟರೂ ವಿಘ್ನಪರಂಪರೆಗಳಿಂದ ನಿಂತು ಹೋಗುವುವು. ರಾಜಾ! ಪೂರ್ವದಲ್ಲಿ ಬ್ರಹ್ಮನು ಈ ಲೋಕದಲ್ಲಿ ಪ್ರಜೆಗಳ ಜೀವನಕ್ಕಾಗಿಯೂ, ಯಾಗಾದಿಕರ್ಮಗಳಮೂಲಕವಾಗಿ ಪಡೆಯಬಹುದಾದ ಪರಲೋಕ ಸುಖಕ್ಕಾಗಿಯೂ, ಓಷಧಿಗಳನ್ನು ಸೃಷ್ಟಿಸಿದುದೇನೋ ನಿಜವು! ಆದರೆ ಅವೆಲ್ಲವನ್ನೂ ಸದಾಚಾರವನ್ನರಿಯದ ಕೆಲವು ದುಷ್ಟರು, ದುರ್ವಿನಿಯೋಗ ಮಾಡುವುದನ್ನೂ, ಈ ಅಕ್ರಮವನ್ನು ಕಣ್ಣಾರೆ ನೋಡುತಿದ್ದಾಗಲೂ ನಿನ್ನಂತಹ ಪ್ರಜಾಪಾಲಕರು, ಅವರನ್ನು ದಂಡಿಸದೆ ಉದಾಸೀನರಾಗಿರುವು ದನ್ನೂ ನಾನು ನೋಡಿದೆನು.ಇದಲ್ಲದೆ ಚೋರಬಾಧೆಯು ಹೆಚ್ಚಿರುವಾಗಲೂ ನಿನ್ನಂತಹ ರಾಜರು, ನನ್ನನ್ನು ಸರಿಯಾದ ಸ್ಥಿತಿಯಲ್ಲಿ ಕಾಪಾಡದೆ ಅನಾ ದರಿಸುತ್ತಿರುವುದನ್ನೂ ನೋಡಿದಮೇಲೆ, ನನ್ನಲ್ಲಿರುವ ಓಷಧಿಗಳೆಲ್ಲವೂ ಹೀಗೆಯೇ ದುರ್ವಿನಿಯೋಗ ವಾಗುತ್ತ ಬಂದರೆ, ಮುಂದೆ ಯಜ್ಞಾದಿಕರ್ಮ ಗಳಿಗೆ ಬೇಕಾದ ಸಾಮಗ್ರಿಗಳು ಸಿಕ್ಕದೆ ಹೋಗಬಹುದೆಂಬ ಭಯದಿಂದ ನಾನು ಆ ಓಷಧಿಗಳನ್ನು ಹೊರಕ್ಕೆಬಿಡದೆ, ನನ್ನಲ್ಲಿ ಅಡಗಿಸಿಟ್ಟುಕೊಂಡೆನು. ಬಹುದಿನಗಳಾದುದರಿಂದ ಅವೆಲ್ಲವೂ ನನ್ನಲ್ಲಿಯೇ ಜೀರ್ಣವಾಗಿ ಹೋದುವು. ಆದರೂ ಚಿಂತೆಯಿಲ್ಲ! ಈಗಲೂ ನೀನು, ಒಂದುಪಾಯದಿಂದ ಅವುಗಳನ್ನು ಹೊರಕ್ಕೆ ತೆಗೆಯಬಹುದು. ಹೇ ಮಹಾಬಾಹೂ ! ನೀನು ನಿನ್ನ ಪ್ರಾಣಿಗಳಿಗೆ ಬಲಕರವಾದ ಅನ್ನವನ್ನು ಕಲ್ಪಿಸಿಕೊಡಬೇಕೆಂಬ ಉದ್ದೇಶವುಳ್ಳವನಾದರೆ, ಗೋರೂಪದಿಂದಿರುವ ನನಗೆ ತಕ್ಕಂತೆ ಕರುವನ್ನೂ, ಕರೆಯುವ ಪಾತ್ರ

ವನ್ನೂ, ಕರೆಯತಕ್ಕ ಪುರುಷನನ್ನೂ ಏರ್ಪಡಿಸು! ಆಗ ನಾನು ಆ ಕರುವಿನ ಮೇಲಿನ ಪ್ರೇಮದಿಂದ, ಬೇಕುಬೇಕಾದ ವಸ್ತುಗಳನ್ನು ಕ್ಷೀರರೂಪದಿಂದ ಕರೆಯುವೆನು. ಮತ್ತು ಎಲೈ ವೀರಾಗ್ರಣೀ! ಮಳೆಗಾಲದಲ್ಲಿ ಮೇಘದಿಂದ ನನ್ನ ಮೇಲೆ ಬಿದ್ದ ನೀರು, ಇತರಋತುಗಳಲ್ಲಿಯೂ ಅಲ್ಲಲ್ಲಿ ತಂಗಿನಿಲ್ಲುವಂತೆ, ನನ್ನನ್ನು ಸಮಪ್ರದೇಶವಾಗಿ ಮಾಡಿಡು! ಈ ಕಾರ್ಯಗಳಿಂದ ನಿನಗೂ,ನಿನ್ನ ಪ್ರಜೆಗಳಿಗೂ ಕ್ಷೇಮವುಂಟು!"ಎಂದಳು.ಭೂದೇವಿಯು ಹೇಳಿದಲೋಕಹಿತಕರ ವಾದ ಈ ಪ್ರಿಯವಾರ್ತೆಯನ್ನು ಕೇಳಿ, ಪೃಥುಚಕ್ರವರ್ತಿಯು, ಅವಳ ಆಜ್ಞೆಯಂತೆ ಮೊದಲು ಸ್ವಾಯಂಭುವಮನುವನ್ನು ಕರುವನ್ನಾಗಿಯೂ, ತನ್ನ ಕೈಯನ್ನೇ ಕರೆಯುವ ಪಾತ್ರವನ್ನಾಗಿಯೂ ಮಾಡಿ, ತಾನೇ ಕರೆಯುವುದಕ್ಕೆ ನಿಂತು,ಆ ಭೂಮಿಯ ಸ್ತನದಿಂದ ಸಮಸ್ತಸಸ್ಯವರ್ಗಗಳನ್ನೂ ಕ್ಷೀರರೂಪದಿಂದ ಕರೆದನು. ಆಮೇಲೆ ಇನ್ನೂ ಅನೇಕಮಹಾತ್ಮರು ಹೀಗೆಯೇ ಆ ಭೂಮಿಯಿಂದ ಬೇರೆಬೇರೆಯಾಗಿ ತಮ್ಮತಮ್ಮ ಕೋರಿಕೆಗೆ ತಕ್ಕಂತೆ ಹಾಲನ್ನು ಕರೆದು, ಎಲ್ಲಾಪದಾರ್ಥಗಳಿಗೂ ಸಾರವನ್ನುಂಟುಮಾಡುತ್ತ ಬಂದರು. ವಿದುರಾ! ಆ ವಿವರಗಳನ್ನು ತಿಳಿಸುವೆನು ಕೇಳು! ವಸಿಷ್ಠಾದಿ ಮಹರ್ಷಿಗಳು ಬೃಹಸ್ಪತಿಯನ್ನು ಕರುವನ್ನಾಗಿಯೂ, ಇಂದ್ರಿಯಗಳನ್ನು ಪಾತ್ರಗಳನ್ನಾಗಿಯೂ ಏರ್ಪಡಿಸಿ, ಪವಿತ್ರವಾದ ಛಂದೋರೂಪವಾದ ಹಾಲನ್ನು ಕರೆದರು. ದೇವತೆಗಳೆಲ್ಲರೂ, ಇಂದ್ರನನ್ನು ಕರುವನ್ನಾಗಿ ಮಾಡಿ, ಸುವರ್ಣಮಯವಾದ ಪಾತ್ರದಿಂದ ಮನಶ್ಶಕ್ತಿಗೂ, ಇಂದ್ರಿಯಶಕ್ತಿಗೂ, ದೇಹಶಕ್ತಿಗೂ ಕಾರಣವಾದ ಅಮೃತವನ್ನು ಕರೆದರು. ದಾನವರು ಅಸುರಶ್ರೇಷ್ಠನಾದ ಪ್ರಹ್ಲಾದನನ್ನು ಕರುವನ್ನಾಗಿ ಮಾಡಿ,ಉಕ್ಕಿನ ಪಾತ್ರದಲ್ಲಿ, ಗೌಡಿ, ಪೈಷ್ಟಿ, ಮಾಧ್ವಿಯೆಂಬ ಮೂರುಬಗೆಯ ಸುರೆಯನ್ನೂ, ಮತ್ತು ತಾಳೆ, ತೆಂಗು ಮೊದಲಾದ ಇತರ ಮದ್ಯವನ್ನೂ ಕರೆದರು. ಗಂಧರ್ವರೂ ಅಪ್ಸರಸ್ಸುಗಳೂ ಸೇರಿ ವಿಶ್ವಾವಸುವೆಂಬ ಗಂಧರ್ವನನ್ನು ಕರುವನ್ನಾಗಿ ಮಾಡಿ, ಪದ್ಮಮಯವಾದ ಪಾತ್ರೆಯಲ್ಲಿ, ಗಾನಮಾಧುರ್ಯವನ್ನೂ, ದೇಹಸೌಂದರ್ಯವನ್ನೂ ಕ್ಷೀರರೂಪದಿಂದ ಕರೆದರು. ಪಿತೃದೇವತೆಗಳು ಅರ್ಯಮನೆಂಬವನನ್ನು ಕರುವನ್ನಾಗಿ ಏರ್ಪಡಿಸಿ, ಆಮಪಾತ್ರ

ದಲ್ಲಿ (ಸುಡದ ಮಣ್ಣಿನ ಪಾತ್ರೆಯಲ್ಲಿ) ಶ್ರಾದ್ಧದೇವತೆಗಳಿಗೆ ಆಹಾರವಾದ ಕವ್ಯವನ್ನು ಕ್ಷೀರರೂಪದಿಂದ ಕರೆದರು. ಸಿದ್ಧರು ಕಪಿಲನನ್ನು ಕರುವನ್ನಾಗಿ ಮಾಡಿ, ಆಕಾಶವೆಂಬ ಪಾತ್ರೆಯಲ್ಲಿ, ಸಂಕಲ್ಪಮಾತ್ರದಿಂದಲೇ ಕೋರಿದ ಕೋರಿಕೆಯನ್ನು ಕೈಗೂಡಿಸತಕ್ಕ ಅಣಿಮಾದ್ಯಷ್ಟಸಿದ್ಧಿಗಳನ್ನೂ ಕ್ಷೀರರೂಪದಿಂದ ಕರೆದರು. ಮೇಲೆಹೇಳಿದ ಸಾಧನಗಳಿಂದಲೇ, ವಿದ್ಯಾಧರರೇ ಮೊದಲಾದವರು, ಗಗನಸಂಚಾರಾದಿವಿದ್ಯೆಗಳಿಗೆ ಕಾರಣವಾದ ಹಾಲನ್ನು ಕರೆದರು. ಮಾಯಾಬಲವುಳ್ಳ ಕಿಂಪುರುಷಾದಿಗಳು, ಮಯನನ್ನು ಕರುವನ್ನಾಗಿ ಮಾಡಿ ಅಂತರ್ಧಾನಶಕ್ತಿಗೂ, ಕಾಮರೂಪಗಳನ್ನು ಧರಿಸತಕ್ಕ ಶಕ್ತಿಗೂ, ಕಾರಣವಾದ ಧಾರಣಾರೂಪವಾದ ಮಾಯೆಯನ್ನು ಕರೆದರು. ರಕ್ತಪಾಯಿಗಳಾದ ಯಕ್ಷ ರಾಕ್ಷಸ ಭೂತಪ್ರೇತಪಿಶಾಚಾದಿಗಳೆಲ್ಲರೂ ಸೇರಿ, ರುದ್ರನನ್ನು ಕರುವನ್ನಾಗಿ ಮಾಡಿ, ಕಪಾಲರೂಪವಾದ ಪಾತ್ರದಲ್ಲಿ ರಕ್ತವನ್ನು ಕ್ಷೀರರೂಪದಿಂದ ಕರೆದರು. ಹೆಡೆಯುಳ್ಳ ಮತ್ತು ಹೆಡೆಯಿಲ್ಲದ ಸರ್ಪಜಾತಿಗಳೆಲ್ಲವೂ ಸೇರಿ. ತಕ್ಷಕನನ್ನು ಕರುವನ್ನಾಗಿ ಮಾಡಿ, ಹುತ್ತವೆಂಬ ಪಾತ್ರದಲ್ಲಿ, ವಿಷರೂಪವಾದ ಹಾಲನ್ನು ಕರೆದುವು. ಗೋಜಾತಿಗಳೆಲ್ಲವೂ ಸೇರಿ ರುದ್ರವಾಹನವಾದ ವೃಷಭವನ್ನು ಕರುವನ್ನಾಗಿ ಏರ್ಪಡಿಸಿ, ಅಡವಿಯೆಂಬ ಪಾತ್ರೆಯಲ್ಲಿ ಗರಿಕೆಯ ರೂಪವಾದ ಹಾಲನ್ನು ಕರೆದುವು ಮಾಂಸಜೀವಿಗಳಾಗಿಯೂ, ಕೋರೆಹಲ್ಲುಳ್ಳವುಗಳಾಗಿಯೂ ಇರುವ ಹುಲಿ ಮೊದಲಾದ ಕ್ರೂರಜಂತುಗಳು, ಸಿಂಹವನ್ನು ಕರುವನ್ನಾಗಿ ಏರ್ಪಡಿಸಿ, ತಮ್ಮ ಶರೀರವನ್ನೇ ಪಾತ್ರವನ್ನಾಗಿ ಮಾಡಿ, ಮಾಂಸರೂಪವಾದ ಹಾಲನ್ನು ಕರೆದುವು. ಪಕ್ಷಿಜಾತಿಗಳು ಗರುಡನನ್ನು ಕರುವನ್ನಾಗಿ ಮಾಡಿ ಕ್ರಿಮಿಕೀಟಗಳು, ಹಣ್ಣು, ಕಾಯಿ, ಮುಂತಾಗಿ ಚರಾಚರಾತ್ಮಕಗಳಾದ ತಮ್ಮ ಆಹಾರಪದಾರ್ಥಗಳನ್ನು ಕ್ಷೀರರೂಪದಿಂದ ಕರೆದುವು. ವೃಕ್ಷಗಳೆಲ್ಲವೂ ಆಲದಮರವನ್ನು ಕರುವನ್ನಾಗಿ ಮಾಡಿ,ತಮ್ಮ ಶರೀರವೆಂಬ ಪಾತ್ರದಲ್ಲಿ, ಷಡ್ರಸರೂಪವಾದ ಹಾಲನ್ನು ಕರೆದುವು. ಪರ್ವತಗಳೆಲ್ಲವೂ ಹಿಮವಂತನನ್ನು ಕರುವನ್ನಾಗಿ ಮಾಡಿ, ತಮ್ಮ ತಪ್ಪಲೆಂಬ ಪಾತ್ರದಲ್ಲಿ ಗೈರಿಕಾದಿ ಧಾತುಗಳನ್ನು ಕ್ಷೀರರೂಪದಿಂದ ಕರೆದುವು ಹೀಗೆ ಪೃಥುಚಕ್ರವರ್ತಿ

ಯ ಸಾಹಾಯ್ಯಬಲದಿಂದ ಸಮಸ್ತಭೂತಗಳೂ ಬೇರೆಬೇರೆಯಾಗಿ ತಮ್ಮ ಜಾತಿಯಲ್ಲಿ ಪ್ರಮುಖರಾದವರನ್ನು ಕರುವಾಗಿ ಏರ್ಪಡಿಸಿಕೊಂಡು,ತಮತಮಗೆ ಅನುಕೂಲವಾದಪಾತ್ರದಲ್ಲಿ,ತಮ್ಮ ಇಷ್ಟಾನುಸಾರವಾದ ಕ್ಷೀರವನ್ನು ಕರೆದರು.ಹೀಗೆ ಅವರವರ ಕೋರಿಕೆಗಳನ್ನೀಡೇರಿಸಿಕೊಡುತ್ತಿರುವ ಭೂಮಿಯವಿಷಯದಲ್ಲಿ,ಪೃಥುಚಕ್ರವರ್ತಿಯುಸಂತೋಷಗೊಂಡವನಾಗಿ,ಆಭೂಮಿಯನ್ನು ತನ್ನ ಮಗಳನ್ನಾಗಿ ಸ್ವೀಕರಿಸಿದನು. ಆಮೇಲೆ ರಾಜಾಧಿರಾಜನಾದ ಆ ಪೃಥುವು,ಭೂಮಿಯಮೇಲಿನ ಪರ್ವತಶಿಖರಗಳೆಲ್ಲವನ್ನೂ ತನ್ನ ಧನುಸ್ಸಿನಕೊಪ್ಪಿನಿಂದ ಸವರಿ,ಸಮಮಾಡಿದನು.ಹೀಗೆ ಪ್ರಜೆಗಳಿಗೆ ಜೀವನೋಪಾಯಗಳನ್ನು ಕಲ್ಪಿಸಿ,ತಂದೆಯಂತೆ ಕಾಪಾಡಿದ ಮಹಾನುಭಾವನಾದ ಆ ರಾಜನು,ಭೂಮಿಯಮೇಲೆ ಅಲ್ಲಲ್ಲಿ ಗ್ರಾಮಗಳನ್ನೂ,ಪಟ್ಟಣಗಳನ್ನೂ ಪುರಗಳನ್ನೂ,ಬಗೆಬಗೆಯ ದುರ್ಗಗಳನ್ನೂ,ಹಳ್ಳಿಗಳನ್ನೂ,ಗೋಮಾಳಗಳನ್ನೂ,ಸೇನಾನಿವೇಶಸ್ಥಳಗಳನ್ನೂ, ಗಣಿಗಳನ್ನೂ ಕೃಷಿಮಾಡತಕ್ಕವರ ನಿವಾಸಪ್ರದೇಶಗಳನ್ನೂ, ಪರ್ವತಪ್ರಾಂತದ ಹಳ್ಳಿಗಳನ್ನೂ ಬೇರೆಬೇರೆಯಾಗಿ ವಿಭಾಗಿಸಿ, ಅವರವರಿಗೆ ತಕ್ಕಂತೆ ಸ್ಥಳಗಳನ್ನು ಕಲ್ಪಿಸಿಕೊಟ್ಟನು. ವಿದುರಾ! ಈ ಪೃಥುವಿನ ಆಳ್ವಿಕೆಗೆ ಮೊದಲು, ಹೀಗೆ ಪುರಗ್ರಾಮಗಳೇ ಮೊದಲಾದ ಏರ್ಪಾಡುಗಳೊಂದೂ ಇಲ್ಲದಿದ್ದುದರಿಂದ, ಇವನ ಕಾಲದಿಂಬಾಚೆಗೆ, ಜನರೆಲ್ಲರೂ ತಮತಮಗೆ ಅನುಕೂಲಸ್ಥಲಗಳನ್ನು ಸೇರಿ ನಿರ್ಭಯರಾಗಿ ಸುಖದಿಂದಿರುವರು." ಎಂದನು ಇಲ್ಲಿಗೆ ಹದಿನೇಳನೆಯ ಅಧ್ಯಾಯವು.

---

ಪೃಥುಚಕ್ರವರ್ತಿಯು ಅಶ್ವಮೇಧಯಾಗವನ್ನಾರಂಭಿಸಿ, ಅದರಲ್ಲಿ ಯಾಗಾಶ್ವವನ್ನು ಕದ್ದುಯ್ದ ಇಂದ್ರನನ್ನು ಕೊಲ್ಲಿಸುವುದಕ್ಕಾಗಿ ಯತ್ನಿಸಿದುದು ಬ್ರಹ್ಮನು ಪೃಥುವಿಗೆ ಸಮಾಧಾನವನ್ನು ಹೇಳಿತಡೆದುದು.

ವಿದುರಾ ಕೇಳು! ಆಮೇಲೆ,ರಾಜರ್ಷಿಯಾದ ಪೃಥುವು,ಬ್ರಹ್ಮಾವರ್ತವೆಂಬ ಪವಿತ್ರವಾದ ಪ್ರದೇಶದಲ್ಲಿ,ನೂರು ಅಶ್ವಮೇಧಯಾಗಗಳನ್ನು ಮಾಡ

ಬೇಕೆಂದು ಸಂಕಲ್ಪಿಸಿ ನಡೆಸುತಿದ್ದನು.ಈ ಬ್ರಹ್ಮಾವರ್ತವೆಂಬ ದೇಶವು ಮೊದಲು ಸ್ವಾಯಂಭುವಮನುವಿಗೆ ನಿವಾಸಸ್ಥಲವಾಗಿದ್ದಿತು. ಈ ಪ್ರದೇಶದಲ್ಲಿ ಸರಸ್ವತೀನದಿಯು ಪೂರ್ವಾಭಿಮುಖವಾಗಿ ಪ್ರವಹಿಸುತ್ತಿರುವುದು. ಇಂತಹ ಪುಣ್ಯಕ್ಷೇತ್ರದಲ್ಲಿಪೃಥುಚಕ್ರವರ್ತಿಯು,ತೊಂಬತೊಂಬತ್ತುಯಾಗಗಳನ್ನು ಮುಗಿಸಿ,ನೂರನೆಯಯಾಗವನ್ನು ನಡೆಸುತ್ತಿರುವಾಗ,ದೇವೇಂದ್ರನು ಹಿಂದೆ ತಾನು ನಡೆಸಿದ ಯಜ್ಞಗಳಿಗಿಂತಲೂ ಈ ರಾಜನ ಯಜ್ಞವು ಅನೇಕಭಾಗಗಳಲ್ಲಿ ಮೇಲಾಗಿರುವುದನ್ನು ಕಂಡನು.ಈಯಜ್ಞಸಂಭ್ರಮಗಳನ್ನು ನೋಡಿದಾಗ ಅವನ ಮನಸ್ಸಿಗೆ ಅಸಹನವುಂಟಾಯಿತು. ವಿದುರಾ! ದೇವೇಂದ್ರನಿಗೆ ಅಸೂಯೆ ಹುಟ್ಟಿದುದೇನೂ ಆಶ್ಚರ್ಯವಲ್ಲ ! ಆ ಪೃಥುಚಕ್ರವರ್ತಿಯ ಯಾಗವೈಭವಗಳನ್ನು ಕೇಳಬೇಕೆ? ಅವನು ಯಾಗವನ್ನು ನಡೆಸುತಿದ್ದ ಸ್ಥಳಕ್ಕೆ, ಸರ್ವಾಂತರಾತ್ಮನಾಗಿಯೂ, ಜ್ಞಾನಾದಿ ಷಡ್ಗುಣಪರಿಪೂರ್ಣನಾಗಿಯೂ, ಯಜ್ಞಾರಾಧ್ಯನಾಗಿಯೂ,ಯಜ್ಞಫಲಪ್ರದನಾಗಿಯೂ, ಸರ್ವಲೋಕೇಶ್ವರನಾಗಿಯೂ ಇರುವ ಶ್ರೀಮನ್ನಾರಾಯಣನು, ಬ್ರಹ್ಮರುದ್ರರೊಡನೆಯೂ, ಇಂದ್ರಾದಿಲೋಕಪಾಲಕರೊಡನೆಯೂ, ಅವರವರ ಪರಿವಾರಗಳೊಡನೆಯೂ ಕೂಡಿ,ತಾನೇ ಸಾಕ್ಷಾತ್ತಾಗಿ ಬಂದು ಯಜ್ಞಭಾಗಗಳನ್ನು ಸ್ವೀಕರಿಸುತಿದ್ದನು. ಗಂಧರ್ವರೂ, ಮಹರ್ಷಿಗಳೂ, ಅಪ್ಸರಸ್ಸುಗಳೂ, ಸಿದ್ಧರೂ, ವಿದ್ಯಾಧರರೂ, ಮಾನವರೂ, ಗುಹ್ಯಕಾದಿಗಳೂ, ಆ ಭಗವಂತನ ಗುಣಾನುವರ್ಣನಪೂರ್ವಕವಾಗಿ ಅವನನ್ನು ಹಿಂಬಾಲಿಸಿ ಬರುತಿದ್ದರು. ಸುನಂದನಂದರೇ ಮೊದಲಾದ ಆ ಭಗವಂತನ ಅನುಚರರೂ, ಕಪಿಲ, ನಾರದ, ದತ್ತ, ಮೊದಲಾದ ಯೋಗೀಶ್ವರರೂ, ಸನಕಾದಿಮುನಿಕುಮಾರರೂ, ಇನ್ನೂ ಇತರಭಾಗವತೋತ್ತಮರೂ, ಆ ಭಗವಂತನ ಸೇವಾನಿರತರಾಗಿ ಅವನನ್ನು ಹಿಂಬಾಲಿಸುತಿದ್ದರು. ಪವಿತ್ರವಾದ ಆ ಬ್ರಹ್ಮಾವರ್ತಕ್ಷೇತ್ರದಲ್ಲಿ ಭೂಮಿಯು ಧರ್ಮಾನುಷ್ಠಾನಕ್ಕೆ ಬೇಕಾದ ಸಾಮಗ್ರಿಗಳಿಂದ ಸಮೃದ್ಧವಾಗಿ, ಯಾಗಮಾಡುತಿದ್ದ ಆ ಪೃಥುವಿಗೆ ಬೇಕುಬೇಕಾದ ವಸ್ತುಗಳೆಲ್ಲವನ್ನೂ ಆಯಾಕ್ಷಣವೇ ಒದಗಿಸುತಿದ್ದುದಲ್ಲದೆ, ಅವನಾಗಿ ಅಪೇಕ್ಷಿಸದಿದ್ದರೂ ಆಯಾಕಾಲಕ್ಕೆ ಬೇಕಾದ ಹವಿಃಪದಾರ್ಥಗಳನ್ನು ತಾನಾಗಿಯೇ ತಂ

ದೊಪ್ಪಿಸುತಿತ್ತು ಹಾಲು,ಬೆಣ್ಣೆ,ತುಪ್ಪ,ಮೊಸರು, ಮುಂತಾದಗೋರಸಗಳ ನ್ನೂ, ಬೇರೆ ಅನ್ನರಸಗಳನ್ನೂ ಅಲ್ಲಿನ ನದಿಗಳು ತಮ್ಮ ಪ್ರವಾಹದ ಮೂ ಲಕವಾಗಿ ತಂದೊದಗಿಸುತಿದ್ದುವು. ವೃಕ್ಷಗಳೆಲ್ಲವೂ ಶಾಖೋಪಶಾಖೆಗಳಿಂ ದ ವಿಸ್ತಾರದಾಗಿ ಬೆಳೆದು, ಎಡೆಬಿಡದೆ ಜೇನನ್ನು ತೊಟ್ಟಿಕ್ಕುತ್ತ, ಬೇಕುಬೇ ಕಾದ ಫಲಮೂಲಗಳೆಲ್ಲವನ್ನೂ ಆಯಾಕಾಲಕ್ಕೆ ತಂದೊಪ್ಪಿಸುತಿದ್ದುವು. ಹೀಗೆಯೇ ಸಮುದ್ರಗಳು ರತ್ನರಾಶಿಯನ್ನೂ, ಬೆಟ್ಟಗಳು ಭಕ್ಷ್ಯಭೋಜ್ಯ ಚೋಷ್ಯಲೇಹ್ಯಗಳೆಂಬ ನಾಲ್ಕುಬಗೆಯ ಅನ್ನರಾಶಿಯನ್ನೂ, ಒದಗಿಸಿ ಕೊಡುತಿದ್ದುವು. ಭೂಮಿಯಮೇಲಿನ ಸಮಸ್ತಪ್ರಜೆಗಳೂ ತಮ್ಮತಮ್ಮ ರಾಜರೊಡನೆಬಂದು,ಬಗೆಬಗೆಯಕಾಣಿಕೆಗಳನ್ನು ತಂದೊಪ್ಪಿಸುತಿದ್ದರು. ಸಾ ಕ್ಷಾನ್ಮಹಾವಿಷ್ಣುವಿನ ಅಂಶಾವತಾರವನ್ನೆತ್ತಿ, ರಾಜ್ಯವಾಳುತ್ತಿರುವ ಆ ಪೃ ಥುವಿನ ಯಾಗದಲ್ಲಿ, ಈ ಅತಿಶಯಗಳೆಲ್ಲವನ್ನೂ ನೋಡಿದಾಗ,ಇಂದ್ರನಿಗೆ ಮ ನಸ್ಸಿನಲ್ಲಿ ಅಸೂಯೆ ಹುಟ್ಟಿತು. ಅವನ ಯಜ್ಞವನ್ನು ಹೇಗಾದರೂ ಕೆಡಿಸ ಬೇಕೆಂಬ ದುರುದ್ದೇಶದಿಂದ, ಸಮಯಸಿರೀಕ್ಷಣೆಯಲ್ಲಿದ್ದ ಇಂದ್ರನು, ಆ ಪೃ ಥುವು ಕೊನೆಯ(ನೂರನೆಯ)ಯಾಗವನ್ನು ನಡೆಸುವಾಗ, ವೇಷಾಂತರದಿಂದ ಬಂದು, ಆ ಯಾಗದ ಕುದುರೆಯನ್ನು ಕದ್ದುಯ್ಯುತಿದ್ದನು. ಇವನು ಆಕಾಶ ಮಾರ್ಗದಲ್ಲಿ ವೇಗದಿಂದೋಡುತ್ತಿರುವಾಗ, ಇತ್ತಲಾಗಿ ಯಜ್ಞಶಾಲೆಯಲ್ಲಿ ದ್ದ ಮಹಾತ್ಮನಾದ ಅತ್ರಿಮುನಿಯು, ಅಕಸ್ಮಾತ್ತಾಗಿ ಅದನ್ನು ಕಂಡನು. ಇಂದ್ರನು ವಾಸ್ತವದಲ್ಲಿ ಅಧರ್ಮವನ್ನಾಚರಿಸುತ್ತಿದ್ದರೂ ಮೂಢರಿಗೆ ಧ ರ್ಮಭ್ರಾಂತಿಯನ್ನು ಹುಟ್ಟಿಸುವ ಪಾಷಂಡವೇಷವನ್ನು ಧರಿಸಿ, ಆ ಕುದುರೆ ಯನ್ನು ಕದ್ದೊಯ್ಯುತ್ತಿರುವುದನ್ನು ಕಂಡೊಡನೆ ಅತ್ರಿಮಹರ್ಷಿಯು ಆತುರ ದಿಂದ ರಾಜನನ್ನು ಕುರಿತು “ಓ ರಾಜಾ! ಅದೋ! ನಿನ್ನ ಯಜ್ಞಾಶ್ವವನ್ನು ಕದ್ದುಯ್ಯುತ್ತಿರುವ ಆ ವೇಷಧಾರಿಯನ್ನು ಈಗಲೇ ಕೊಲ್ಲು! ಕೊಲ್ಲು!!” ಎಂ ದು ಕೂಗಿದನು. ಈ ಮಾತನ್ನು ಕೇಳಿದೊಡನೆ ಮಹಾರಥನಾದ ಪೃಥುಚ ಕ್ರವರ್ತಿಯ ಪುತ್ರನು ಕೋಪಾವಿಷ್ಟನಾಗಿ, ಆ ಕುದುರೆಯ ಕಳ್ಳನನ್ನು ಬೆ ನ್ನಟ್ಟುತ್ತ “ಎಲಾ! ನಿಲ್ಲು! ನಿಲ್ಲು!” ಎಂದು ಕೂಗಿಕೊಂಡು ಓಡಿದನು. ಇಂದ್ರನು ಪಾಷಂಡವೇಷದಿಂದ ಜಟಾಭಸ್ಮಗಳನ್ನು ಧರಿಸಿ, ಪರಮ



810. ಪೃಥುಚಕ್ರವರ್ತಿಯ ಯಾಗದಲ್ಲಿ ಇಂದ್ರನು ಯಾಗಾಶ್ವವನ್ನು ಕದ್ದುಯ್ದುದು.

ಧಾರ್ಮಿಕನಂತೆ ಕಾಣುತಿದ್ದುದರಿಂದ, ಪೃಥುಪುತ್ರನು, ಧರ್ಮದೇವತೆ ಯೇ ಆ ಶರೀರವನ್ನು ಧರಿಸಿ ಬಂದಿರಬಹುದೆಂದು ಭ್ರಮಿಸಿ, ಅವನ ಮೇಲೆ ಬಾಣವನ್ನು ಪ್ರಯೋಗಿಸುವವಿಷಯದಲ್ಲಿ ಹಿಂಜರಿಯುತಿದ್ದನು. ಹೀಗೆ ಆ ವೇಷಧಾರಿಯನ್ನು ಕೊಲ್ಲದೆ ಹಿಂತಿರುಗಿ ಬಿಟ್ಟ ರಾಜಕುಮಾರ ನನ್ನು ನೋಡಿ, ತಿರುಗಿ ಅತ್ರಿಮುನಿಯು “ ಓ ರಾಜಕುಮಾರಾ! ಇದೇ ಕೆ ಸಂದೇಹಪಡುತ್ತಿರುವೆ? ಅವನು ದೇವಾಧಮನಾದ ಇಂದ್ರನು! ನ ಮ್ಮಲ್ಲಿ ಅಸೂಯೆಯಿಂದ ನಮ್ಮ ಯಜ್ಞವನ್ನು ಕೆಡಿಸುವುದಕ್ಕಾಗಿ ಬಂ ದವನು. ಆದುದರಿಂದ ನೀನು ನಿಸ್ಸಂದೇಹವಾಗಿ ಅವನನ್ನು ಕೊಲ್ಲು! ಅವನ ವೇಷವನ್ನು ನೋಡಿ ನೀನು ಭ್ರಮಿಸಬೇಡ” ಎಂದು ತಿರುಗಿತಿರುಗಿಅವನನ್ನು ಪ್ರೇರಿಸುತಿದ್ದನು. ಈಮಾತನ್ನು ಕೇಳಿ ಪೃಥುಪುತ್ರನು, ತಿರುಗಿಕೋಪಗೊಂ ಡು, ಆನೆಯನ್ನು ಬೆನ್ನಟ್ಟುವ ಸಿಂಹದಂತೆ ಆಕಾಶದಲ್ಲಿ ಓಡುತ್ತಿರುವ ಆ ಇಂ ದ್ರನನ್ನು ಬೆನ್ನಟ್ಟಿಹೋದನು. ಆಗ ಇಂದ್ರನಿಗೆ ಮನಸ್ಸಿನಲ್ಲಿ ಭಯವು ಹು ಟ್ಟಿತು.ಕುದುರೆಯನ್ನೂ, ತಾನು ಹಾಕಿದ್ದ ಪಾಷಂಡವೇಷವನ್ನೂ ಅಲ್ಲಿಯೇ ಬಿಟ್ಟು ಮಾಯೆಯಿಂದ ಕಣ್ಮರೆಯಾಗಿ ಓಡಿಹೋದನು. ಆಮೇಲೆ ಈ ಪೃಥು ಕುಮಾರನು ಆ ಯಜ್ಞದ ಕುದುರೆಯನ್ನು ಹಿಂದಕ್ಕೆ ಕರೆತಂದು,ಯಜ್ಞಶಾ ಲೆಯಲ್ಲಿ ತನ್ನ ತಂದೆಯ ವಶಕೊಪ್ಪಿಸಿದನು. ಮಹರ್ಷಿಗಳೆಲ್ಲರೂ ಅವನ ಅ ದ್ಭುತಸಾಹಸವನ್ನು ನೋಡಿ ಅವನಿಗೆ “ವಿಜಿತಾಶ್ವನೆಂಬ” ಹೆಸರನ್ನು ಕೊಟ್ಟ ರು. ಪೃಥುವು ಮುಂದಿನ ಯಜ್ಞಕಾರ್ಯವನ್ನಾರಂಭಿಸಿ ನಡೆಸುತ್ತಿರುವಷ್ಟ ರಲ್ಲಿ,ತಿರುಗಿ ದೇವೇಂದ್ರನು, ತನ್ನ ಮಾಯಾಶಕ್ತಿಯಿಂದ ದೊಡ್ಡಕತ್ತಲೆಯ ನ್ನು ಕವಿಸಿ,ಆ ಕತ್ತಲೆಯಲ್ಲಿ ಯಾರಿಗೂ ತಿಳಿಯದಂತೆ ಬಂದು, ಚಿನ್ನದ ಸರ ಪಣಿಯಿಂದ ಯೂಪಸ್ತಂಭಕ್ಕೆ ಕಟ್ಟಲ್ಪಟ್ಟಿದ್ದ ಆ ಯಜ್ಞಾಶ್ವವನ್ನು ಅಪಹರಿಸಿಕೊಂಡುಹೋದನು ತಿರುಗಿ ಆ ಅತ್ರಿಮಹರ್ಷಿಯೇ ಆಕಾಶದಲ್ಲಿ ಓಡುತ್ತಿರುವ ಈ ಇಂದ್ರನನ್ನು ಕಂಡು,ವಿಜಿತಾಶ್ವನಿಗೆ ಆ ಸಂಗತಿಯನ್ನು ತಿ ಳಿಸಿದನು. ಮೊದಲಿನಂತೆಯೇ ಆ ವಿಜಿತಾಶ್ವನೂ ಧನುರ್ಬಾಣಗಳನ್ನು ಹಿಡಿ ದು ಅವನನ್ನು ಬೆನ್ನಟ್ಟಿ ಬಂದನು. ಆದರೆ ಕೈಯಲ್ಲಿ ಕಪಾಲವನ್ನೂ,ಡಮರು ವಾದ್ಯವನ್ನೂ ಧರಿಸಿರುವ ಆ ಇಂದ್ರನನ್ನು ನೋಡಿದಾಗ, ವಿಜಿತಾಶ್ವನಿಗೆ

ಅವನೇ ಕುದುರೆಯ ಕಳ್ಳನೆಂದು ತಿಳಿಯುವುದಕ್ಕೆ ಸಾಧ್ಯವಿಲ್ಲದೆ ಹೋಯಿತು. ಹೀಗೆ ಸಂದೇಹಿಸುತ್ತಿರುವ ಪೃಥುಕುಮಾರನನ್ನು ಅತ್ರಿಮಹರ್ಷಿಯು ಮೇಲೆಮೇಲೆ ನಿರ್ಬಂಧಿಸಿ ಪ್ರೇರಿಸುತಿದ್ದನು. ಕೊನೆಗೆ ಆ ಮಹರ್ಷಿಯಮಾತಿನಲ್ಲಿ ನಂಬಿಕೆಯಿಟ್ಟು, ವಿಜಿತಾಶ್ವನು,ಬಿಲ್ಲಿನಲ್ಲಿ ಬಾಣವನ್ನು ಸಂಧಾನಮಾಡಿದನು. ಹಿಂದಿನಂತೆಯೇ ಇಂದ್ರನು ಅವನ ಕೋಪಕ್ಕೆ ಹೆದರಿ, ತನ್ನ ಕುದುರೆಯನ್ನೂ ತನ್ನ ಪಾಷಂಡವೇಷವನ್ನೂ ಅಲ್ಲಿಯೇ ಬಿಟ್ಟು,ಕಣ್ಣಿಗೆ ಕಾಣದೆ ಓಡಿಹೋದನು.ವೀರನಾದ ವಿಜಿತಾಶ್ವನು ತಿರುಗಿ ಆ ಕುದುರೆಯನ್ನು ತನ್ನ ತಂದೆಯ ಯಜ್ಞಶಾಲೆಗೆತಂದೊಪ್ಪಿಸಿದನು.ವಿದುರಾ!ಜ್ಞಾನಹೀನರಾದಮೂಢರು ಇಂದ್ರನು ಬಿಟ್ಟುಹೋದ ನಿಂದ್ಯವಾದ ಪಾಷಂಡವೇಷವನ್ನು ಕೈಕೊಂಡುದರಿಂದ, ಆ ಕಾಲದಿಂದೀಚೆಗೆ ಪಾಷಂಡಮತವು ಪ್ರಾರಂಭಿಸಿತು. ಇಂದ್ರನು ಯಜ್ಞದ ಕುದುರೆಯನ್ನು ಕಳುವುದಕ್ಕಾಗಿ, !ಯಾವಯಾವ ವೇಷಗಳನ್ನು ಧರಿಸಿದ್ದನೋ, ಅವೆಲ್ಲವೂ ಪಾಪಚಿಹ್ನಗಳಾದುದರಿಂದಲೇ ಪಾಷಂಡವೆಂಬ (ಪಾಪಷಂಡವೆಂದು) ಕರೆಯಲ್ಪಡುವುವು. ಈ ವೇಷಗಳು ಜನಗಳಿಗೆ ಧರ್ಮಭ್ರಾಂತಿಯನ್ನು ಹುಟ್ಟಿಸಿ ಮರುಳುಮಾಡುವುವು. ಕಷ್ಟವಿಲ್ಲದೆ ಇವುಗಳನ್ನು ಸುಲಭವಾಗಿ ನಡೆಸಬಹುದು. ಮಿತವಾಗಿ ಮಾತನಾಡುವುದು,ಬಟ್ಟೆಯಿಲ್ಲದೆ ತಿರುಗುವುದು,ಇಲ್ಲವೇ ಕಾವಿಯ ಬಟ್ಟೆಗಳನ್ನುಡುವುದು,ಭಸ್ಮವನ್ನು ಧರಿಸುವುದು, ಇವೇ ಮೊದಲಾದ ಈ ಪಾಷಂಡಾಚಾರಗಳೆಲ್ಲವೂ ಹೊರಕ್ಕೆ ಪರಮಧಾರ್ಮಿಕವೆಂಬ ಭ್ರಾಂತಿಯನ್ನು ಹುಟ್ಟಿಸಿದರೂ, ಸ್ವಲ್ಪಮಾತ್ರವೂ ಧರ್ಮಸಮ್ಮತವಲ್ಲ.ಮೂಢಬುದ್ಧಿಯುಳ್ಳವರುಇದನ್ನು ನೋಡಿ ಮೋಸಹೋಗುವರು. ವಿದುರಾ! ಈ ವಿಚಾರವು ಹಾಗಿರಲಿ!ಇತ್ತಲಾಗಿಮಹಾತ್ಮನಾದ ಪೃಥುರಾಜನು ಇಂದ್ರನು ತನ್ನ ಯಾಗಕ್ಕೆ ಆಗಾಗ ಮಾಡುತ್ತಿರುವ ವಿಘ್ನವನ್ನು ನೋಡಿ.ಅತ್ಯಂತಕೋಪೋದ್ರಿಕ್ತನಾಗಿ ಆ ಇಂದ್ರನನ್ನು ಕೊಲ್ಲಬೇಕೆಂದು ನಿಶ್ಚಯಿಸಿ, ತಾನೇ ಧನುಸ್ಸಿನಲ್ಲಿ ಬಾಣಸಂಧಾನವನ್ನು ಮಾಡಿದನು ದೇವೇಂದ್ರನನ್ನು ಕೊಂದೇಬಿಡಬೇಕೆಂಬ ನಿಶ್ಚಯದಿಂದ ನಿಂತಿರುವ ಅಸಹ್ಯಪರಾಕ್ರಮವುಳ್ಳ ಆ ಪೃಥುಚಕ್ರವರ್ತಿಯನ್ನು ನೋಡಿ, ಅತ್ರಿ ಮೊದಲಾದ ಮಹರ್ಷಿಗಳೆಲ್ಲರೂ ಅವನನ್ನು ತಡೆದು ಸಮಾಧಾನವಾಕ್ಯದಿಂದ ಹೀ

ಗೆಂದು ಹೇಳುವರು. “ಓ ರಾಜೇಂದ್ರಾ ! ನೀನು ಕೋಪಿಸಬೇಡ ! ನಿನ್ನ ಯಾಗಕ್ಕೆ ಆಗಾಗ ವಿಘ್ನಗಳನ್ನು ಮಾಡುತ್ತಿರುವ ಈ ಇಂದ್ರನು, ಇದುವರೆಗೆ ನಿನ್ನ ಕೀರ್ತಿಯಿಂದಲೇ ನಿಸ್ತೇಜಸ್ಕನಾಗಿ ಹತಪ್ರಾಯನಾಗಿರುವನು. ಆದರೆ ಈಗಲೂ ಅವನನ್ನು ಕೊಲ್ಲುವುದಕ್ಕೆ ನಾವು ಬೇರೆ ಉಪಾಯವನ್ನು ಮಾಡುವೆವು. ಯಜ್ಞದೀಕ್ಷಿತನಾದ ನೀನು ಯಜ್ಞಪಶುವೊಂದನ್ನು ಹೊರತು ಬೇರೆಯಾವ ಪ್ರಾಣಿಯನ್ನೂ ನಿನ್ನ ಕೈಯಿಂದ ಕೊಲ್ಲಬಾರದು. ಈ ಯಜ್ಞಕ್ಕೆ ವಿರೋಧಿಯಾದ ಆ ದೇವೇಂದ್ರನನ್ನು ನಾವು ನಮ್ಮ ಮಂತ್ರಬಲದಿಂದಲೇ ಇಲ್ಲಿಗೆ ಕರೆತರಿಸಿ, ಪುರೋಡಾಶಾದಿಹವಿಸ್ಸುಗಳನ್ನು ಹೋಮಮಾಡುವಂತೆ, ಈ ಅಗ್ನಿಯಲ್ಲಿ ಅವನನ್ನೂ ಹೋಮಮಾಡಿಬಿಡುವೆವು.” ಎಂದು ಹೇಳಿ ಆ ರಾಜನನ್ನು ನಿವಾರಿಸಿ ಯಜ್ಞಕಾರ್ಯವನ್ನಾರಂಭಿಸಿದರು. ಒಡನೆಯೇ ಋತ್ವಿಕ್ಕುಗಳು ಸ್ರುಕ್ಕೆಂಬ ಹೋಮದ ಸಾಟನ್ನು ಕೈಗೆ ತೆಗೆದುಕೊಂಡು, ಕೋಪದಿಂದ ಹೋಮಕಾರ್ಯವನ್ನಾರಂಭಿಸುವಷ್ಟರಲ್ಲಿ, ಬ್ರಹ್ಮನು, ಈ ವೃತ್ತಾಂತವನ್ನು ತಿಳಿದು, ಥಟ್ಟನೆ ಆಯಜ್ಞಶಾಲೆಗೆ ಬಂದು “ಎಲೈ ಋತ್ವಿಕ್ಕುಗಳಿರಾ! ನಿಮ್ಮ ಕರ್ಮಗಳನ್ನು ಶಾಸ್ತ್ರೋಕ್ತವಾಗಿ ನಡೆಸತಕ್ಕ ಅಧಿಕಾರವುಮಾತ್ರ ನಮ್ಮದು? ನೀವೆಲ್ಲರೂ ಹೀಗೆ ಇಂದ್ರನನ್ನು ಕೊಲ್ಲುವುದಕ್ಕೆ, ಪ್ರಯತ್ನಿಸಿರುವುದು ಯುಕ್ತವಲ್ಲ. ಯಾಗವೆಂಬುದು ಭಗವಂತನಿಗೆಶರೀರವಲ್ಲದೆ ಬೇರೆಯಲ್ಲ. ಅದರಂತೆಯೇ ದೇವತೆಗಳೂ ಭಗವಂತನಿಗೆ ಬಹಳಪ್ರೀತಿಪಾತ್ರವಾದ ಶರೀರವೆನಿಸಿಕೊಂಡಿರುವರು. ಹೀಗಿರುವಾಗ ನೀವು ಆ ಭಗವಂತನ ಯಜ್ಞರೂಪವಾದ ಒಂದು ಶರೀರದಿಂದ, ಇಂದ್ರರೂಪವಾದ ಮತ್ತೊಂದು ಶರೀರವನ್ನು ಕೊಲ್ಲುವುದಕ್ಕೆ ಯತ್ನಿಸಬಹುದೆ ? ಎಲೈ ಬ್ರಾಹ್ಮಣರೆ ? ಇಂದ್ರನಾದರೋ ಈಗ ಈ ಧರ್ಮಕಾರ್ಯಕ್ಕೆ ವಿಘ್ನಮಾಡುವುದಕ್ಕೆ ಯತ್ನಿಸಿದುದರಿಂದ, ದೊಡ್ಡ ಅಪಕೀರ್ತಿಗೆ ಗುರಿಯಾಗಿರುವನು. ಆದುದರಿಂದ ಈ ಪೃಥುವು ತೊಂಬತ್ತೊಂಬತ್ತು ಯಾಗಗಳನ್ನು ಮಾತ್ರವೇ ನಡೆಸಿದವನಾದರೂ ಸಹಜವಾಗಿಯೇ ಇವನು ಇಂದ್ರನಿಗಿಂತಲೂ ಕೀರ್ತಿಯಲ್ಲಿ ಮೇಲೆನಿಸಿಕೊಂಡನು. ಇವನು ನೂರನೆಯ ಯಾಗವನ್ನು ಪೂರ್ತಿಗೊಳಿಸುವುದರಿಂದ ಪಡೆಯಬೇಕಾದ

ಹೆಚ್ಚು ಪ್ರಯೋಜನವೇನೂ ಕಾಣಲಿಲ್ಲ! ಆದುದರಿಂದ ಎಲೈ ಪೃಥು ರಾಜನೆ ! ಇದುವರೆಗೆ ನೀನು ಮಾಡಿದ ಯಾಗಗಳೇ ಸಾಕು ! ನಿನ್ನ ಯ ಜ್ಞಕಾರ್ಯವನ್ನು ಇಷ್ಟಕ್ಕೇ ನಿಲ್ಲಿಸಿಬಿಡು ! ಇದಲ್ಲದೆ ನೀನು ಮೋಕ್ಷಧರ್ಮ ಗಳನ್ನು ಚೆನ್ನಾಗಿ ಬಲ್ಲವನು. ಆ ಮೋಕ್ಷದಲ್ಲಿಯೇ ವಿಶೇಷವಾದ ಆಸಕ್ತಿ ಯುಳ್ಳವನು. ಈ ಯಜ್ಞಾದಿಕರ್ಮಗಳೆಲ್ಲವೂ ಮೋಕ್ಷಮಾರ್ಗಕ್ಕೆ ಪ್ರತಿಬಂ ಧಕಗಳೆಂಬುದನ್ನು ಕಾಣೆಯಾ? ಇದಲ್ಲದೆ ಇಂದ್ರನಮೇಲೆ ಕೋಪಮಾಡು ವುದೂ ನಿನಗೆ ಯುಕ್ತವಲ್ಲ!ನೀವಿಬ್ಬರೂ ಭಗವಂತನಿಗೆ ಶರೀರವೆನಿಸಿಕೊಂ ಡಿರತಕ್ಕವರು. ರಾಜಾ!ನಿನಗೆ ಕ್ಷೇಮವಾಗಲಿ!ನಾನು ಹೇಳುವುದನ್ನು ಶ್ರದ್ಧೆ ಯಿಂದ ಕೇಳು! ನಿನ್ನ ಯಜ್ಞವು ಪೂರ್ತಿಹೊಂದದುದಕ್ಕಾಗಿ ನೀನು ಚಿಂತಿಸ ಬೇಡ? ದೈವಸಂಕಲ್ಪದಿಂದ ಕೆಟ್ಟುಹೋದ ಕಾರ್ಯವನ್ನು ಕುರಿತು ಚಿಂತಿ ಸಿದಷ್ಟೂ, ಮನಸ್ಸು ಕೋಪಾವೇಶದಿಂದ ಕಲುಷಿತವಾಗಿ, ದೊಡ್ಡ ಮೋಹಾಂಧಕಾರದಲ್ಲಿ ಮುಳುಗಿಹೋಗುವುದು ಆದುದರಿಂದ ನೀನು ಚಿಂತೆಯನ್ನುಬಿಟ್ಟು ಯಾಗವನ್ನು ನಿಲ್ಲಿಸಿಬಿಡು! ಇಂತಹ ವಿಷಯಗಳಲ್ಲಿ ದೇ ವತೆಗಳಿಗೆ ಅಸೂಯೆಯೆಂಬುದು ಸಹಜವಾಗಿಯೇ ಹುಟ್ಟಿರುವುದು. ಅವ ರಿಗೆ ಸ್ವಾಭಾವಿಕವಾದ ಈ ದುರಾಗ್ರಹವನ್ನು ಬಿಡಿಸುವುದು ಸಾಧ್ಯವಲ್ಲ ! ನಿನ್ನ ಯಾಗವನ್ನು ಕೆಡಿಸುವುದಕ್ಕಾಗಿಯೇ ಇಂದ್ರನು ಆ ಪಾಷಂಡವೇಷಗ ಳನ್ನು ಕೈಕೊಳ್ಳಬೇಕಾಯಿತು!ನಿನ್ನ ಯಜ್ಞಾಶ್ವವನ್ನು ಕದ್ದೊಯ್ಯುವುದ ಕ್ಕಾಗಿ, ಇಂದ್ರನು ಯಾವ ಪಾಷಂಡವೇಷಗಳನ್ನು ತಾಳಿಬಂದನೋ, ಅವೆ ಲ್ಲವೂ ಜನಗಳನ್ನು ಮರುಳುಮಾಡಿ, ತನ್ನ ಕಡೆಗೆ ಸೆಳೆಯುತ್ತಿರುವುವು. ಅನೇಕಮೂಢಾತ್ಮರು ಪಾಷಂಡಿಗಳಾಗುತ್ತಿರುವುದನ್ನು ನೋಡು ! ಹಿಂದೆ ವೇನನ ಅಕೃತ್ಯಗಳಿಂದ ಲೋಕದಲ್ಲಿ ಧರ್ಮಮರ್ಯಾದೆಗಳೆಲ್ಲವೂ ಕೆಟ್ಟು ಹೋಗುತಿದ್ದ ಸಂದರ್ಭದಲ್ಲಿ, ಧರ್ಮರಕ್ಷಣೆಗಾಗಿಯೇ ನೀನು ಅವನ ಶರೀ ರದಿಂದ ಶ್ರೀಮಹಾವಿಷ್ಣುವಿನ ಅಂಶಭೂತನಾಗಿ ಜನಿಸಿದೆ. ಅಂತಹ ನೀ ನು, ಈ ಜಗತ್ತನ್ನು ಸೃಷ್ಟಿಸಿದ ಪ್ರಜಾಧಿಪತಿಗಳ ಸಂಕಲ್ಪವೇನೆಂಬುದ ನ್ನಾಲೋಚಿಸಿ, ಅವರ ಉದ್ದೇಶವನ್ನು ನೆರವೇರಿಸುವನಾಗು? ಲೋಕದ ಲ್ಲಿ ಧರ್ಮಲೋಪಕ್ಕೆ ನೆಲೆಯಾದ ಪಾಷಂಡಮಾರ್ಗವೆಂಬ ಆ ಇಂದ್ರನ ಮಾ

ಯೆಯನ್ನು ನೀನು ನಿನ್ನಶಕ್ತಿಯಿಂದ ನಾಶಹೊಂದಿಸಿದರೆ, ಇದರಿಂದಲೇ ಆ ಇಂದ್ರನಿಗೆ ಪ್ರತಿಕ್ರಿಯೆಯನ್ನು ಮಾಡಿದಂತಾಗುವುದು.” ಎಂದನು. ಬ್ರಹ್ಮನ ಈ ಹಿತವಾದವನ್ನು ಕೇಳಿ ಪೃಥುಮಹಾರಾಜನು, ಇಂದ್ರನೊಡನೆ ಸಂಧಿಯನ್ನು ಮಾಡಿಕೊಂಡು ಸ್ನೇಹಭಾವಹೊಂದಿದ್ದನು. ಮತ್ತು ಕರ್ಮಸಮರ್ಥನಾಗಿದ್ದರೂ ಆ ರಾಜನು, ಅಷ್ಟರಲ್ಲಿಯೇ ಯಜ್ಞಕಾರ್ಯವನ್ನು ನಿಲ್ಲಿಸಿ, ಅವಭೃಥಸ್ನಾನವನ್ನು ಮಾಡಿದನು. ಆತನ ಯಜ್ಞದಲ್ಲಿಹವಿರ್ಭಾಗಗಳಿಂದತೃಪ್ತರಾದ ದೇವತೆಗಳೆಲ್ಲರೂ ಅವನಲ್ಲಿ ಪ್ರಸನ್ನರಾಗಿ,ಅವನಿಗೆ ಬೇಕಾದ ವರಗಳನ್ನು ಕೊಟ್ಟರು. ಭೂರಿದಕ್ಷಿಣೆ, ಭೋಜನ ಮುಂತಾದುವುಗಳಿಂದ ಸತ್ಕೃತರಾದ ಬ್ರಾಹ್ಮಣರೆಲ್ಲರೂ, ಆರಾಜನಿಗೆ ಶುಭಾಶೀರ್ವಾದಗಳನ್ನುಮಾಡಿದರು. ಮತ್ತು ಪಿತೃಗಳು, ದೇವತೆಗಳು, ಮಹರ್ಷಿಗಳು, ಮನುಷ್ಯರು, ಮುಂತಾಗಿ ಆ ಯಾಗಕ್ಕೆ ಬಂದಿದ್ದವರೆಲ್ಲರೂ ರಾಜನಿಂದ ಯಥೋಚಿತವಾಗಿ ದಾನಸಮಾನಾದಿಗಳಿಂದ ಪೂಜಿತರಾದರು. ಇಲ್ಲಿಗೆ ಹದಿನೆಂಟನೆಯ ಅಧ್ಯಾಯವು.

---

## { ಮಹಾವಿಷ್ಣುವು ಪ್ರಸನ್ನನಾಗಿ ಪೃಥುಚಕ್ರವರ್ತಿಗೆ ಹಿತೋಪದೇಶಗಳನ್ನು ಮಾಡಿದುದು. }

ವಿದುರಾ ಕೇಳು! ಆಮೇಲೆ ಯಜ್ಞಪತಿಯಾಗಿಯೂ, ಯಜ್ಞಗಳಲ್ಲಿ ಕೊಡತಕ್ಕ ಹವಿಸ್ಸುಗಳನ್ನು ಭುಜಿಸತಕ್ಕವನಾಗಿಯೂ, ಸರ್ವಾಂತರ್ಯಾಮಿಯಾಗಿಯೂ ಇರುವ ಶ್ರೀಮಹಾವಿಷ್ಣುವೂಕೂಡ,ಆ ಪೃಥುವಿನ ಯಜ್ಞದಿಂದ ತೃಪ್ತನಾಗಿ,ದೇವೇಂದ್ರನೊಡಗೂಡಿ ಆ ರಾಜನಬಳಿಗೆಬಂದು ಹೀಗೆಂದು ಹೇಳುವನು.“ಎಲೈ ರಾಜೇಂದ್ರನೆ! ಈ ಇಂದ್ರನುನಿನ್ನ ಯಾಗಕ್ಕೆಭಂಗವನ್ನುಂಟುಮಾಡಿದುದೇನೋ ನಿಜವು! ಹಾಗಿದ್ದರೂ ನೀನು ಅವನ ಅಪರಾಧವನ್ನು ಮನ್ನಿಸಬೇಕು; ಅವನೇ ನಿನ್ನಲ್ಲಿ ಕ್ಷಮೆಯನ್ನು ಬೇಡುವುದಕ್ಕಾಗಿ ಬಂದಿರುವನು. ಲೋಕದಲ್ಲಿ ವಿವೇಕಬುದ್ಧಿಯುಳ್ಳ ನಿನ್ನಂತಹ ರಾಜಶ್ರೇಷ್ಠರು, ಇತರಪ್ರಾಣಿಗಳಿಗೆ ಸಾಧ್ಯವಾದಷ್ಟು ಉಪಕಾರವನ್ನುಮಾಡುವರೇ ಹೊರತು ದ್ರೋಹವನ್ನೆಣಿಸಲಾರರು. ಏಕೆಂದರೆ, ಅವರು, ಆತ್ಮಕ್ಕಿಂತಲೂ ದೇಹವು ಬೇರ್ಪಟ್ಟುದೆಂಬುದನ್ನು ಬಲ್ಲರು! ಆದುದರಿಂದ ದೇಹವೆಂಬುದು

ಬೇರೆಬೇರೆಯಾಗಿದ್ದರೂ, ಆತ್ಮವೆಲ್ಲವೂ ಒಂದೇ ಜ್ಞಾನಸ್ವರೂಪವೆಂಬ ಭಾವದಿಂದ,ಇತರಪ್ರಾಣಿಗಳಿಗೆದ್ರೋಹಮಾಡಲಾರರು.ನಿನ್ನಂತಹ ಪಂಡಿತರೇ ಹೀಗೆ ಭಗವನ್ಮಾಯೆಯಿಂದ ಮೋಹಿತರಾದಪಕ್ಷದಲ್ಲಿ, ಅವರು ಬಹುಕಾಲದಿಂದ ಹಿರಿಯರ ಸೇವೆಯನ್ನು ಮಾಡಿ ಪಡೆದ ಜ್ಞಾನವೆಲ್ಲವೂ ವ್ಯರ್ಥವೆನಿಸುವುದಲ್ಲವೆ? ಆದುದರಿಂದ ಪಂಡಿತನಾದವನು, ಈ ಶರೀರವೆಂಬುದು ಜೀವನಿಗೆ ಅವಿದ್ಯೆ, ಕಾಮ, ಕರ್ಮ ಎಂಬಿವುಗಳ ಮೂಲಕವಾಗಿ ಏರ್ಪಟ್ಟ ದೇಹೊರತು ಸಹಜವಲ್ಲವೆಂಬುದನ್ನು ತಿಳಿದು, ಆ ಶರೀರವನ್ನು ಕುರಿತು ಚಿಂತಿಸಲಾರನು. ದೇಹಾಭಿಮಾನವನ್ನೇ ಬಿಟ್ಟವರು, ಆ ದೇಹಾನುಬಂಧಿಗಳಾದ ಹೆಂಡತಿ,ಧನ,ಮುಂತಾದುವುಗಳಲ್ಲಿ ಹೇಗೆ ತಾನೇ ಮನಸ್ಸಿಡುವರು?ಜೀವಾತ್ಮನು ಒಂದೇಬಗೆಯಾದವನು, ನಿರ್ಮಲನು, ಸ್ವಯಂಪ್ರಕಾಶವುಳ್ಳವನು, ರಾಗದ್ವೇಷಾದಿಗಳೊಂದೂ ಇಲ್ಲದವನು, ಜ್ಞಾನಾನಂದಾದಿಗುಣಗಳುಳ್ಳವನು. ಅಣುಸ್ವರೂಪನಾಗಿದ್ದರೂ ಜ್ಞಾನದಿಂದಎಲ್ಲೆಲ್ಲಿಯೂವ್ಯಾಪಿಸಿರತಕ್ಕವನು. ಮುಚ್ಚುಮರೆಯಿಲ್ಲದವನು.ದೇಹವೇಮೊದಲಾದಇತರವಸ್ತುಗಳನ್ನುಸಾಕ್ಷಾತ್ಕರಿಸಬಲ್ಲವನು. ದೇಹದೊಳಗೆ ಸೇರಿ ಅದನ್ನು ಧರಿಸಿದ್ದರೂ,ಆ ಶರೀರಕ್ಕಿಂತಲೂ ಬೇರ್ಪಟ್ಟವನು. ಇಂತಹ ಶುದ್ಧಾತ್ಮನಿಗೆ ದೇಹಧರ್ಮಗಳಾದ ಹಸಿವು, ಬಾಯಾರಿಕೆ ಮುಂತಾದುವುಗಳಾಗಲಿ, ದೇಹಮನುಷ್ಯಾದಿಭೇದಗಳಾಗಲಿ ಇರುವುದಿಲ್ಲ. ಆದುದರಿಂದ ಆತ್ಮವೆಂಬುದು ದೇಹಕ್ಕಿಂತಲೂ ಬಹಳ ವಿಲಕ್ಷಣವಾಗಿರುವುದು. ಈ ಆತ್ಮಸ್ವರೂಪವು ಎಂತಹದೆಂಬುದಕ್ಕೆ, ಸುಷುಪ್ತಿಯೇ (ಗಾಢನಿದ್ರೆಯೇ) ದೃಷ್ಟಾಂತವು. ಆ ಸುಷುಪ್ತಿಯಲ್ಲಿನಾನೆಂಬ ಜ್ಞಾನವೊಂದೇ ತೋರುವುದೇಹೊರತು, ದೇವಮನುಷ್ಯಾದಿಭೇದಗಳೊಂದೂ ತೋರಲಾರವು. ಹೀಗೆ ದೇಹಕ್ಕಿಂತಲೂ ವಿಲಕ್ಷಣವಾದ ಜೀವಾತ್ಮನ ಸ್ವರೂಪವನ್ನೂ ,ಅಂತಹ ಆತ್ಮವೂಕೂಡ ಪರಮಾತ್ಮನಾದನನಗೆ ಒಳಪಟ್ಟಿರುವುದೆಂಬುದನ್ನೂ ತಿಳಿದು,ನನ್ನನ್ನು ಉಪಾಸಿಸುತಿದ್ದರೆ ಅಂತವನು ಪ್ರಕೃತಿಯಸಂಬಂಧವಿರುವಾಗಲೂಅದರಗುಣದೋಷಗಳಿಗೆಕಟ್ಟುಬೀಳಲಾರನು.ಫಲಾಪೇಕ್ಷೆಯಿಲ್ಲದೆ ತಮ್ಮತಮ್ಮ ವರ್ಣಾಶ್ರಮಧರ್ಮಗಳಿಂದ ಯಾವಾಗಲೂ ನನ್ನನ್ನು ಶ್ರದ್ಧೆಯೊಡನೆ ಆರಾಧಿಸುತಿದ್ದರೆ, ಅವನ ಮನಸ್ಸು

ಕ್ರಮಕ್ರಮವಾಗಿ ಮೆಲ್ಲಗೆ ತಿಳಿವುಹೊಂದುವುದು. ಹೀಗೆ ರಾಗದ್ವೇಷಾದಿ ದೋಷಗಳಿಲ್ಲವನ್ನೂ ತೊರೆದು,ಸಂಸಾರದಲ್ಲಿ ಜಿಹಾಸೆಯನ್ನು ಹೊಂದಿ,ಆತ್ಮ ಪರಮಾತ್ಮಸ್ವರೂಪವನ್ನು ಚೆನ್ನಾಗಿ ತಿಳಿಧವನು,ಹಸಿವು,ಬಾಯಾರಿಕೆ,ಮುಂತಾದ ಕಷ್ಟಗಳೊಂದೂ ಇಲ್ಲದ,ಶಾಂತವಾದ,ಕೈವಲ್ಯವೆಂಬ ಶುದ್ಧಾತ್ಮಸ್ವರೂಪವನ್ನು ಹೊಂದುವನು. ಪ್ರಕೃತಿಸಂಬಂಧವಿಲ್ಲದ ಆ ಶುದ್ಧಾತ್ಮಸ್ವರೂಪವೂ ನನಗೆ ಶರೀರವಾಗಿಯೇ ಇರುವುದು. ಯಾವನು ಆತ್ಮಕ್ಕೆ ಸಹಜವಾಗಿ ವಿಕಾರವಿಲ್ಲವೆಂದೂ, ಭೂತೇಂದ್ರಿಯಸಮುದಾಯದಿಂದ ಏರ್ಪಟ್ಟಿರುವ ದೇಹಕ್ಕೆ ಅವನೇ ಧಾರಕನೆಂದೂ, ಜೀವಾತ್ಮನಿಗೆ ತೋರುವ ವಿಕಾರಗಳೆಲ್ಲವೂ ಆ ಪ್ರಕೃತಿಸಂಬಂಧದಿಂದಲೇ ಉಂಟಾಗುವುದೆಂದೂ ತಿಳಿಯುವನೋ, ಅವನು, ಪ್ರಕೃತಿಯೊಡನೆ ಸೇರಿರುವಾಗಲೂ ಶುದ್ಧನಾಗಿ, ಕ್ಷೇಮವನ್ನೇ ಹೊಂದುವನು. ಈ ತ್ರಿಗುಣಗಳ ಸಂಬಂಧದಿಂದ ತೋರುವ ವಿಕಾರಗಳೆಲ್ಲವೂ ಶರೀರಕ್ಕೆಮಾತ್ರ ಸೇರಿದುವುಗಳಾಗಿದ್ದರೂ, ಆ ಶರೀರಸಂಬಂಧವಿದ್ದಾಗ, ಆತ್ಮನಿಗೂ ಜ್ಞಾನದಲ್ಲಿ ಹೆಚ್ಚು ಕಡಿಮೆಯುಂಟಾಗಿ, ಅದರಿಂದ ಸುಖದುಃಖಗಳನ್ನನುಭವಿಸಬೇಕಾಗುವುದು. ಆದುದರಿಂದ ಎಲೈ ರಾಜೇಂದ್ರನೆ! ದೇಹಾತ್ಮವಿವೇಚನೆಯುಳ್ಳ ಪಂಡಿತರು, ನನ್ನಲ್ಲಿಯೇ ನಟ್ಟ ಮನಸ್ಸುಳ್ಳವರಾಗಿ,ತಮಗೆ ದೇಹಸಂಬಂಧದಿಂದುಂಟಾಗಿರುವ ಸಂಪತ್ತುಗಳಲ್ಲಿಯಾಗಲಿ, ವಿಪತ್ತುಗಳಲ್ಲಿಯಾಗಲಿ, ತೋರಿಬರುವ ಸುಖದುಃಖಗಳಿಂದ ಕಲಗಲಾರರು. ನೀನೂ ಆತ್ಮಸ್ವರೂಪವನ್ನು ತಿಳಿದ ಪಂಡಿತನಾದುದರಿಂದ, ಇಂದ್ರಿಯಗಳನ್ನು ಜಯಿಸಿ,ಸುಖದುಃಖಗಳನ್ನು ಸಮವೆಂದು ಭಾವಿಸಿ, ನಿನಗಿಂತಲೂ ಮೇಲಾದ ದೇವತೆಗಳಲ್ಲಿಯಾಗಲಿ, ನಿನಗಿಂತ ಹೀನವಾದ ತಿರ್ಯಗ್ಜಾತಿಯಲ್ಲಿಯಾಗಲಿ, ನಿನಗೆ ಸಮಾನರಾದ ಮನುಷ್ಯರಲ್ಲಿಯಾಗಲಿ, ಭೇದಬುದ್ಧಿಯನ್ನೇ ಇಡದಿರಬೇಕು. ಮತ್ತು ನನ್ನ ಸಂಕಲ್ಪದಿಂದ ನಿನ್ನ ಸಹಾಯಕ್ಕಾಗಿ ಏರ್ಪಟ್ಟಿರುವ ಈ ನಿನ್ನ ಸಮಸ್ತಪರಿವಾರಗಳೊಡನೆ ಧರ್ಮದಿಂದ ಲೋಕವನ್ನು ಪಾಲಿಸುತ್ತಿರು. ರಾಜನಿಗೆ ಪ್ರಜೆಗಳನ್ನು ಪಾಲಿಸುವುದೇ ಉತ್ತಮಧರ್ಮವು. ಅದರಿಂದಲೇ ಅವನಿಗೆ ಸರ್ವವಿಧವಾದ ಶ್ರೇಯಸ್ಸೂ ಲಭಿಸುವುದು. ರಾಜನು ಪ್ರಜೆ

ಗಳನ್ನು ಕೆಟ್ಟದಾರಿಗೆ ಹೋಗದಂತೆ ಪಾಲಿಸುತಿದ್ದರೆ,ಪ್ರಜೆಗಳು ಮಾಡುವ ಪುಣ್ಯದಲ್ಲಿ ಅವನು ಆರರಲ್ಲಿ ಒಂದುಭಾಗವನ್ನು ಪಡೆಯುವನು.ಹೀಗಿಲ್ಲದೆ ಪ್ರಜೆಗಳನ್ನು ಹಿಂಸಿಸಿ ಕಪ್ಪವನ್ನು ತೆಗೆದುಕೊಳ್ಳುವ ರಾಜನ ಅಲ್ಪಸ್ವಲ್ಪಪುಣ್ಯಫಲಗಳೂ ಅವನ ಪ್ರಜೆಗಳಿಗೆ ಸೇರಿಹೋಗುವುದಲ್ಲದೆ,ಆಪ್ರಜೆಗಳ ಪಾಪಕ್ಕೆ ತಾನೇ ಭಾಗಿಯಾಗುವನು. ಆದುದರಿಂದ ಈಗ ರಾಜನಾದ ನೀನು, ಬ್ರಾಹ್ಮಣಶ್ರೇಷ್ಠರ ಹಿತೋಕ್ತಿಗಳನ್ನನುಸರಿಸಿ, ಧರ್ಮವನ್ನೇ ಮುಖ್ಯವಾಗಿಟ್ಟುಕೊಂಡು, ನಿನ್ನನ್ನು ಪ್ರಭುವೆಂದು ಭಾವಿಸದೆ,ಪ್ರಜೆಗಳಲ್ಲಿ ನೀನೂ ಒಬ್ಬನೆಂದು ತಿಳಿದು, ಪ್ರಜಾನುರಾಗವನ್ನು ಸಂಪಾದಿಸು! ಹೀಗೆ ರಾಜ್ಯಪರಿಪಾಲನವನ್ನು ಮಾಡುತ್ತಬಂದರೆ, ಶೀಘ್ರದಲ್ಲಿಯೇ ಯೋಗಸಿದ್ಧರಾದ ಸನಕಾದಿಮುನಿಗಳು ನಿನ್ನಮನೆಗೆ ತಾವಾಗಿಯೇ ಅತಿಥಿಗಳಾಗಿ ಬರುವರು. ನೀನು ಅವರಿಂದ ತತ್ವೋಪದೇಶವನ್ನು ಪಡೆದು ಮೋಕ್ಷವನ್ನೂ ಹೊಂದಬಹುದು. ಓ ರಾಜೇಂದ್ರಾ! ನಾನು ನಿನ್ನ ಗುಣಸ್ವಭಾವಗಳಿಗಾಗಿ ಸಂತೋಷಪಟ್ಟು ನಿನಗೆ ವಶನಾಗಿರುವೆನು. ನಿನಗೆ ಬೇಕಾದ ವರವನ್ನು ಕೇಳು. ಗುಣಹೀನರಾದವರು, ಯಾಗಗಳಿಂದಲೂ, ತಪಸ್ಸಿನಿಂದಲೂ. ಯೋಗದಿಂದಲೂ, ನನ್ನನ್ನು ಅನೇಕವಿಧದಿಂದ ಆರಾಧಿಸಿದರೂ,ನಾನು ಅವರಿಗೆ ಸುಲಭವಾಗಿ ಸಿಕ್ಕುವವನಲ್ಲ. ಸಮಸ್ತಭೂತಗಳನ್ನೂ ಸಮಬುದ್ಧಿಯಿಂದ ಭಾವಿಸತಕ್ಕ ಮಹಾತ್ಮರ ಮನಸ್ಸಿನಲ್ಲಿಯೇ ನಾನು ನೆಲೆಗೊಂಡಿರುವ ಸ್ವಭಾವವುಳ್ಳವನು. ಆದುದರಿಂದ ನೀನೂ ಇತರಭೂತಗಳಿಗೆದ್ರೋಹವನ್ನೆಣಿಸದೆ,ಸಮಬುದ್ಧಿಯುಳ್ಳವನಾಗಿ,ನನ್ನಲ್ಲಿ ಮನಸ್ಸಿಡು” ಎಂದನು.ಸಮಸ್ತಲೋಕಕ್ಕೂ ತಂದೆಯಂತೆ ಹಿತಕರನಾದ ಆ ಭಗವಂತನ ಉಪದೇಶವನ್ನು ಶಿರಸಾವಹಿಸಿ, ಪೃಥುಚಕ್ರವರ್ತಿಯು, ತನ್ನ ತಪ್ಪಿಗಾಗಿ ನಾಚಿಕೆಪಟ್ಟು, ಕಾಲಮೇಲೆ ಬಿದ್ದು ಕ್ಷಮೆಯನ್ನು ಬೇಡುತ್ತಿರುವ ದೇವೇಂದ್ರನನ್ನು ಪ್ರೀತಿಯಿಂದಾಲಿಂಗಿಸಿ, ಅವನಲ್ಲಿ ಸ್ನೇಹವನ್ನು ಬೆಳೆಸಿದನು. ಅನಂತರದಲ್ಲಿ ವಿಶ್ವಾತ್ಮಕನಾದ ಭಗವಂತನನ್ನು ಯಥೋಚಿತವಾಗಿ ಪೂಜಿಸಿ,ಭಕ್ತಿಯಿಂದ ಅವನ ಪಾದಗಳನ್ನು ಗಟ್ಟಿಯಾಗಿ ಹಿಡಿದನು. ಸತ್ಪುರುಷರಿಗೆ ಬಂಧುವೆನಿಸಿದ ಭಗವಂತನೂ, ಆ ರಾಜನನ್ನು ಪ್ರೇಮದಿಂದ ಮನ್ನಿಸಿ,ತಾನು ಹಿಂತಿರುಗಿ ಹೊರಡುವುದಕ್ಕೆ ಸಿದ್ಧನಾದನು.

ಆದರೆ ಆ ರಾಜನಲ್ಲಿರುವ ಪ್ರೀತಿಯಿಂದ ತಟ್ಟನೆ ಆ ಸ್ಥಳವನ್ನು ಬಿಟ್ಟು ಹೋಗಲಾರದೆ, ಅಲ್ಲಿಯೇ ನಿಂತು ಕಮಲದಂತಿರುವ ತನ್ನ ಪ್ರಸನ್ನನೇತ್ರಗಳಿಂದ ಸ್ವಲ್ಪಕಾಲದವರೆಗೆ ಅವನನ್ನು ನೋಡುತಿದ್ದನು. ಆಗ ರಾಜೇಂದ್ರನಾದ ಪೃಥುವು ಭಗವಂತನಮುಂದೆ ಬದ್ಧಾಂಜಲಿಯಾಗಿ ನಿಂತು, ಆತನ ದರ್ಶನಾನಂದವನ್ನನುಭವಿಸಬೇಕೆಂದು ಕಣ್ಣೆತ್ತಿ ನೋಡುವಷ್ಟರಲ್ಲಿಯೇ, ಅವನ ಕಣ್ಣುಗಳಲ್ಲಿ ಆನಂದಬಾಷ್ಪವು ತುಂಬಿದುದರಿಂದ, ನೋಡುವುದಕ್ಕೂ ಸಾಧ್ಯವಿಲ್ಲದ ಹಾಗಾಯಿತು. ಬಾಯಿಂದ ಮಾತು ಹೊರಡದಂತಾಯಿತು.ಹೀಗೆ ರಾಜನು ಆನಂದಬಾಷ್ಪವನ್ನು ಬಿಡುತ್ತ, ಆ ಭಗವಂತನನ್ನು ಮನಸ್ಸಿನಲ್ಲಿ ಮಾತ್ರವೇ ಭಾವಿಸುತಿದ್ದು, ಪ್ರಯತ್ನಪೂರ್ವಕವಾಗಿ ಕಣ್ಣೀರನ್ನೊರೆಸಿಕೊಂಡನು. ಎಷ್ಟೆಷ್ಟುನೋಡಿದರೂ ಕಣ್ಣುಗಳಿಗೆ ತೃಪ್ತಿಯನ್ನುಂಟುಮಾಡದ ದಿವ್ಯಸೌಂದರ್ಯವುಳ್ಳವನಾಗಿ, ಗರುತ್ಮಂತನ ಬೆನ್ನಿನಮೇಲೆ ಕೈಯಿಟ್ಟು, ನೆಲದಲ್ಲಿ ಕಾಲುಗಳನ್ನೂರಿ ಮುಂದೆ ನಿಂತಿದ್ದ ಆ ಭಗವಂತನನ್ನು ಹೀಗೆಂದು ಪ್ರಾರ್ಥಿಸುವನು. “ಹೇ ದೇವಾ! ನೀನು ವರಪ್ರದರಾದ ಬ್ರಹ್ಮಾದಿದೇವತೆಗಳಿಗೂ ವರವನ್ನು ಕೊಡತಕ್ಕ ಮಹಾಪ್ರಭುವೆನಿಸಿಕೊಂಡವನು. ನೀನು ಪ್ರಸನ್ನನಾಗಿರುವಾಗ ವಿವೇಕಬುದ್ಧಿಯುಳ್ಳ ಯಾವನು ತಾನೇ ನಿನ್ನಲ್ಲಿ ಅಲ್ಪವರಗಳನ್ನು ಪ್ರಾರ್ಥಿಸುವನು ? ನರಕದಂತೆ ಅನೇಕದುಃಖಗಳಿಗೆ ನೆಲೆಯಾದ ಸಂಸಾರದಲ್ಲಿ ಬಿದ್ದು, ಸತ್ವಾದಿಗುಣಗಳಿಂದ ಕಲಗಿದ ಮನಸ್ಸುಳ್ಳ ಮೂಢಾತ್ಮರು ಬಯಸತಕ್ಕ ಅಲ್ಪವರಗಳನ್ನು ನಾನು ನಿನ್ನಲ್ಲಿ ಬಯಸಲಾರೆನು. ಅಲ್ಪಸುಖಗಳ ಮಾತು ಹಾಗಿರಲಿ! ನಿನ್ನ ಪಾದಸೇವಾಸುಖವಿಲ್ಲದ ಕೈವಲ್ಯಕ್ಕಾದರೂ ನಾನು ಆಸೆಪಡತಕ್ಕವನಲ್ಲ.! ಮಹಾತ್ಮರ ಹೃದಯಕಮಲದಿಂದ ಹೊರಟು, ಅವರ ಮುಖದ್ವಾರದಿಂದ ಹೊರಕ್ಕೆ ಬಿಳುತ್ತಿರುವ ನಿನ್ನ ಗುಣಾಮೃತವೆಂಬ ಮಕರಂದವು ಎಲ್ಲಿ ಲಭಿಸಲಾರದೋ,ಅಂತಹ ಕೈವಲ್ಯವನ್ನಾದರೂ ನಾನು ಬಯಸತಕ್ಕವನಲ್ಲ ಆದುದರಿಂದ ನಿನ್ನ ಗುಣಾಮೃತವನ್ನು ಯಥೇಷ್ಟವಾಗಿ ಪಾನಮಾಡುವುದಕ್ಕೆ ತಕ್ಕಂತೆ, ನನಗೆ ಅಸಂಖ್ಯಾತಗಳಾದ ಕಿವಿಗಳನ್ನು ಕಲ್ಪಿಸಿಕೊಟ್ಟರೆ ಸಾಕು! ಇದೇ ಈಗ ನಾನು ನಿನ್ನಲ್ಲಿ ಕೇಳಿಕೊಳ್ಳುವ ವರವು. ಮ

ಹಾತ್ಮರ ಬಾಯಿಂದ ಪ್ರವಹಿಸುವ ನಿನ್ನ ಚರಿತ್ರಾಮೃತದಮೇಲೆ ಬೀಸಿಬಂದ ಗಾಳಿಯು ತಗುಲಿದಮಾತ್ರಕ್ಕೆ,ತತ್ವಮಾರ್ಗವನ್ನು ಮರೆತ ನಮ್ಮಂತಹಕು ಯೋಗಿಗಳಿಗೂ ಅದು,ನಿನ್ನ ಸ್ಮರಣವನ್ನುಂಟುಮಾಡಿ ಭಕ್ತಿಮಾರ್ಗಕ್ಕೆತಂ ದು ಸೇರಿಸುವುದು.ಆದುದರಿಂದ ಭಕ್ತಿವರ್ಧಕವಾದ ನಿನ್ನ ಕಥಾಶ್ರವಣವ ನ್ನು ಬಿಟ್ಟು, ಬೇರೆ ವರಗಳಿಂದ ನಮಗೆ ಆಗಬೇಕಾದುದೊಂದೂ ಇಲ್ಲ!ಓಮ ಹಾತ್ಮಾ! ಆದುದರಿಂದ ನನಗೆ ನಿನ್ನ ಭಕ್ತರಾದ ಮಹಾತ್ಮರ ಸಹವಾಸವೊಂ ದಿದ್ದರೆ, ಅನಾಯಾಸವಾಗಿಯೇ ಆಗಾಗ ನಿನ್ನ ಗುಣಗಳನ್ನು ಕಿವಿ ಯಿಂದ ಕೇಳುತ್ತಿರಬಹುದು. ಶ್ರೀಮಹಾಲಕ್ಷ್ಮಿಯೂಕೂಡ ಯಾವ ನಿನ್ನ ಗುಣಾಮೃತವನ್ನನುಭವಿಸಬೇಕೆಂಬುದಕ್ಕಾಗಿ ಆತುರಪಡುತ್ತಿರುವಳೋ ಅಂತಹ ನಿನ್ನ ಕೀರ್ತನಾಮೃವವನ್ನು, ಕೇವಲ ಪಶುಪ್ರಾಯನಾದ ಮೂ ಢನು ಹೊರತು, ಸಾರಜ್ಞನಾದ ಯಾವಮನುಷ್ಯನು ತಾನೇ ಅನಾದರಿಸಿ ಸುಮ್ಮನಿರುವನು? ಹೇ ಭಗವಂತಾ! ಬದ್ಧ ಮುಕ್ತನಿತ್ಯರೆಂಬ ಮೂರುಬಗೆ ಯ ಜೀವಾತ್ಮಗಳಿಗಿಂತಲೂ ಮೇಲೆನಿಸಿ,ಸಮಸ್ತ ಕಲ್ಯಾಣಗುಣಪರಿಪೂರ್ಣ ನಾಗಿರುವ ನಿನ್ನಲ್ಲಿ, ಲಕ್ಷ್ಮೀದೇವಿಯಂತೆ ನಿತ್ಯಸೇವೆಯನ್ನು ಮಾಡುತ್ತಿರ ಬೇಕೆಂಬುದೇ ನನ್ನ ಕೋರಿಕೆ ! ಆ ವಿಷಯದಲ್ಲಿ ನಾನು ಆ ಮಹಾಲಕ್ಷ್ಮಿ ಯೊಡನೆ ಸ್ಪರ್ಧೆಗೆ ನಿಂತರೂ, ನಿನ್ನ ಪಾದಾರವಿಂದಗಳಲ್ಲಿ ನಟ್ಟಮನ ಸ್ಸುಳ್ಳ ನಮ್ಮಿಬ್ಬರಲ್ಲಿ, ಪರಸ್ಪರಕಲಹದ ಚಿಂತೆಯು ಹುಟ್ಟಲಾರದು. ಅ ಥವಾ ಒಂದುವೇಳೆ ಈ ವಿಷಯವಾಗಿ ಲೋಕಮಾತೆಯಾದ ಆ ಶ್ರೀದೇವಿ ಯೊಡನೆ ನನಗೆ ವಿರೋಧವುಂಟಾದರೂ ಆಗಲಿ! ಅವಳಂತೆ ನಾನೂ ನಿನ್ನ ಸೇವೆಯಲ್ಲಿರುವೆನೇಹೊರತು, ಅವಳ ಭಯಕ್ಕಾಗಿ ನಾನು ನಿನ್ನ ಪಾದ ಸೇವೆಯನ್ನು ಬಿಟ್ಟುಬರುವವನಲ್ಲ! ದೀನವತ್ಸಲನಾದ ನೀನು, ನಿನ್ನ ಪಾ ದಾಶ್ರಿತರಲ್ಲಿರುವ ಅಲ್ಪಗುಣಗಳನ್ನೂ ಮಹತ್ತಾಗಿ ಭಾವಿಸತಕ್ಕವನು.ಆದು ದರಿಂದ ನಾನು ಶ್ರೀಮಹಾಲಕ್ಷ್ಮಿಯೊಡನೆ ವಿರೋಧಿಸಿಕೊಂಡರೂ, ನಿನಗೆ ನನ್ನಲ್ಲಿ ಪ್ರೇಮವು ತಪ್ಪಲಾರದು? ಪೂರ್ಣಕಾಮನಾಗಿ ಆತ್ಮಾನಂದದಲ್ಲಿರ ತಕ್ಕ ನಿನಗೆ,ಆಲಕ್ಷ್ಮಿಯಲ್ಲಿದಾಕ್ಷಿಣ್ಯದಿಂದ ಆಗಬೇಕಾದಪ್ರಯೋಜನವೇನು? ನೀನು ಶ್ರೀಮಹಾಲಕ್ಷ್ಮಿಯನ್ನೂ ಅನಾದರಿಸಿ ನಿನ್ನಪಾದಾಶ್ರಿತರಾದ ಭಕ್ತ

ರನ್ನು ಪ್ರೀತಿಸತಕ್ಕವನಾದುದರಿಂದಲೇ, ಮಹಾತ್ಮರಾದ ಸಾಧುಗಳು ನಿನ್ನ ನ್ನು ಭಜಿಸುವರು. ಅಂತಹ ಸತ್ಪುರುಷರಿಗೆ ನಿನ್ನಪಾದಸ್ಮರಣವನ್ನು ಬಿಟ್ಟು ಬೇರೆ ಯಾವ ಫಲಾಪೇಕ್ಷೆಯೂ ಇರಲಾರದು. ಹೇ ಜಗದೀಶಾ! ಈಗ ನೀನು ಭಕ್ತನಾದ ನನ್ನಲ್ಲಿಪ್ರಸನ್ನನಾಗಿ ವರವನ್ನು ಕೇಳಿಕೊಳ್ಳುವಂತೆ ಹೇಳಿದೆಯ ಲ್ಲವೆ? ಈ ನಿನ್ನ ಮಧುರವಾಕ್ಯವೂಕೂಡ ನಮ್ಮಂತಹಮೂಢಜನರನ್ನು ಮೋ ಸಗೊಳಿಸತಕ್ಕುದೆಂದೇ ತೋರುವುದು. ಬಹುಕಾಲದಿಂದ ಸಂಸಾರದಲ್ಲಿತೊಳ ಲಿದವರು, ದೈವವಶದಿಂದ ನಿನ್ನ ಅನುಗ್ರಹಕ್ಕೆ ಪಾತ್ರರಾದಾಗಲೂ, ಅವ ರಿಗೆ ನೀನು, ತಿರುಗಿ ಸಂಸಾರಕಾರಣಗಳಾದ ವರಗಳನ್ನು ಕೊಡುವಂತೆ ಆಸೆ ತೋರಿಸುವುದು, ವಿಷಮಿಶ್ರವಾದ ಹಾಲನ್ನು ತಂದು ಆಸೆತೋರಿಸುವಂತ ಲ್ಲವೆ? ಭಕ್ತರನ್ನನುಗ್ರಹಿಸುವುದೇ ಸ್ವಭಾವವಾಗಿ ಉಳ್ಳ ದಯಾಳುವಾದ ನಿ ನಗೆ ಇದು ಯುಕ್ತವಲ್ಲ! ಪ್ರಕೃತಿವಾಸನೆಯಿಂದ ಬುದ್ಧಿಗೆಟ್ಟು, ಸಂಸಾರ ಫಲಗಳನ್ನಪೇಕ್ಷಿಸಿ, ಅದಕ್ಕಾಗಿ ಯಜ್ಞಾದಿಕರ್ಮಗಳನ್ನು ನಡೆಸಿದರೂಕೂಡ, ನೀನು ಅವರಲ್ಲಿ ಮರುಕಗೊಂಡು, ಆ ಯಜ್ಞಾದಿಕರ್ಮಗಳನ್ನೇ ನಿನ್ನ ಆರಾಧ ನರೂಪವಾಗಿ ಕೈಕೊಂಡು, ಆ ನೆವದಿಂದ ಅವರಿಗೆ ಭಕ್ತಿಯನ್ನು ಹುಟ್ಟಿಸಿ ಮೋಕ್ಷವನ್ನು ಕೊಟ್ಟು ಕಾಪಾಡುವಷ್ಟುದಯಾಸ್ವಭಾವವುಳ್ಳವನು. ಸ್ವತಃ ವಿವೇಕಿಗಳಾದವರೋ, ಸಾಂಸಾರಿಕಫಲವನ್ನು ದುಃಖವೆಂವೇ ತಿಳಿದು, ಆತ್ಮ ಜ್ಞಾನಪರರಾಗಿ, ಆ ಆತ್ಮಕ್ಕೂ ಅಂತರಾತ್ಮನಾದ ನಿನ್ನನ್ನು ಭಜಿಸುವರು. ಅಂ ತವರು ನಿನ್ನಪಾದಧ್ಯಾನವೊಂದನ್ನಲ್ಲದೆ ಬೇರೆ ಯಾವುದನ್ನೂ ಅಪೇಕ್ಷಿಸಲಾ ರರು. ನಿನ್ನ ಇಚ್ಛಾರೂಪವಾದ ವೇದವೂಕೂಡ, ಇಹಲೋಕದ ಮತ್ತು ಪರಲೋಕದ ಸುಖಕ್ಕೆ ಬೇಕಾದ ಯಾಗಾದಿಕರ್ಮಗಳನ್ನು ವಿಧಿಸಿ, ಜನರಿಗೆ ಆಸೆಯನ್ನು ಹುಟ್ಟಿಸಿ, ಹಗ್ಗದಿಂದ ಬಿಗಿದಂತೆ ಆಕಡೆಗೇ ಎಳೆಯುತ್ತಿರು ವುದು. ಈ ಆಸೆಯನ್ನು ತೋರಿಸದಿದ್ದಪಕ್ಷದಲ್ಲಿ ಜನರೆಲ್ಲರೂ ಆ ಕರ್ಮಪ್ರ ವರ್ತನೆಯೇಇಲ್ಲದೆ ಮೋಕ್ಷದಲ್ಲಿಯೇ ದೃಷ್ಟಿಯಿಡುತಿದ್ದರು. ನಿನ್ನ ಮಾ ಯೆಯಿಂದ ಮೋಹಿತರಾದ ಚೇತನರಲ್ಲಿ, ಯಾವನಾದರೂ ಒಬ್ಬನು ದೈವಾ ಧೀನವಾಗಿ ನಿನ್ನನ್ನು ಭಜಿಸಿ, ನೀನು ಪ್ರಸನ್ನನಾಗಿರುವಾಗ ಮೋಕ್ಷವನ್ನುಬಿ ಟ್ಟು ಬೇರೆ ಫಲವನ್ನಪೇಕ್ಷಿಸಿದಪಕ್ಷದಲ್ಲಿ, ಅವನು ನಿನ್ನಿಂದ ವಂಚಿಸಲ್ಪಟ್ಟಂತೆ

ಯೇ ಆಗುವುದು. ಆದುದರಿಂದ ಸರ್ವನಿಯಾಮಕನಾದ ನೀನು, ತಂದೆ ಯು ಮಕ್ಕಳಿಗೆ ಹಿತವನ್ನು ಮಾಡುವಂತೆ, ನೀನಾಗಿಯೇ ನಮಗೆ ಹಿತವಾದ ಕಾರ್ಯವನ್ನು ನಡೆಸಬೇಕೇಹೊರತು, ಮೊದಲೇ ನಿನ್ನ ಮಾಯೆಯಿಂದ ಮೋ ಹಿತರಾದ ನಮ್ಮನ್ನು, ಈ ವಿಧವಾದ ಮಧುರವಾಕ್ಯದಿಂದ ಮತ್ತಷ್ಟು ಮೋ ಹಗೊಳಿಸಿ ಫಲಾಂತರಗಳನ್ನು ಕೇಳುವಂತೆ ಪ್ರೇರಿಸಬಾರದು." ಎಂದನು. ಇದನ್ನು ಕೇಳಿ ಭಗವಂತನು "ಎಲೈ ರಾಜೇಂದ್ರನೆ! ಚೆನ್ನಾಗಿ ಹೇಳಿದೆ! ನೀ ನು ಸಂಸಾರಿಗಳಿಗೆ ಆಸೆಹುಟ್ಟಿಸತಕ್ಕ ಅಲ್ಪಫಲಗಳನ್ನು ಕೇಳದೆಹೋದುದು ಯುಕ್ತವೇ! ನನ್ನಲ್ಲಿ ನಟ್ಟ ಮನಸ್ಸುಳ್ಳವನು, ಸ್ವರ್ಗವನ್ನಾಗಲಿ, ಆತ್ಮಾನು ಭವದಲ್ಲಿರತಕ್ಕ ಕೈವಲ್ಯವನ್ನಾಗಲಿ, ನರಕವನ್ನಾಗಲಿ ಸಮಾನವಾಗಿಯೇ ಭಾವಿಸುವನು. ನಾನು ನಿನ್ನ ವಿಷಯದಲ್ಲಿ ಬಹಳಸಂತೋಷಪಟ್ಟೆನು. ನೀನು ನನ್ನ ನಿಯಮವನ್ನು ಶ್ರದ್ಧೆಯಿಂದ ಅಂಗೀಕರಿಸಿ, ನಿಗ್ರಹಿಸಲಸಾಧ್ಯ ವಾದ ಕೋಪವನ್ನೂ ನಿಗ್ರಹಿಸಿದೆ! ಇದೇ ನೀನು ನನಗೆ ಮಾಡಿದಮೇಲಾ ದ ಆರಾಧನವು. ಎಲೈ ರಾಜನೆ! ನಿನಗೆ ನನ್ನಲ್ಲಿ ಆದೇವಿಧವಾಗಿ ಮೇಲೆ ಮೇಲೆ ಭಕ್ತಿಯು ಹೆಚ್ಚುತ್ತಿರಲಿ! ನಿನಗೆ ದೈವಾಧೀನವಾಗಿ ನನ್ನಲ್ಲಿ ಈ ವಿಧವಾದ ಭಕ್ತಿಯು ಹುಟ್ಟಿರುವುದು. ಈ ಭಕ್ತಿಯ ಮಹಿಮೆಯಿಂದಲೇ ನೀ ನು ದಾಟಲಸಾಧ್ಯವಾದ ಮಾಯೆಯನ್ನೂ ದಾಟಿದೆ! ಓ ರಾಜೇಂದ್ರಾ! ಈಗ ಲೂ ನಾನು ನಿನಗೆ ಒಂದು ವಿಷಯವನ್ನು ಆಜ್ಞಾಪಿಸುವೆನು. ಅದನ್ನು ನೀನು ಶ್ರದ್ಧೆಯಿಂದ ನಡೆಸುತ್ತಿರಬೇಕು. ನೀನು ಇನ್ನೂ ಕೆಲವು ಕಾಲದವರೆ ಗೆ ರಾಜ್ಯಭಾರದಲ್ಲಿದ್ದು, ಪ್ರಜೆಗಳಿಗೆ ಕ್ಷೇಮವನ್ನು ಕಲ್ಪಿಸಬೇಕು. ಈವಿಷ ಯದಲ್ಲಿ ನೀನು ಬಹಳಜಾಗರೂಕನಾಗಿರು! ನನ್ನ ಆಜ್ಞೆಯಂತೆ ನಡೆಯತಕ್ಕವ ನಿಗೆ ಸರ್ವವಿಧದಲ್ಲಿಯೂ ಕ್ಷೇಮವುಂಟು." ಎಂದನು. ಭಗವಂತನು ಹೀಗೆ ಆ ಪೃಥುವಿಗೆ ಸಮಾಧಾನವನ್ನು ಹೇಳಿ, ಅವನಿಂದ ಸತ್ಕೃತನಾಗಿ ಅವನನ್ನನುಗ್ರಹಿಸಿ ಅಲ್ಲಿಂದ ಹಿಂತಿರುಗುವುದಕ್ಕೆ ಯತ್ನಿಸಿದನು. ಆಗ ಅಲ್ಲಿದ್ದ ದೇವತೆಗಳೂ, ಋಷಿಗಳೂ, ಪಿತೃಗಳೂ, ಗಂಧರ್ವರೂ, ವಿದ್ಯಾಧರ ರೂ, ಚಾರಣರೂ, ಪನ್ನಗರೂ ಕಿನ್ನರರೂ, ಅಪ್ಸರಸ್ಸುಗಳೂ, ಮನುಷ್ಯ ರೂ, ಪಕ್ಷಿಗಳೂ, ಇನ್ನೂ ಇತರಭೂತಗಳೆಲ್ಲವೂ, ಆ ಪೃಥುಚಕ್ರವರ್ತಿಯಿಂ

ದ ಮನಸ್ಸು, ವಾಕ್ಕು, ಕಾಯಗಳೆಂಬ ತ್ರಿಕರಣಗಳಿಂದಲೂ, ಭಕ್ತಿಯಿಂದಲೂ, ಯಥೋಚಿತವಾಗಿ ಸತ್ಕರಿಸಲ್ಪಟ್ಟವರಾಗಿ ಆ ಭಗವಂತನನ್ನು ಹಿಂಬಾಲಿಸಿ ಹೊರಟರು. ಶ್ರೀಮನ್ನಾರಾಯಣನು ಆ ಯಾಗಭೂಮಿಯಿಂದ ಹೊರಡುವಾಗ, ಋತ್ವಿಕ್ಪುರೋಹಿತರೊಡಗೂಡಿದ ಆ ಪೃಥುಚಕ್ರವರ್ತಿಯ ಮನಸ್ಸನ್ನೂ ಎಳೆದುಕೊಂಡು ಹೋಗುವಂತೆ ಅಲ್ಲಿಂದ ಹಿಂತಿರುಗಿದನು. ಆಮೇಲೆ ಇತ್ತಲಾಗಿ ಪೃಥುಚಕ್ರವರ್ತಿಯು ತನಗೆ ಸ್ವಲ್ಪಕಾಲದವರೆಗೆ ದರ್ಶನವನ್ನುಕೊಟ್ಟು ಕಣ್ಮರೆಯಾದ ದೇವದೇವನಾದ ಆ ಭಗವಂತನಿಗೆ ನಮಸ್ಕರಿಸಿ, ತನ್ನ ಪಟ್ಟಣಕ್ಕೆ ಬಂದು ಸೇರಿದನು. ಇದು ಹತ್ತೊಂಬತ್ತನೆಯ ಅಧ್ಯಾಯವು.

---

## ಪು ರ ವ ರ್ಣ ನ ವು.

{ಪೃಥುಚಕ್ರವರ್ತಿಯು ತನ್ನ ಪ್ರಜೆಗಳಿಗೆ ಹಿತವನ್ನು ಹೇಳಿದುದು.}

ವಿದುರಾ! ಕೇಳು. ಪೃಥುಚಕ್ರವರ್ತಿಯು ಹಿಂತಿರುಗಿ ಬರುವ ವೃತ್ತಾಂತವು ಪುರಜನರಿಗೆ ತಿಳಿದೊಡನೆ, ಅವರೆಲ್ಲರೂ ಪಟ್ಟಣವನ್ನಲಂಕರಿಸುವುದಕ್ಕೆ ತೊಡಗಿದರು. ಮುತ್ತಿನ ಕುಚ್ಚುಗಳು ಹೂವಿನ ದಂಡೆಗಳು. ಸಣ್ಣ ದುಕೂಲದ ಪಟ್ಟೆಮಡಿಗಳು. ಸುವರ್ಣತೋರಣಗಳು, ಪರಿಮಳಯುಕ್ತವಾದ ಧೂಪಗಳು, ಚಂದನಜಲಸೇಚನಗಳು, ಇವೇ ಮೊದಲಾದ ವಿವಿಧಾಲಂಕಾರಗಳಿಂದ ಆ ಪಟ್ಟಣದ ಒಂದೊಂದು ಸಣ್ಣ ಬೀದಿಗಳೂ ಅಲಂಕರಿಸಲ್ಪಟ್ಟುವು. ಮತ್ತು ಅಲ್ಲಲ್ಲಿ ಪುಷ್ಪಗಳು, ಅಕ್ಷತೆಗಳು ಫಲಗಳು, ಧಾನ್ಯದ ತೆನೆಗಳು, ಭತ್ತದರಳುಗಳು, ದೀಪಗಳು, ಇವೇ ಮೊದಲಾದ ಮಂಗಳದ್ರವ್ಯಗಳೆಲ್ಲವೂ ಇಡಲ್ಪಟ್ಟಿದ್ದುವು. ಒಂದೊಂದು ಮನೆಯ ಬಾಗಿಲುಗಳಲ್ಲಿಯೂ. ಹಣ್ಣುಗೊನೆಗಳಿಂದ ಕೂಡಿದ ಬಾಳೆಯ ಕಂಬಗಳೂ, ಹೊಂಬಾಳೆಗಳೂ, ಕಟ್ಟಲ್ಪಟ್ಟಿದ್ದುವು. ಬೀದಿಗಳೆಲ್ಲವೂ. ಚಿಗುರಿನ ತೋರಣಗಳಿಂದ ಅಲಂಕೃತವಾಗಿದ್ದುವು. ಪ್ರಜೆಗಳೆಲ್ಲರೂ

ದೀಪಗಳನ್ನೂ, ಪೂಜಾದ್ರವ್ಯಗಳನ್ನೂ ಮೊಸರು ಮುಂತಾದ ಮಂಗಳದ್ರವ್ಯಗಳನ್ನೂ ಕೈಯಲ್ಲಿ ಹಿಡಿದು, ಅಲಂಕೃತರಾದ ಎಳೆವಯಸ್ಸಿನ ಕನ್ಯೆಯರನ್ನು ಸಂಗಡಕರೆದು ಕೊಂಡು ರಾಜನನ್ನಿದಿರುಗೊಳ್ಳುವುದಕ್ಕಾಗಿ ಹೊರಟರು. ಹೀಗೆ ಪ್ರಜೆಗಳೆಲ್ಲರೂ ತನ್ನನ್ನಿದಿರುಗೊಂಡು ಬರುತ್ತಿರಲು, ಪೃಥುಚಕ್ರವರ್ತಿಯು, ಶಂಖ ದುಂದುಭಿ ಮೊದಲಾದ ಮಂಗಳವಾದ್ಯಗಳೊಡನೆಯೂ, ಬ್ರಾಹ್ಮಣರ ಸ್ವಸ್ತಿವಾಚನಗಳೊಡನೆಯೂ ಪುರಪ್ರವೇಶಮಾಡಿದನು. ಸ್ತುತಿಪಾಠಕರು ಸುತ್ತಲೂನಿಂತು ತನ್ನ ಕೀರ್ತಿಯನ್ನು ಕೊಂಡಾಡುತಿದ್ದರೂ, ಆ ಸ್ತೋತ್ರಕ್ಕಾಗಿ ಸ್ವಲ್ಪವೂ ಮನಸ್ಸಿನಲ್ಲಿ ಗರ್ವಪಡದೆ, ಅರಮನೆಯನ್ನು ಪ್ರವೇಶಿಸಿದನು. ಪುರಪ್ರವೇಶಕಾಲದಲ್ಲಿ ತನ್ನನ್ನು ಸತ್ಕರಿಸಿದ ಪುರವಾಸಿಗಳನ್ನೂ, ದೇಶವಾಸಿಗಳನ್ನೂ ಯಥೋಚಿತವಾಗಿ ಪೂಜಿಸಿ, ಅವರಿಗೆ ಬೇಕುಬೇಕಾದ ಕೋರಿಕೆಗಳೆಲ್ಲವನ್ನೂ ಈಡೇರಿಸಿಕೊಟ್ಟು, ಸಂತೋಷದಿಂದ ರಾಜ್ಯವನ್ನು ನಡೆಸುತಿದ್ದನು. ಎಣೆಯಿಲ್ಲದ ಗುಣಾತಿಶಯವುಳ್ಳ ಆ ರಾಜನು, ಹೀಗೆ ಅನೇಕಮಹಾಕಾರ್ಯಗಳನ್ನು ನಡೆಸಿ, ಧರ್ಮದಿಂದ ರಾಜ್ಯವನ್ನು ಪಾಲಿಸುತಿದ್ದು,ತನ್ನ ಕೀರ್ತಿಯನ್ನು ಲೋಕದಲ್ಲಿ ಹರಡಿ,ದೇಹಾವಸಾನದಲ್ಲಿ ವಿಷ್ಣುಸಾನ್ನಿಧ್ಯವನ್ನು ಸೇರಿದನು" ಎಂದುಮೈತ್ರೇಯನು ಪೃಥುಚಕ್ರವರ್ತಿಯ ವೃತ್ತಾಂತವನ್ನು ವಿದುರನಿಗೆ ಹೇಳಿ ಮುಗಿಸುವಷ್ಟರಲ್ಲಿ,ವಿದುರನು ಆ ಪೃಥುಚಕ್ರವರ್ತಿಯ ಗುಣಾತಿಶಯಗಳನ್ನು ಕೇಳುವುದರಲ್ಲಿ ತೃಪ್ತಿಯಿಲ್ಲದೆ, ಆ ರಾಜನ ಮಹಾಮಹಿಮೆಯನ್ನು ಬಹಳವಾಗಿ ಕೊಂಡಾಡುತ್ತ ತಿರುಗಿಪ್ರಶ್ನಮಾಡುವನು. "ಓ ಮುನೀಂದ್ರಾ!ಮಹರ್ಷಿಗಳಿಂದ ರಾಜ್ಯದಲ್ಲಿ ಅಭಿಷಿಕ್ತನಾದ ಪೃಥುಚಕ್ರವರ್ತಿಯು,ಇಂದ್ರಾದಿದೇವತೆಗಳಿಂದಲೂ ಪೂಜಿತನಾಗಿ, ವೈಷ್ಣವಶಕ್ತಿಯುಳ್ಳ ತನ್ನ ತೋಳುಗಳಿಂದ ಗೋರೂಪಿಣಿಯಾದ ಭೂದೇವಿಯನ್ನು ಕರೆದು, ಲೋಕಕ್ಕೆ ಕ್ಷೇಮವನ್ನುಂಟುಮಾಡಿದನಷ್ಟೆ? ಅದರಿಂದಾಚೆಗೆ ಆತನು ನಡೆಸಿದ ಕಾರ್ಯಗಳೇನು?ಆ ಮಹಾತ್ಮನ ಯಶಸ್ಕರವಾದ ಚರಿತ್ರಗಳನ್ನು ಕೇಳುವುದರಲ್ಲಿ ಸಾರಜ್ಞನಾದವನೊಬ್ಬನೂ ಹಿಂತೆಗೆಯಲಾರನು. ಲೋಕಪೂಜ್ಯನಾದ ಯಾವ ಪೃಥುಮಹಾರಾಜನು, ಮೊದಲು ಭೂಮಿಯಿಂದ ಹೊರಕ್ಕೆ ತೆಗೆದ ವಸ್ತುಸಮೂಹಗ

ಳಿಂದಲೇ ಈ ಲೋಕದ ಸಮಸ್ತಪ್ರಜೆಗಳೂ, ಸಮಸ್ತರಾಜರೂ ಈಗಲೂ ಬದುಕುತ್ತಿರುವರೋ, ಅಂತಹ ಮಹಾತ್ಮನ ಚರಿತ್ರಗಳೆಲ್ಲವನ್ನೂ ನನಗೆ ಸಂಪೂರ್ಣವಾಗಿ ತಿಳಿಸಬೇಕು” ಎಂದನು. ಅದಕ್ಕಾ ಮೈತ್ರೇಯನು “ವಿದುರಾ ಕೇಳು! ಆ ಪೃಥುಚಕ್ರವರ್ತಿಯು ಗಂಗಾಯಮುನಾನದಿಗಳ ಮಧ್ಯದಲ್ಲಿರುವ ಬ್ರಹಾವರ್ತವೆಂಬ ಪುಣ್ಯಕ್ಷೇತ್ರದಲ್ಲಿ ವಾಸಮಾಡುತ್ತ, ದುರ್ವಿಷಯಗಳಿಗೆ ಪ್ರಯತ್ನಿಸದೆ, ಪೂರ್ವಜನ್ಮಾರ್ಜಿತವಾದ ತನ್ನ ಪುಣ್ಯಕರ್ಮಗಳನ್ನು ಕಳೆದುಕೊಳ್ಳುವುದಕ್ಕೆ ಬೇಕಾದ ಭೋಗಗಳನ್ನುಮಾತ್ರ ಅನುಭವಿಸುತ್ತ, ಧರ್ಮದಿಂದ ರಾಜ್ಯವನ್ನು ನಡೆಸುತಿದ್ದನು. ಅವನು ತನ್ನವೀರ್ಯದಿಂದ ಸಪ್ತದ್ವೀಪಗಳಲ್ಲಿಯೂ ತನ್ನ ಆಜ್ಞೆಗೆ ಅಡ್ಡಿಯಿಲ್ಲದಂತೆ ಮಾಡಿಕೊಂಡು, ಬ್ರಾಹ್ಮಣರನ್ನೂ,ಭಗವದ್ಭಕ್ತರನ್ನೂ ಹೊರತು, ಉಳಿದಜನರನ್ನೂ ಯಥೋಚಿತವಾಗಿ ದಂಡಿಸಿ, ಸನ್ಮಾರ್ಗಕ್ಕೆ ತರುತ್ತ ಪ್ರಜಾರಕ್ಷಣೆಯನ್ನು ನಡೆಸುತ್ತಿದ್ದನು. ಒಂದಾನೊಂದುಕಾಲದಲ್ಲಿ ಅವನು ಮಹಾಸತ್ರವೆಂಬ ಒಂದುಯಾಗವನ್ನು ನಡೆಸಬೇಕೆಂದು ಯತ್ನಿಸಿ, ದೀಕ್ಷೆಯನ್ನು ವಹಿಸಿದನು. ಆ ಯಾಗದಲ್ಲಿ ದೇವತೆಗಳೂ, ಬ್ರಹ್ಮರ್ಷಿಗಳೂ,ದೇವರ್ಷಿಗಳೂ ಬಂದು ನೆರೆದಿದ್ದಕಾಲದಲ್ಲಿ, ಪೃಥುಚಕ್ರವರ್ತಿಯು, ಆ ಸಭೆಗೆ ಬಂದಿದ್ದ ಮಹಾತ್ಮರೆಲ್ಲರನ್ನೂ ಯಥೋಚಿತವಾಗಿ ಪೂಜಿಸಿ ಸತ್ಕರಿಸಿದನು. ಹೀಗೆ ಅವನಿಂದ ಸತ್ಕೃತರಾದ ಮಹಾತ್ಮರೆಲ್ಲರೂ ಸಂತೋಷದಿಂದ ಕುಳಿತಿದ್ದಕಾಲದಲ್ಲಿ,ಆ ರಾಜೇಂದ್ರನು, ನಕ್ಷತ್ರಗಳನಡುವೆ ಉದಿಸಿಬಂದ ಪೂರ್ಣಚಂದ್ರನಂತೆ ಆ ಸಭಾಮಧ್ಯದಲ್ಲಿ ಮೇಲೆದ್ದುನಿಂತನು. ಹೀಗೆ ಸಭಾಮಧ್ಯದಲ್ಲಿ ನಿಂತಿದ್ದಾಗ ಆತನ ಮಹಾಪುರುಷಲಕ್ಷಣಗಳನ್ನು ಕೇಳಬೇಕೆ ? ಉನ್ನತವಾದ ಆಕೃತಿ ! ದುಂಡಗೆ ನೀಡಿದ ತೋಳುಗಳು ! ಹೊಂಬಣ್ಣವುಳ್ಳ ದೇಹಕಾಂತಿ ! ಕಮಲದಂತೆ ಕೆಂಪಾದ ಕಣ್ಣುಗಳು ! ಎಸಳಾದ ಮೂಗು ! ಅಂದವಾದ ಮುಖ ! ಸೌಮ್ಯವಾದ ಆಕೃತಿ! ಉಬ್ಬಿದ ಹೆಗಲು!ಮಂದಹಾಸವಿಶಿಷ್ಟವಾದ ಹಲ್ಲುಗಳು! ಅಗಲವಾದ ಎದೆ! ಉಬ್ಬಿದ ನಿತಂಬಗಳು! ಅರಳಿಯೆಲೆಯಂತೆ ಅಂದವಾದ ಆಕಾರವುಳ್ಳ ಹೊಟ್ಟೆ!ಸುಳಿಯಂತಿರುವ ಹೊಕ್ಕುಳು! ಅದ್ಭುತವಾದ ತೇಜಸ್ಸು!ಸುವರ್ಣದಂಡದಂತಿರುವ ತೊಡೆಗಳು!ಉಬ್ಬಿದ ಪಾದಗಳು!ಸೂ

ಕ್ಷ್ಮವಾಗಿಯೂ, ನುಣುಪಾಗಿಯೂ, ಕಪ್ಪಾಗಿಯೂ, ಸುಳಿಸುತ್ತಿದ ಕೂದ ಲುಗಳು! ಬಲಮುರಿಶಂಖದಂತಿರುವ ಕೊರಲು! ಇಂತಹ ದಿವ್ಯಸೌಂದರ್ಯ ವುಳ್ಳ ಆ ರಾಜನು, ಯಜ್ಞದೀಕ್ಷಿತನಾದುದರಿಂದ ವಿಶೇಷವಾಗಿ ಆಭರ ಣಗಳೊಂದನ್ನೂ ಧರಿಸದೆ, ತನ್ನ ಸ್ವಾಭಾವಿಕವಾದ ದೇಹಸೌಂದರ್ಯವೆಲ್ಲ ವನ್ನೂ ಹೊರಕ್ಕೆ ಕಾಣಿಸುವಂತೆ ಬೆಲೆಯುಳ್ಳ ಎರಡು ದುಕೂಲದ ಮಡಿಗ ಳನ್ನುಮಾತ್ರ ಧರಿಸಿ ನಿಂತಿದ್ದನು. ಕೃಷ್ಣಾಜಿನವನ್ನು ಧರಿಸಿ, ಬೆರಳಿನಲ್ಲಿ ದರ್ಭೆ ಯ ಪವಿತ್ರವನ್ನಿಟ್ಟು, ವಿಧ್ಯುಕ್ತವಾದ ಕಾರ್ಯಗಳನ್ನು ಮುಗಿಸಿಕೊಂಡು ಸಭಾಮಧ್ಯದಲ್ಲಿ ನಿಂತಿದ್ದ ಆ ರಾಜೇಂದ್ರನು, ಸ್ನೇಹಪೂರ್ವಕವಾದ ತನ್ನ ದೃಷ್ಟಿಯಿಂದಲೇ ಆ ಸಭಾಜನರೆಲ್ಲರನ್ನೂ ಸಂತೋಷಪಡಿಸುವಂತೆ, ಸುತ್ತಲೂ ಕಣ್ಣಿಟ್ಟು ನೋಡಿ, ಮೃದುಮಧುರವಾಗಿಯೂ, ಅರ್ಥವತ್ತಾಗಿ ಯೂ, ಸ್ಪಷ್ಟವಾಗಿಯೂ ಇರುವ ಮಾತಿನಿಂದ ಹೀಗೆಂದು ಹೇಳುವನು, “ಎಲೈ ಸಾಧುಗಳಿರಾ! ಕೇಳಿರಿ! ನಿಮಗೆ ಮಂಗಳವಾಗಲಿ! ಧರ್ಮವನ್ನು ತಿಳಿ ಯಬೇಕೆಂಬ ಅಪೇಕ್ಷೆಯುಳ್ಳವರು, ತಮ್ಮ ಮನಸ್ಸಿನ ಉದ್ದೇಶವನ್ನು ಹಿ ರಿಯರಲ್ಲಿ ವಿಜ್ಞಾಪಿಸಿಕೊಳ್ಳಬೇಕಾದುದು ಅವಶ್ಯವು ನಾನು ಈ ಲೋಕ ದಲ್ಲಿ ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನುಪಾಲಿಸಿ, ಪ್ರಜೆಗಳಿಗೆ ಜೀವನವನ್ನು ಕಲ್ಪಿಸಿ, ಅವರವರ ವರ್ಣಾಶ್ರಮಗಳನ್ನು ನೆಲೆಗೊಳಿಸುವುದಕ್ಕಾಗಿ ಭಗವಂ ತನಿಂದ ಸೃಷ್ಟಿಸಲ್ಪಟ್ಟೆನು. ಧರ್ಮಮರ್ಯಾದೆಯನ್ನು ಮೀರದೆ ಪ್ರಜೆಗಳನ್ನು ರಕ್ಷಿಸತಕ್ಕ ರಾಜನವಿಷಯದಲ್ಲಿ ಕರ್ಮಸಾಕ್ಷಿಯಾದ ಸರ್ವೇಶ್ವರನೇ ಪ್ರಸನ್ನನಾಗಿ ಅವನಿಗೆ ಮೋಕ್ಷವನ್ನು ಕೊಡುವನು. ಹೀಗಿರುವಾಗ ಧರ್ಮಿಷ್ಠನಾದ ರಾಜನಿಗೆ, ಬೇರೆ ಎಲ್ಲಾ ಅಭೀಷ್ಟಗಳನ್ನೂ ಸಾಧಿಸಿಕೊ ಡತಕ್ಕ ಯಾವಯಾವ ಪುಣ್ಯಲೋಕಗಳುಂಟೆಂದು ಹಿರಿಯರು ನಿರ್ಣಯಿಸಿ ರುವರೋ, ಆ ಲೋಕಗಳೆಲ್ಲವೂ ಉಂಟಾಗುವುದರಲ್ಲಿ ಸಂದೇಹವೇನಿದೆ ? ಯಾವ ರಾಜನು ಧರ್ಮದೃಷ್ಟಿಯಿಲ್ಲದೆ ಪ್ರಜೆಗಳಿಂದ ತೆರಿಗೆಗಳನ್ನು ಮಾತ್ರ ವಿಶೇಷವಾಗಿ ತೆಗೆಯುತ್ತಿರುವನೋ,ಅವನು ಆ ಪ್ರಜೆಗಳ ಪಾಪಕ್ಕೆ ಗುರಿಯಾಗುವುದುಮಾತ್ರವೇ ಅಲ್ಲದೆ,ತನಗೆ ಸಹಜವಾಗಿದ್ದ ಶಕ್ತಿಯನ್ನೂ, ತ ನ್ನ ರಾಜಶ್ರೀಯನ್ನೂ ಕಳೆದುಕೊಳ್ಳುವನು. ಆದುದರಿಂದ ಎಲೈ ಪ್ರಜೆಗಳೆ

ರಾ! ನೀವು ಕೇವಲಸ್ವಾರ್ಥಪರರಾಗಿ ನಿಮ್ಮನಿಮ್ಮ ವರ್ಣಾಶ್ರಮಧರ್ಮಗಳ ನ್ನು ನಿಮ್ಮ ಹಿತಕ್ಕಾಗಿಯೇ ಎಂದು ಭಾವಿಸದೆ, ನಿಮ್ಮನ್ನು ಪಾಲಿಸ ತಕ್ಕ ನನ್ನ ಪರಲೋಕಹಿತಕ್ಕಾಗಿಯೂ ಉದ್ದೇಶಿಸಿ, ಅಸೂಯೆಯನ್ನು ಬಿ ಟ್ಟು ಆ ಧರ್ಮಗಳೆಲ್ಲವನ್ನೂ ಭಗವದಾರಾಧನರೂಪವಾಗಿಯೇ ನಡೆಸುತ್ತ ಬನ್ನಿರಿ! ಇದೇ ನೀವು ನನ್ನಲ್ಲಿ ತೋರಿಸತಕ್ಕ ಅನುಗ್ರಹವು" ಎಂದನು ಆ ಮೇಲೆ ಆ ಸಭೆಯಲ್ಲಿದ್ದ ಪಿತೃದೇವತೆಗಳನ್ನೂ ದೇವತೆಗಳನ್ನೂ, ಋಷಿಗಳ ನ್ನೂ ನೋಡಿ "ಎಲೈ ಶುದ್ಧಾತ್ಮರಾದ ದೇವತೆಗಳಿರಾ! ನೀವು ಈ ನನ್ನ ನಿಯಮವನ್ನು ಪ್ರೀತಿಪೂರ್ವಕವಾಗಿ ಅನುಮೋದಿಸಬೇಕು. ಧರ್ಮಕಾರ್ಯ ವನ್ನು ನಡೆಸತಕ್ಕವನಿಗೂ, ಆ ಕಾರ್ಯಕ್ಕೆ ಪ್ರೇರಿಸಿದವನಿಗೂ, ಅದನ್ನನು ಮೋದಿಸಿದವನಿಗೂ ಪರಲೋಕದಲ್ಲಿ ಲಭಿಸತಕ್ಕ ಫಲವು ಸಮಾನವಾಗಿಯೇ ಇರುವುದು. ಎಲೈ ಸಾಧುಗಳಿರಾ!*ನಾಸ್ತಿಕರಾದ ಕೆಲವರು ಈಶ್ವರನೇ ಇಲ್ಲ ವಾದುದರಿಂದ ಪುಣ್ಯಪಾಪಕರ್ಮಗಳೂ, ಪರಲೋಕಚಿಂತೆಯೂ, ಮೊದ

* ನಿರೀಶ್ವರವಾದ ಖಂಡನವು—ಪ್ರಕೃತಿಪುರುಷರಿಗಿಂತಲೂ ಬೇರೆಯಾದ ಈಶ್ವರನೊಬ್ಬನುಂಟೆಂಬುದು ಯಾವ ಪ್ರಮಾಣದಿಂದಲೂ ಸಿದ್ಧವಾಗುವುದಿಲ್ಲ! ಅವನು ಕಣ್ಣಿಗೆ ಕಾಣುವುದಿಲ್ಲವಾದುದರಿಂದ ಪ್ರತ್ಯಕ್ಷಪ್ರಮಾಣವು ಕೆಲಸಕ್ಕೆ ಬಾರದು. ಬೇರೆ ದೃಷ್ಟಾಂತವು ಸಿಕ್ಕದುದರಿಂದ ಅನುಮಾನದಿಂದಲೂ ಸಿದ್ಧಿಸುವುದಕ್ಕೆ ಸಾಧ್ಯವಿಲ್ಲ ಕೇವಲ ಶಬ್ದಪ್ರಮಾಣವನ್ನೇ ನಂಬಿ ನಿಶ್ಚಯಿಸುವುದಕ್ಕಿಲ್ಲ. ಆದುದರಿಂದ ಈಶ್ವರನೊಬ್ಬನುಂಟೆಂಬುದಕ್ಕೆ ತಕ್ಕ ಆಧಾರವಿಲ್ಲವೆಂದು ನಾಸ್ತಿಕರು ಹೇಳುವುದುಂಟು. "ಆದರೆ ಚಿತ್ರಗಾರನಿಲ್ಲದೆ ಚಿತ್ರಪಟವು ಹೇಗೆ ಹುಟ್ಟಲಾರದೋ, ಹಾಗೆಯೇ ದೇವಮನುಷ್ಯಾದಿಭೇದಗಳುಳ್ಳ ಈ ವಿಚಿತ್ರಪ್ರಪಂಚವನ್ನು ನೋಡಿದಾಗ, ಅದನ್ನು ನಿರ್ಮಿಸತಕ್ಕ ನೈಪುಣ್ಯವುಳ್ಳವನೊಬ್ಬನಿದ್ದೇತೀರಬೇಕೆಂದು ಅಂಗೀಕರಿಸಬೇಕಲ್ಲವೆ?" ಎಂದರೆ, ಜೀವನು, ಪುಣ್ಯಪಾಪಕರ್ಮಗಳನ್ನು ನಡೆಸುತ್ತಿರುವುದರಿಂದಲೂ, ಪ್ರಕೃತಿಗೆ ಆಗಾಗ ವಿಕಾರಹೊಂದುತ್ತಿರುವುದೇ ಸ್ವಭಾವವಾದುದರಿಂದಲೂ, ಜೀವನ ಕರ್ಮಾನುಸಾರವಾಗಿ ಪ್ರಕೃತಿಯು ವಿಚಿತ್ರರೂಪವಾಗಿ ಮಾರ್ಪಡುತ್ತಿರುವುದೆಂದೂ, ಅದರಿಂದ ದೇವಮನುಷ್ಯಾದಿಭೇಧಗಳುಂಟಾಗುವುವೆಂದೂ, ಇದಕ್ಕಾಗಿ ಬೇರೆ ಈಶ್ವರನೊಬ್ಬನು ಇರಬೇಕಾದ ಅವಶ್ಯವಿಲ್ಲವೆಂದೂ ಸಾಧಿಸುವರು. ಇದು ನಂಬತಕ್ಕುದಲ್ಲ. ಸರ್ವಜ್ಞನಾದ ಈಶ್ವರನ ಸಾನ್ನಿಧ್ಯವಿಲ್ಲದಿದ್ದರೆ ಜಡವಾದ ಪ್ರಕೃತಿಗೆ ಅಂತಹ ವಿಚಿತ್ರರೂಪವನ್ನು ಹೊಂದತಕ್ಕ

ಲೇ ಇಲ್ಲವೆಂದು ಹೇಳುವುದುಂಟು. ತತ್ವಜ್ಞರಾದ ಸಜ್ಜನರು ಇದನ್ನೊಪ್ಪಲಾರರು. ಯಜ್ಞಾರಾಧ್ಯನಾಗಿಯೂ, ಯಜ್ಞಫಲಪ್ರದನಾಗಿಯೂ ಇರುವ ಸರ್ವೇಶ್ವರನೊಬ್ಬನು ಇದ್ದೇ ಇರುವನೆಂಬುದನ್ನು ಇವರು ಮನಃಪೂರ್ವಕವಾಗಿ ಒಪ್ಪಿಕೊಳ್ಳಬೇಕು. ಏಕೆಂದರೆ, ಈ ಲೋಕದಲ್ಲಿಯೂ ಪರಲೋಕದಲ್ಲಿಯೂ, ಅಲ್ಲಲ್ಲಿ ಕಾಂತಿವಿಶಿಷ್ಟಗಳಾದ ಮತ್ತು ವಿಚಿತ್ರಗಳಾದ ಕೆಲಕೆಲವು ಭೋಗಭೂಮಿಗಳುಂಟು! ಆಯಾಭೋಗಸ್ಥಾನಗಳಲ್ಲಿ ತಮ್ಮ ಪುಣ್ಯಾನುಸಾರವಾಗಿ ಭೋಗಗಳನ್ನು ಅನುಭವಿಸತಕ್ಕ ವಿಚಿತ್ರಶರೀರಗಳೂ ಕಾಣುತ್ತಿರುವುವು. ಪ್ರಕೃತಿಪುರುಷರಿಬ್ಬರಿಗಿಂತಲೂ ವಿಲಕ್ಷಣನಾದ ಈಶ್ವರನೊಬ್ಬನಿಲ್ಲದಪಕ್ಷದಲ್ಲಿ, ಈ ವ್ಯತ್ಯಾಸವೊಂದೂ ಕಾಣಲಾರವು. ಮನುವೂ, ಉತ್ತಾನಪಾದನೂ, ಧ್ರುವನೂ, ಪ್ರಿಯವ್ರತನೂ, ನನ್ನ ಅಜ್ಜನಾದ ಅಂಗರಾಜನೂ, ಬ್ರಹ್ಮರುದ್ರರೂ, ಪ್ರಹ್ಲಾದನೂ, ಬಲಿಯೂ, ಇವರಂತೆ ಇನ್ನೂ ಅನೇಕಮಹಾತ್ಮರೂ, ಸಮಸ್ತಕರ್ಮಗಳಿಗೂ ಫಲವನ್ನು ಕೊಡತಕ್ಕ ಈಶ್ವರನೊಬ್ಬನಿರುವನೆಂದು ದೃಢವಾಗಿ ಅಂಗೀಕರಿಸಿ

---

ಶಕ್ತಿಯುಂಟಾಗಲಾರದು. ಅದಕ್ಕೆ ಆ ಶಕ್ತಿಯು ಸಹಜವಾಗಿಯೇ ಏರ್ಪಟ್ಟಿರುವುದೆಂದು ಹೇಳುವಪಕ್ಷದಲ್ಲಿ, ಪ್ರಳಯಕಾಲದಲ್ಲಿ ಅದು ಶಾಂತವಾಗಿರಲಾರದು. ಆದುದರಿಂದ ಈಶ್ವರಶಕ್ತಿಯಿಂದಲೇ ಪ್ರಕೃತಿಗೆ ಆ ವಿಚಿತ್ರರೂಪಗಳುಂಟಾಗಬೇಕು ಈಶ್ವರನು ಸತ್ಯಸಂಕಲ್ಪನಾದುದರಿಂದ, ಅವನ ಸಂಕಲ್ಪವಿದ್ದಾಗ ಪ್ರಕೃತಿಯು ರೂಪಾಂತರವನ್ನು ಹೊಂದುತ್ತ, ಅವನ ಸಂಕಲ್ಪವಿಲ್ಲದಿದ್ದಾಗ ಶಾಂತವಾಗಿರುವುದೆಂದೂ ಗ್ರಹಿಸಬೇಕು. ಆದರೆ "ಕೇವಲ ಪ್ರಕೃತಿಗೆ ಆ ಶಕ್ತಿಯಿಲ್ಲದೆ ಹೋದರೂ, ಜೀವಸಂಬಂಧದಿಂದ ಆ ಶಕ್ತಿಯುಂಟಾಗಬಾರದೆ?" ಎಂದರೆ. ಅದೂ ಯುಕ್ತವಲ್ಲ. ಜೀವನು ತನ್ನ ಕರ್ಮಾನುಸಾರವಾಗಿ ತಾನೇ ಪ್ರಕೃತಿಯನ್ನು ಮಾರ್ಪಡಿಸಿಡುವನೆಂದು ನಂಬುವುದಕ್ಕಿಲ್ಲ. ತಾನೇ ಸ್ವೇಚ್ಛೆಯಿಂದ ತನಗೆ ಅನರ್ಥವನ್ನು ತಂದುಕೊಳ್ಳುವುದಕ್ಕೆ ಯಾವನೂ ಇಷ್ಟಪಡಲಾರನು. ಆಗ ಒಬ್ಬೊಬ್ಬನೂ, ತನ್ನನ್ನು ಉತ್ತಮಜನ್ಮದಲ್ಲಿಯೇ ಇರಿಸಿಕೊಳ್ಳುತಿದ್ದನೇ ಹೊರತು, ಪಶು ಪಕ್ಷಿ ಮೃಗಾದಿರೂಪಗಳಲ್ಲಿ ಪ್ರವೇಶಿಸುವುದಕ್ಕೆ ಇಷ್ಟಪಡಲಾರನು. ಆಗ ಯಾರಿಗೂ ಪಾಪಾನುಭವವವೇ ಇಲ್ಲದಂತಾಗುತಿತ್ತು ಆದುದರಿಂದ ಈ ಕಾರ್ಯಗಳೆಲ್ಲವನ್ನೂ ನಿಯಮಿಸತಕ್ಕ ಜೀವಾತಿರಿಕ್ತನಾದ ಈಶ್ವರನೊಬ್ಬನಿರುವನೆಂದು ಅಂಗೀಕರಿಸಿಯೇ ತೀರಬೇಕು.

ರುವರು. ಇವರು ತಾವಾಗಿಯೇ ಆ ಭಗವಂತನಿಂದ ಫಲವನ್ನೂ ಪಡೆದಿ ರುವರು. ಧರ್ಮಾರ್ಥಕಾಮಗಳನ್ನೂ, ಧರ್ಮಕ್ಕೆ ಫಲವಾದ ಸ್ವರ್ಗಾದಿಪುಣ್ಯ ಲೋಕಗಳನ್ನೂ, ಮೋಕ್ಷವನ್ನೂ ಕೊಡತಕ್ಕವನು ಆ ಈಶ್ವರನೊಬ್ಬನೇ ಎಂದು ಶ್ರುತಿಸ್ಮೃತಿಗಳೂ ವಿಶೇಷವಾಗಿ ಉದ್ಘೋಷಿಸುತ್ತಿರುವುವು. ವೇನನಂತೆ ಧರ್ಮಹೀನರಾದ ಕೆಲವು ಪಾಪಿಷ್ಠರುಹೊರತು, ಮಿಕ್ಕ ವರೆಲ್ಲರೂ ಈಶ್ವರನುಂಟೆಂಬುದನ್ನು ನಿಸ್ಸಂದೇಹವಾಗಿ ಒಪ್ಪಿಕೊಳ್ಳು ವರು. ಸಂಸಾರತಾಪತ್ರಯದಲ್ಲಿ ಸಿಕ್ಕಿದವರಿಗೆ, ಭಗವಂತನ ಪಾದಾರವಿಂದ ಗಳಲ್ಲಿ ಕ್ರಮಕ್ರಮವಾಗಿ ಭಕ್ತಿಯು ಹೆಚ್ಚಿ ಬರುವುದಾದರೆ, ಅದು ಆ ಭಗ ವಂತನ ಪಾದಾಂಗುಷ್ಠದಿಂದ ಹೊರಟ ಗಂಗಾಜಲದಂತೆ ಅವರಿಗೆ ಬಹು ಜನ್ಮಗಳಿಂದ ಅನುಸರಿಸಿಬಂದ ಮನಸ್ಸಿನ ಕಲ್ಮಷಗಳೆಲ್ಲವನ್ನೂ ನೀಗಿಸುವು ದು. ಹೀಗೆ ಮನಃಕಾಲುಷ್ಯವನ್ನು ತೊಲಗಿಸಿಕೊಂಡ ಮನುಷ್ಯನು, ಜ್ಞಾ ನವೈರಾಗ್ಯಗಳನ್ನು ಹೊಂದಿ, ಆದರ ಬಲದಿಂದ ಭಗವಂತನಪಾದಮೂಲದಲ್ಲಿ ಯೇ ನಟ್ಟಮನಸ್ಸುಳ್ಳವನಾಗುವನು.ಅವನಿಗೆ ತಿರುಗಿ,ಹುಟ್ಟು,ಮುಪ್ಪು,ಸಾ ವು,ಮುಂತಾದ ಕಷ್ಟಗಳಿಂದ ತುಂಬಿದ ಸಂಸಾರವೂತಗುಲುಕಟ್ಟಲಾರದು. ಆದುದರಿಂದ ಎಲೈ ಸಭ್ಯರೆ! ನೀವು ನಿಮ್ಮ ನಿಮ್ಮ ವರ್ಣಾಶ್ರಮಧರ್ಮಗಳಿಗೆ ಏರ್ಪಟ್ಟಿರುವ ಕರ್ಮಗಳಿಂದಲೂ, ಶಮದಮಾದಿಗುಣಗಳಿಂದಲೂ, ನಿಷ್ಕ ಪಟವಾದ ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ,ಆ ಭಗವಂತನ ಪಾದಾರವಿಂದಗಳನ್ನು ನಂಬಿ ಭಜಿಸುತ್ತಿರಿ! ಆ ಭಗವಂತನೇ ಸರ್ವಾರ್ಥಪ್ರ ದನೆಂಬ ನಿಶ್ಚಯದಿಂದ ಸೇವಿಸಿರಿ ! ಆ ಪರಮಾತ್ಮನು ಹೇಯಗುಣವಿಲ್ಲದವ ನು. ಅನಂತಕಲ್ಯಾಣಗುಣಪರಿಪೂರ್ಣನು. ಕೇವಲ ಜ್ಞಾನಾನಂದಸ್ವರೂ ಪನು. ಅಂತಹ ಪರಮಪುರುಷನು ತಾನೇ ವಿವಿಧಯಜ್ಞಸಾಮಗ್ರಿಗಳಾಗಿ ಯೂ, ಯಜ್ಞಗುಣಗಳಾಗಿಯೂ ಯಜ್ಞಕ್ರಿಯೆಗಳಾಗಿಯೂ, ಯಜ್ಞಮಂ ತ್ರಗಳಾಗಿಯೂ ಇರುವುದರಿಂದ, ಯಜ್ಞಮೂರ್ತಿಯೆನಿಸಿರುವನು. ಮತ್ತು ತಾನೇ ಆ ಯಾಗಕ್ಕೆ ಫಲಗಳಾದ ಸ್ವರ್ಗಾದಿಲೋಕಗಳಾಗಿಯೂ, ಆ ಫಲ ವನ್ನು ಕೊಡತಕ್ಕ ಅಗ್ನೀಂದ್ರಾದಿದೇವತೆಗಳಾಗಿಯೂ, ಆ ದೇವತಾವಾಚಕ ಗಳಾದ ಶಬ್ದಗಳಾಗಿಯೂ ಇರುವನು. ಆದುದರಿಂದ ಯಜ್ಞಸಾಮಗ್ರಿಗ

ಗಳಾಗಲಿ, ಯಜ್ಞಫಲಗಳಾಗಲಿ, ಆ ಯಜ್ಞಫಲಗಳನ್ನು ಕೊಡತಕ್ಕ ದೇವತೆಗಳಾಗಲಿ ಆ ಭಗವಚ್ಛರೀರಗಳೇಹೊರತು ಬೇರೆಯಲ್ಲ. ಅಗ್ನೀಂದ್ರಾದಿದೇವತೆಗಳನ್ನಾರಾಧಿಸಿದರೂ ಕೂಡ, ಆ ಆರಾಧನವು, ಅವರಲ್ಲಿ ಅಂತರಾತ್ಮನಾದ ಪರಮಾತ್ಮನಿಗೇ ಸೇರುವುದರಿಂದ, ಯಾವ ದೇವತೆಗಳನ್ನಾರಾಧಿಸಿದರೂ ಆ ಒಬ್ಬ ಪರಮೇಶ್ವರನನ್ನೇ ಆರಾಧಿಸಿದಂತಾಗುವುದು. ಮತ್ತು ಆ ಭಗವಂತನು ಸರ್ವವ್ಯಾಪಿಯಾದವನು. ಅವನು ಪ್ರಕೃತಿ,ಕಾಲ,ಪೂರ್ವವಾಸನೆ,ಕರ್ಮವೆಂಬಿವುಗಳಿಂದ ಏರ್ಪಟ್ಟಿರುವ ಶರೀರದಲ್ಲಿ, ತಾನೇ ಜೀವಾತ್ಮನ ಮೂಲಕವಾಗಿ ಪ್ರವೇಶಿಸಿ,ಶಬ್ದಾದಿವಿಷಯಗಳನ್ನನುಭವಿಸತಕ್ಕ ಜ್ಞಾನದಿಂದ,ತಾನೇಕರ್ಮಫಲಗಳಾದ ಸ್ವರ್ಗಾದಿಗಳನ್ನನುಭವಿಸತಕ್ಕವನಾಗಿಯೂ, ಆಯಾ ಫಲವಾಗಿಯೂ ಇರುವನೆಂದು ಹಿರಿಯರು ನಿಶ್ಚಯಿಸಿರುವರು. ಆದುದರಿಂದ ಯಜ್ಞಾದಿ ಕರ್ಮಗಳಾಗಲಿ, ಆ ಕರ್ಮಗಳಿಂದ ಆರಾಧಿಸಲ್ಪಡತಕ್ಕವನಾಗಲಿ, ಕರ್ಮಫಲವಾಗಲಿ, ಆ ಫಲವನ್ನು ಅನುಭವಿಸತಕ್ಕವನಾಗಲಿ, ಆ ಈಶ್ವರನೊಬ್ಬನೇಹೊರತು ಮತ್ತೊಬ್ಬನಲ್ಲ. ಹೀಗಿದ್ದರೂ ಅಗ್ನಿಯು ಕಟ್ಟಿಗೆಯಲ್ಲಿ ಸೇರಿದಾಗ, ಆ ಕಟ್ಟಿಗೆಯ ಆಕಾರಕ್ಕೆತಕ್ಕಂತೆ, ಸ್ಥೂಲವಾಗಿಯೂ,ಸೂಕ್ಷ್ಮವಾಗಿಯೂ, ವಕ್ರವಾಗಿಯೂ,ಆಕಾರಭೇದದಿಂದ ಕಾಣುವಂತೆ,ಪರಮೇಶ್ವರನು ಜೀವನಮೂಲಕವಾಗಿ ಶರೀರಸಂಬಂಧದಿಂದ ಆಕಾರಭೇದವನ್ನು ಹೊಂದಿದಾಗಲೂ ಶರೀರಗತವಾದದೋಷಕ್ಕೆತಾನು ಈಡಾಗಲಾರನು. ಆದುದರಿಂದ ಎಲ್ಲೈಪ್ರಜೆಗಳಿರಾ! ನನ್ನ ದೇಶವಾಸಿಗಳಾದ ನೀವೆಲ್ಲರೂ, ದೃಢಮನಸ್ಸುಳ್ಳವರಾಗಿ, ನಿಮ್ಮನಿಮ್ಮ ವರ್ಣಾಶ್ರಮಧರ್ಮಗಳಿಂದ ಸರ್ವದೇವಾಂತರ್ಯಾಮಿಯಾಗಿಯೂ, ಭಕ್ತೋದ್ಧಾರಕನಾಗಿಯೂ, ಆಶ್ರಿತರ ಪಾಪವನ್ನು ನೀಗಿಸತಕ್ಕವನಾಗಿಯೂ ಇರುವ ಆ ಭಗವಂತನನ್ನೇ ಭಜಿಸುತ್ತಿರುವುದರಿಂದ, ನೀವು ನನ್ನಮೇಲೆ ಪೂರ್ಣಾನುಗ್ರಹವನ್ನು ತೋರಿಸಿದಂತಾಯಿತು!

ಆ ರೀತಿಯಲ್ಲಿಯೇ ನೀವು ಬ್ರಾಹ್ಮಣಕುಲವನ್ನೂ ಆರಾಧಿಸುತ್ತಿರಬೇಕು ಭಗವಂತನೊಬ್ಬನುಹೊರತು ಬೇರೆ ದೈವವಿಲ್ಲವೆಂದುನಂಬಿ,ತಪಸ್ಸಿನಿಂದಲೂ, ತಾಳ್ಮೆಯಿಂದಲೂ, ಬ್ರಹ್ಮೋಪಾಸನದಿಂದಲೂ, ಅತಿಥಿಪೂಜೆಗಳಿಂದಲೂ, ಶಮದಮಾದಿಗುಣಗಳಿಂದಲೂ ಕೂಡಿ, ಅಗ್ನಿಯಂತೆ ತೇಜ

ಸ್ವಿಗಳಾದ ಬ್ರಾಹ್ಮಣರ ವಿಷಯದಲ್ಲಿ ಯಾವ ರಾಜನೂ ಸ್ವಲ್ಪಮಾತ್ರವೂ ತಪ್ಪಿ ನಡೆಯಬಾರದು. ಅದರಂತೆಯೇ ಬ್ರಾಹ್ಮಣರೂಕೂಡ ತಮ್ಮನ್ನು ಪಾಲಿಸುವ ಪ್ರಭುಗಳು ಐಶ್ವರ್ಯಮದದಿಂದ ಒಂದುವೇಳೆ ಬುದ್ಧಿಗೆಟ್ಟು ನಡೆದರೂ,ಅವರನ್ನು ತಮ್ಮ ಕೋಪಕ್ಕೀಡುಮಾಡದೆ ತಾಳ್ಮೆಯನ್ನೇ ವಹಿಸಬೇಕು. ಬ್ರಾಹ್ಮಣರೂ, ರಾಜರೂ, ಅನ್ಯೋನ್ಯಾನುರಾಗವುಳ್ಳವರಾಗಿದ್ದಾಗಲೇ ರಾಜ್ಯಕ್ಕೆ ಕ್ಷೇಮವು. ಎಲೈ ಪ್ರಜೆಗಳಿರಾ! ಬ್ರಾಹ್ಮಣಪ್ರಿಯರಾದ ಮನು ಮೊದಲಾದವರಿಗೆ ಪ್ರಭುವಾಗಿಯೂ, ಪುರಾಣಪುರುಷನಾಗಿಯೂ ಇರುವ ಶ್ರೀಹರಿಯೂಕೂಡ,ತನಗೆ ಲಕ್ಷ್ಮಿಯು ನಿತ್ಯಾನಪಾಯಿನಿಯಾಗಿರುವುದೂ,ತನ್ನ ಕೀರ್ತಿಯು ಲೋಕಪಾವನವಾಗಿರುವುದೂ, ತಾನು ಮಹಾತ್ಮನಿಗೂ ಮಹಾತ್ಮನೆನಿಸಿಕೊಂಡಿರುವುದೂ, ನಿತ್ಯವೂ ತಾನು ಬ್ರಾಹ್ಮಣರ ಪಾದಾರವಿಂದವನ್ನು ನಮಸ್ಕರಿಸುವುದರಿಂದುಂಟಾದ ಫಲವೆಂದೇ ಭಾವಿಸುತ್ತಿರುವನು ಮತ್ತು ಸರ್ವಹೃದಯಾಂತರ್ವರ್ತಿಯಾಗಿ, ಸರ್ವಸ್ವತಂತ್ರನಾಗಿರುವ ಆ ಸರ್ವೇಶ್ವರನು, ಬ್ರಾಹ್ಮಣಸೇವೆಯಿಂದಲೇ ವಿಶೇಷವಾಗಿ ಸಂತೋಷಪಡುವನು. ಆದುದರಿಂದ ವೈಷ್ಣವಧರ್ಮಪರರಾದ ನಿಮ್ಮಿಂದ, ಸರ್ವಪ್ರಕಾರದಲ್ಲಿಯೂ ಆ ಬ್ರಾಹ್ಮಣಕುಲವು ವಿಶೇಷವಾಗಿ ಆರಾಧಿಸಲ್ಪಡಲಿ! ಈ ಬ್ರಾಹ್ಮಣಕುಲವನ್ನು ಎಡೆಬಿಡದೆ ಸೇವಿಸುತ್ತ ಬರುವವರೆಗೆ,ಅನಾಯಾಸವಾಗಿಯೇ ಮನಸ್ಸು ಶುದ್ಧವಾಗಿ, ಶಾಂತ್ಯಾದಿಗುಣಗಳೆಲ್ಲವೂ ಉಂಟಾಗುವುವು. ಶಾಂತಿಗುಣವಿದ್ದವನಿಗೆ ಯಾವುದೂ ದುರ್ಲಭವಲ್ಲ. ಯಾಗದಲ್ಲಿ ಹವಿಸ್ಸನ್ನು ಭುಜಿಸತಕ್ಕ ಇಂದ್ರಾದಿದೇವತೆಗಳಿಗೂ ಬ್ರಾಹ್ಮಣರೇ ಪೂಜ್ಯರೆನಿಸಿರುವುದರಿಂದ, ಇವರನ್ನು ಸಂತೋಷಪಡಿಸುವುದರಿಂದ ದೇವತೆಗಳೂ ಪ್ರಸನ್ನರಾಗುವರು. ದೇವತೆಗಳು ಅಗ್ನಿಮುಖರೆಂದು ಪ್ರಸಿದ್ಧರಾಗಿದ್ದರೂ, ಬ್ರಾಹ್ಮಣರ ಮುಖದಿಂದ ಕೊಟ್ಟ ಹವಿಸ್ಸಿನಿಂದ ಭಗವಂತನು ತೃಪ್ತಿಹೊಂದುವಂತೆ, ಅಚೇತನವಾದ ಅಗ್ನಿಯಲ್ಲಿ ಹೋಮಮಾಡಿದ ಹವಿಸ್ಸುಗಳಿಂದ ತೃಪ್ತನಾಗಲಾರನು. ಹೀಗೆ ಅಗ್ನಿಮುಖವಾಗಿ ಕೊಟ್ಟ ಹವಿಸ್ಸಿಗಿಂತಲೂ ಬ್ರಾಹ್ಮಣಮುಖವಾಗಿ ಕೊಟ್ಟ ಹವಿಸ್ಸು ಭಗವಂತನಿಗೆ ಹೆಚ್ಚು ತೃಪ್ತಿಯನ್ನುಂಟುಮಾಡುವುದಕ್ಕೆ, ಅಗ್ನಿಯು ಅಚೇತನವೆಂಬುದೊಂದೇ ಕಾರಣವಲ್ಲ.

ಚೇತನಪದಾರ್ಥಗಳಲ್ಲಿಯೂ ಬ್ರಾಹ್ಮಣರು ಕೇವಲಜ್ಞಾನನಿಷ್ಠರಾದುದ ರಿಂದ, ಅಂತಹ ಜ್ಞಾನನಿಷ್ಠರು,ತನಗೆ ಬಹಳ ಪ್ರೀತಿಪಾತ್ರರೆಂದು ಭಗವಂ ತನು ತಾನಾಗಿಯೇ ಹೇಳಿರುವನು. ಆದುದರಿಂದ ಬ್ರಾಹ್ಮಣರ ಬಾಯಲ್ಲಿಟ್ಟ ಹವಿಸ್ಸನ್ನು, ಭಗವಂತನು ತನ್ನ ಬಾಯಲ್ಲಿಟ್ಟಂತೆಯೇ ಭಾವಿಸಿ ಅತ್ಯಾದ ರದಿಂದ ಭುಜಿಸುವನು. ಇದಲ್ಲದೆ, ಬ್ರಾಹ್ಮಣರು ರಾಗದ್ವೇಷಾದಿದೋಷ ಗಳೊಂದೂ ಇಲ್ಲದವರು. ಮತ್ತು ನಿತ್ಯವಸ್ತುವಾದ ಪರಬ್ರಹ್ಮವನ್ನೂ, ಆ ಬ್ರಹ್ಮಸ್ವರೂಪವನ್ನೂ, ಪ್ರಪಂಚಸ್ವರೂಪವನ್ನೂ,ಕೈಕನ್ನಡಿಯಂತೆ ಸ್ಪ ಷ್ಟವಾಗಿ ತೋರಿಸಿಕೊಡತಕ್ಕ ವೇದದ ತತಾರ್ಥವನ್ನೂ,ಶ್ರದ್ಧೆ, ತಪಸ್ಸು, ಸದಾಚಾರ,ಮೌನ, ಇಂದ್ರಿಯನಿಗ್ರಹ, ಧ್ಯಾನ, ಮುಂತಾದ ಮಾರ್ಗಗಳಿಂ ದ, ತಮ್ಮಲ್ಲಿ ಧರಿಸಿಟ್ಟುಕೊಂಡಿರತಕ್ಕವರು. ಆದುದರಿಂದ ಎಲೈ ಸಾಧು ಗಳಿರಾ! ಅಂತಹ ಬ್ರಾಹ್ಮಣರ ಪಾದಧೂಳಿಯು ನನ್ನ ಜೀವಾವಧಿ ನನ್ನ ಕಿರೀಟಾಗ್ರದಲ್ಲಿ ಶೋಭಿಸುತ್ತಿರಲಿ! ಬ್ರಾಹ್ಮಣ ಪಾದಧೂಳಿಯನ್ನು ತಲೆ ಯಲ್ಲಿ ಧರಿಸತಕ್ಕವನ ಪಾಪಗಳೆಲ್ಲವೂ ನೀಗುವುವು. ಅವನಲ್ಲಿ ಸಮಸ್ತ ಕಲ್ಯಾಣಗುಣಗಳೂ ತಾವಾಗಿ ಬಂದು ನೆಲೆಗೊಳ್ಳುವುವು. ಹೀಗೆ ಗುಣಶೀ ಲಸಂಪನ್ನನಾಗಿಯೂ, ಕೃತಜ್ಞನಾಗಿಯೂ, ಜ್ಞಾನವೃದ್ಧರನ್ನು ಸೇವಿಸ ತಕ್ಕವನಾಗಿಯೂ ಇರುವ ಪುರುಷನಿಗೆ, ಸಮಸ್ತಸಂಪತ್ತುಗಳೂ ತಾವಾಗಿ ಯೇ ಕೈಗೂಡಿಬರುವುವು. ಆದುದರಿಂದ ಬ್ರಹ್ಮಕುಲವೂ, ಗೋವುಗಳೂ, ಶ್ರೀಹರಿಯೂ,ಆತನ ಭಕ್ತವರ್ಗಗಳೂ ನನ್ನಲ್ಲಿ ಪ್ರಸನ್ನರಾಗಿ ಅನುಗ್ರಹಿಸು ತ್ತಿರಲಿ!"ಎಂದನು, ಪೃಥುಚಕ್ರವರ್ತಿಯು ಹೇಳಿದ ಈ ವಾಕ್ಯವನ್ನು ಕೇಳಿ, ಸಭೆಯಲ್ಲಿದ್ದ ದೇವತೆಗಳೂ, ಪಿತೃದೇವತೆಗಳೂ ಬ್ರಾಹ್ಮಣರೂ, ಇತರ ಸಾಧುಗಳೂ ಪರಮಸಂತುಷ್ಟರಾಗಿ "ಭಲೆ! ಭಲೆ!" ಎಂದು ಅವನ ಮಾತ ನ್ನಭಿನಂದಿಸಿ "ರಾಜೇಂದ್ರಾ!ತಂದೆಯು ಸತ್ಪುತ್ರನನ್ನು ಪಡೆಯುವುದರಿಂದ ಪುಣ್ಯಲೋಕಗಳನ್ನು ಸಾಧಿಸುವನೆಂಬ ಲೋಕವಾರ್ತೆಯು ಸತ್ಯವು!ಬ್ರಹ್ಮ ಶಾಪದಿಂದ ಹತನಾದ ವೇನನು,ಅಷ್ಟುಪಾಪಾತ್ಮನಾಗಿದ್ದರೂ, ನಿನ್ನನ್ನುಪು ತ್ರನನ್ನಾಗಿ ಪಡೆದುದರಿಂದ,ನರಕಭಯದಿಂದ ತಪ್ಪಿಸಿಕೊಂಡು ಸದ್ಗತಿಯ ನ್ನು ಹೊಂದಿದನು, ಭಗವನ್ನಿಂದೆಯನ್ನು ಮಾಡಿ ಮಹಾನರಕದಲ್ಲಿ ಬೀಳುತಿ

ದ್ದ ಹಿರಣ್ಯಕಶಿಪುವಿಗೆ, ಅವನ ಮಗನಾದ ಪ್ರಹ್ಲಾದನ ಪ್ರಭಾವದಿಂದಲೇ ದುರ್ಗತಿಯು ತಪ್ಪಿತು. ಆದುದರಿಂದ ಎಲೈ ವೀರಾಗ್ರೇಸರನೆ! ಪಾಪಿಯಾದ ನಿನ್ನ ತಂದೆಗೂ ನಿನ್ನಿಂದ ಉತ್ತಮಗತಿಯುಂಟಾಯಿತು. ಲೋಕನಾಯಕನಾದ ಶ್ರೀವಿಷ್ಣುವಿನಲ್ಲಿ ನಿನಗಿರತಕ್ಕ ಭಕ್ತಿಯು ಅನಿವಾರ್ಯವಾಗಿರುವುದು. ಇಂತಹ ಭಾಗವತೋತ್ತಮನಾದ ನೀನು ಈ ಭೂಮಂಡಲಕ್ಕೆ ಪ್ರಭುವಾಗಿ ಬಹುಸಂವತ್ಸರಗಳವರೆಗೆ ಜೀವಿಸಿರು! ಎಲೈ ಪುಣ್ಯಕೀರ್ತಿಯಾದ ರಾಜನೆ! ಬ್ರಾಹ್ಮಣಪ್ರಿಯನಾಗಿಯೂ, ಪವಿತ್ರಕೀರ್ತಿಯಾಗಿಯೂ ಇರುವ ಆ ಸರ್ವೇಶ್ವರನ ಗುಣಗಳೆಲ್ಲವನ್ನೂ ನೀನು ನಮಗೆ ವಿವರಿಸಿ ತಿಳಿಸಿದುದರಿಂದ, ನಾವು ಧನ್ಯರಾದೆವು. ಸಾಕ್ಷಾನ್ಮಹಾವಿಷ್ಣುವೇ ನಿನ್ನ ರೂಪದಿಂದ ಬಂದು ನಮ್ಮನ್ನು ರಕ್ಷಿಸುತ್ತಿರುವುದಾಗಿಯೂ ಭಾವಿಸಿರುವೆವು. ಹೇ ರಾಜೇಂದ್ರಾ! ನೀನು ಪ್ರಜೆಗಳಾದ ನಮ್ಮಲ್ಲಿ ಇಷ್ಟು ಪ್ರೀತಿಯನ್ನು ತೋರಿಸುವುದೇನೂ ಆಶ್ಚರ್ಯವಲ್ಲ. ಕರುಣಾಳುಗಳಾದ ನಿಮ್ಮಂತಹ ರಾಜರಿಗೆ ಈ ವಿಧವಾದ ಪ್ರಜಾನುರಾಗವು ಸ್ವಾಭಾವಿಕವಾಗಿಯೇ ಇರುವುದು ಹೇ ಪ್ರಭೂ! ದೈವಸಂಕಲ್ಪವೆಂದು ಕರೆಯಲ್ಪಡುವ ಕರ್ಮಗಳಿಂದ, ಸಂಸಾರಕೂಪದಲ್ಲಿ ಬಿದ್ದು ಜ್ಞಾನಹೀನರಾಗಿ ಕೆಟ್ಟುಹೋಗುತಿದ್ದ ನಮಗೆ, ಈಗ ನೀನು ಹಿತೋಪದೇಶವನ್ನು ಮಾಡಿ ನರಕದಿಂದಲೂ ತಪ್ಪಿಸಿದೆ ಆದುದರಿಂದ ನಿನ್ನನ್ನು ರಾಜನೆಂದು ಮಾತ್ರವಲ್ಲದೆ ಗುರುವೆಂದೂ ಭಾವಿಸುವೆವು. ಇನ್ನು ಹೆಚ್ಚು ಮಾತಿನಿಂದೇನು? ಯಾವ ಪರಮಾತ್ಮನು ಬ್ರಾಹ್ಮಣರೂಪದಿಂದ ಕ್ಷತ್ರಿಯರನ್ನೂ, ಕ್ಷತ್ರಿಯರೂಪದಿಂದ ಬ್ರಾಹ್ಮಣರನ್ನೂ, ಆ ಎರಡು ರೂಪಗಳಿಂದ ಇತರಪ್ರಪಂಚವನ್ನೂ ಪೋಷಿಸುತ್ತಿರುವನೋ, ಕೇವಲ ಶುದ್ಧಸತ್ವಮಯನಾದ ಆ ಪರಮಪುರುಷನ ಅಂಶಾವತಾರವೆನಿಸಿದ ನಿನಗೆ ನಮಸ್ಕಾರವು" ಎಂದರು. ಇದು ಇಪ್ಪತ್ತನೆಯ ಅಧ್ಯಾಯವು.

ಸನಕಾದಿಗಳು ಪೃಥುಮಹಾರಾಜನ ಬಳಿಗೆ ಬಂದುದು.
ಸನತ್ಕುಮಾರನು ಪೃಥುವಿಗೆ ಜ್ಞಾನೋಪದೇಶವನ್ನು ಮಾಡಿದುದು.

ವಿದುರಾ ಕೇಳು! ಹೀಗೆ ಪ್ರಜೆಗಳೆಲ್ಲರೂ ಸಂತೋಷದಿಂದ ಆ ಪೃಥುವನ್ನು ಸ್ತೋತ್ರಮಾಡುತ್ತಿರುವಕಾಲದಲ್ಲಿ, ಆ ಸ್ಥಲಕ್ಕೆ, ಸೂರ್ಯತೇಜಸ್ಸುಳ್ಳ ನಾಲ್ಕುಮಂದಿ ಮುನಿಕುಮಾರರು ಬಂದುಸೇರಿದರು. ತಮ್ಮ ತೇಜಸ್ಸಿನಿಂದಲೇ ಲೋಕವನ್ನು ಪಾವನವಾಗಿ ಮಾಡುವಂತೆ ಆಕಾಶದಿಂದಿಳಿದು ಬಂದ ಆ ನಾಲ್ಕುಮಂದಿ ಮುನಿಕುಮಾರರನ್ನು ಕಂಡೊಡನೆ, ಪೃಥುಚಕ್ರವರ್ತಿಯು ಸಂಭ್ರಮದಿಂದ ತನ್ನ ಪರಿವಾರಗಳೊಡನೆ ಥಿಗ್ಗನೆ ಮೇಲೆದ್ದುನಿಂತನು. ಆ ಮಹರ್ಷಿಗಳನ್ನು ಕಂಡಾಗ, ಸಂತೋಷದಿಂದ ಪೃಥುಚಕ್ರವರ್ತಿಗೆ ಪ್ರಾಣಗಳೇ ಹಾರಿಹೋಗುವಂತಾಯಿತು. ಹಾರಿಹೋಗುತ್ತಿರುವ ಆ ಪ್ರಾಣಗಳನ್ನು ಹಿಡಿಯುವುದಕ್ಕೆ ಯತ್ನಿಸುವಂತೆ ಮೇಲೆದ್ದುನಿಂತು, ಜೀವನು ಶಬ್ದಾದಿವಿಷಯಗಳನ್ನು ಇದಿರುನೋಡುವಂತೆ ಸಮಸ್ತಸಭಿಕರೊಡನೆ ಆತುರದಿಂದ ಅವರನ್ನಿದಿರುನೋಡುತಿದ್ದನು. ಹೀಗೆ ಆತುರದಿಂದ ಮೇಲೆದ್ದುನಿಂತು, ಅವರಲ್ಲಿ ತನಗುಂಟಾದ ಗೌರವಬುದ್ಧಿಯಿಂದ ಮೈಮರೆತು, ವಿನಯದಿಂದ ತಲೆಯನ್ನು ಬಗ್ಗಿಸಿ, ಸ್ವಲ್ಪಹೊತ್ತಿನವರೆಗೆ ಸ್ತಬ್ಧನಾಗಿದ್ದು, ಆಮೇಲೆ ಅವರಿಗೆ ಯಥಾವಿಧಿಯಾಗಿ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಪೂಜಿಸಿದನು. ಮತ್ತು ಹಿರಿಯರ ಆಚಾರಸಂಪ್ರದಾಯಗಳನ್ನನುಸರಿಸಿ, ಆ ಮಹರ್ಷಿಗಳ ಪಾದಗಳನ್ನು ತೊಳೆದು, ಆ ತೀರ್ಥವನ್ನು ತನ್ನ ಶಿರಸ್ಸಿನಲ್ಲಿ ಧರಿಸಿದನು. ಯಜ್ಞವೇದಿಕೆಯಲ್ಲಿ ಜ್ವಲಿಸುವ ಅಗ್ನಿಗಳಂತೆ ಆ ಮುನಿಕುಮಾರರು ಸುವರ್ಣಪೀಠದಮೇಲೆ ಕುಳ್ಳಿರಲು, ಪೃಥುಚಕ್ರವರ್ತಿಯು ಶ್ರದ್ಧೆಯಿಂದಲೂ, ವಿನಯದಿಂದಲೂ ಬಂದು ವಿಜ್ಞಾಪಿಸುವನು. “ಎಲೈ ಮುನಿಶ್ರೇಷ್ಠರೆ! ಇದಲ್ಲವೇ ನನ್ನ ಭಾಗ್ಯವು! ನಾನು ಪೂರ್ವಜನ್ಮದಲ್ಲಿ ಎಷ್ಟು ಪುಣ್ಯವನ್ನು ಮಾಡಿದ್ದೆನೋ! ಹಾಗಿಲ್ಲದಪಕ್ಷದಲ್ಲಿ ಯೋಗಿಗಳಿಗೂ ದುರ್ಲಭವಾದ ನಿಮ್ಮ ದರ್ಶನವು ನನಗೆ ಇಷ್ಟು ಸುಲಭವಾಗಿ ಲಭಿಸುತ್ತಿತ್ತೆ? ನಿಮ್ಮಂತಹ ಮಹಾತ್ಮರೂ, ಆ ಪರಮಪುರುಷನೂ, ಯಾವನಲ್ಲಿ

ಪ್ರಸನ್ನರಾಗುವರೋ, ಅಂತವನಿಗೆ ಈ ಲೋಕದಲ್ಲಿಯಾಗಲಿ, ಪರಲೋಕ ದಲ್ಲಿಯಾಗಲಿ ದುರ್ಲಭವಾದುದು ಯಾವುದುಂಟು ? ಪರಮಾತ್ಮನು ಸ ರ್ವಾಂತರ್ಯಾಮಿಯಾಗಿದ್ದರೂ, ಬ್ರಹ್ಮಾದಿಗಳೂ ಅವನನ್ನು ಕಾಣದೆ ಕಳ ವಳಿಸುವಂತೆ, ನೀವು ಲೋಕಸಂಚಾರಿಗಳಾಗಿದ್ದರೂ ನಿಮ್ಮ ದರ್ಶನವು ಭಾಗ್ಯಹೀನರಿಗೆ ದುರ್ಲಭವು. ನಿಮ್ಮಂತಹ ಮಹಾತ್ಮರ ಪಾದಸೇವೆಯು ಯಾರಿಗೆ ಲಭಿಸುವದೋ, ಅಂತಹ ಗೃಹಸ್ಥರು ಭಾಗ್ಯಹೀನರಾಗಿದ್ದ ರೂ ಭಾಗ್ಯವಂತರೆಂದೇ ಎಣಿಸಬೇಕು. ಅವರ ವಾಸಸ್ಥಾನಗಳೂ, ಅಲ್ಲಿನ ಹುಲ್ಲು, ನೀರು, ಮುಂತಾದ ಅಲ್ಪವಸ್ತುಗಳೂ, ಮನೆಯ ಯಜಮಾನನೂ, ಇತರಪರಿವಾರಗಳೂಕೂಡ ಪೂಜ್ಯವೆನಿಸಿಕೊಳ್ಳುವುವು. ಏಕೆಂದರೆ,ನಿಮ್ಮಂ ತಹ ಮಹಾತ್ಮರಿಂದ ಅಂಗೀಕರಿಸಲ್ಪಡುವುದರಿಂದ ಅವೆಲ್ಲವೂ ಪರಮ ಪೂಜ್ಯವೆನಿಸಿಕೊಳ್ಳುವುವು. ಸಮಸ್ತಸಂಪತ್ತುಗಳಿಂದ ತುಂಬಿದ್ದರೂ ಮನುಷ್ಯರ ಗೃಹಗಳು, ನಿಮ್ಮಂತಹ ಮಹಾತ್ಮರ ಪಾದಸಂಬಂಧವಿಲ್ಲದೆ ಹೋದಪಕ್ಷದಲ್ಲಿ, ಅವೆಲ್ಲವೂ ವಿಷಸರ್ಪಗಳಿಂದ ತುಂಬಿದ ಚಂದನಶಾಖೆಗಳಿ ಗೆ ಸಮಾನವೆನಿಸಿಕೊಳ್ಳುವುವು. ಎಲೈ ಮಹರ್ಷಿಗಳಿರಾ! ನಿಮಗೆ ಸುಖಾಗ ಮನವೆ? ಅಥವಾ ನಿಮ್ಮ ಕುಶಲವನ್ನು ಕೇಳಬೇಕಾದುದೇನು? ನೀವು ಬಾ ಲ್ಯದಲ್ಲಿಯೇ ಮೋಕ್ಷದಲ್ಲಿ ದೃಷ್ಟಿಯಿಟ್ಟು, ಇಂದ್ರಿಯಗಳನ್ನು ನಿಗ್ರಹಿಸಿ, ಮಹಾವ್ರತಗಳನ್ನು ಅನುಷ್ಠಿಸಿದವರು. ನಾವಾದರೋ ಶಬ್ದಾದಿವಿಷಯ ಸುಖಗಳನ್ನೇ ಪರಮಪುರುಷಾರ್ಥವೆಂದು ಭ್ರಮಿಸಿ, ಕರ್ಮಗಳಿಗೆ ಕಟ್ಟುಬಿ ದ್ದು, ದುಃಖಪ್ರಚುರವಾದ ಸಂಸಾರದಲ್ಲಿ ತೊಳಲುತ್ತಿರುವೆವು. ಹೀಗೆ ದುಃ ಖಸಾಗರದಲ್ಲಿ ಮುಳುಗಿದ ನಾವು ನಿಮ್ಮಕ್ಷೇಮಲಾಭಗಳನ್ನು ವಿಚಾರಿಸಿದರೆ ಹಾಸ್ಯಾಸ್ಪದವಲ್ಲವೆ? ಪರಮಾತ್ಮಸ್ವರೂಪವನ್ನು ಸಾಕ್ಷಾತ್ಕರಿಸಿಕೊಂಡು, ಆ ಆನಂದದಲ್ಲಿ ಮುಳುಗಿರುವ ನಿಮ್ಮ ವಿಷಯದಲ್ಲಿ ಕ್ಷೇಮವನ್ನು ವಿಚಾರಿ ಸಬೇಕಾದ ಅವಶ್ಯಕತೆಯೇ ಇರುವುದಿಲ್ಲ. ಸುಖದುಃಖಗಳೆಂಬ ಭೇದಗಳೆ ಲ್ಲವೂ ಅವರವರ ಮನೋಧರ್ಮವನ್ನನುಸರಿಸಿರುವವು.ಆ ವಿಧವಾದ ಬುದ್ಧಿ ವಿಕಲ್ಪವೇ ನಿಮಗಿಲ್ಲವಾದುದರಿಂದ, ಸುಖದುಃಖಗಳೆಂಬ ಭೇದವೂ ನಿಮಗಿ ರಲಾರದು. ಎಲೈ ಋಷಿಶ್ರೇಷ್ಠರೆ! ಈಗ ನಾನು ನಿಮ್ಮಲ್ಲಿ ಸಂಪೂರ್ಣವಾ

ದ ನಂಬಿಕೆಯಿಂದ ಒಂದು ವಿಷಯವನ್ನು ಕೇಳಬೇಕೆಂದಿರುವೆನು. ನನ್ನಂತೆ ಸಂಸಾರದಲ್ಲಿ ತೊಳಲುತ್ತಿರುವ ಪ್ರಾಣಿಗಳಿಗೆ, ಯಾವ ಉಪಾಯದಿಂದ ಅ ನಾಯಾಸವಾಗಿಯೇ ಕ್ಷೇಮವುಂಟಾಗುವುದು? ಜ್ಞಾನಿಗಳಿಗೆ ವಿಶೇಷಪ್ರಿಯನಾಗಿಯೂ, ಸಂಸಾರಿಗಳಿಗೆ ಜ್ಞಾನಪ್ರದಾನವನ್ನು ಮಾಡಿ ಉದ್ಧರಿಸತಕ್ಕವನಾಗಿಯೂ, ಜನನಮರಣಾದಿಗಳಿಲ್ಲದವನಾಗಿಯೂ ಇರುವ ಸಾಕ್ಷಾದ್ಭಗವಂತನೇ, ನಿಮ್ಮಂತಹ ಜ್ಞಾನಿಗಳ ಸ್ವರೂಪದಿಂದ ಭೂಲೋಕದಲ್ಲಿ ಅವತಾರಗಳನ್ನೆತ್ತಿ, ಭಕ್ತಾನುಗ್ರಹಾರ್ಥವಾಗಿ ಅಲ್ಲಲ್ಲಿ ಸಂಚರಿಸುತ್ತಿರುವನೆಂದೆಣಿಸುವೆನು. ಆದುದರಿಂದ ಭಗವದಂಶದಿಂದ ಹುಟ್ಟಿದ ನಿಮಗೆ ತಿಳಿಯದ ವಿಷಯವೊಂದಾದರೂ ಇರುವುದಿಲ್ಲ. ಆದುದರಿಂದ, ನನಗೆ ತತ್ವೋಪದೇಶವನ್ನು ಮಾಡಿ ನನ್ನನ್ನುದ್ಧರಿಸಬೇಕು” ಎಂದನು.ಮೃದುಮಧುರವಾಗಿಯೂ, ಸಾರವತ್ತಾಗಿಯೂ ಇರುವ ಈ ಪೃಥುಚಕ್ರವರ್ತಿಯ ಮಾತನ್ನು ಕೇಳಿ ಸನತ್ಕುಮಾರನು, ಸಂತೋಷಗೊಂಡು, ಆ ರಾಜನನ್ನು ಕುರಿತು ಮಂದಹಾಸಪೂರ್ವಕವಾಗಿ ಹೀಗೆಂದು ಹೇಳುವನು. “ಓ ರಾಜೇಂದ್ರಾ! ನೀನು ಎಲ್ಲವನ್ನೂ ತಿಳಿದವನಾಗಿದ್ದರೂ, ಲೋಕಹಿತಾರ್ಥವಾಗಿಯೇ ಈ ಪ್ರಶ್ನೆಯನ್ನು ಮಾಡುವಂತಿದೆ. ಇದೇ ಸಜ್ಜನರ ಸ್ವಭಾವವು. ಸತ್ಪುರುಷರ ಸಹವಾಸವೆಂಬುದು ಭೋಗಮೋಕ್ಷಗಳನ್ನು ಅಪೇಕ್ಷಿಸತಕ್ಕವರಿಬ್ಬರಿಗೂ, ಅವರವರ ಕೋರಿಕೆಯನ್ನು ಕೈಗೂಡಿಸುವುದೆಂದು ಹಿರಿಯರು ಹೇಳಿರುವರು.ಸಾಧುಗಳೊಡನೆ ಸಹವಾಸವುಂಟಾದರೆ ಕ್ರಮವಾಗಿ ಅವರೊಡನೆ ಸಂಭಾಷಣವೂ ದೊರೆಯುವುದು. ಆಮೇಲೆ ಕ್ರಮವಾಗಿ ತಮ್ಮ ಕೋರಿಕೆಗಳನ್ನು ಕೈಗೂಡಿಸಿಕೊಳ್ಳುವ ಉಪಾಯಗಳನ್ನು ಕೇಳುವುದಕ್ಕೆ ಅವಕಾಶವುಂಟಾಗುವುದು. ಅದರಿಂದಾಚೆಗೆ ಸ್ವರ್ಗಾದಿಸುಖಗಳನ್ನು ಪಡೆಯುವುದಕ್ಕೆ ಮಾರ್ಗವಾದ ಯಜ್ಞಯಾಗಾದಿಕರ್ಮಗಳ ಸ್ವರೂಪವನ್ನೂ, ಮೋಕ್ಷಸಾಧಕವಾದ ಭಗವದುಪಾಸನಾದಿಸ್ವರೂಪವನ್ನೂ ಅವರಿಂದ ಉಪದೇಶಹೊಂದಬಹುದು. ಆದುದರಿಂದ ಸತ್ಸಹವಾಸವೆಂಬುದು ಸರ್ವವಿಧದಲ್ಲಿಯೂ ಶ್ರೇಯಸ್ಕರವು. ಓ ರಾಜೇಂದ್ರಾ! ನಿನಗೆ ಭಗವಂತನ ಗುಣಶ್ರವಣದಲ್ಲಿ ವಿಶೇಷವಾದ ಪ್ರೀತಿಯು ತಾನಾಗಿಯೇ ಹುಟ್ಟಿರುವುದು. ಈ ವಿಧವಾದ ಶ್ರ

ಷ್ಠೆಯೇ ಮನಃಕಾಲುಷ್ಯವನ್ನೂ, ಪ್ರಾರಬ್ಧಕರ್ಮವನ್ನೂ, ನಿರ್ಮೂಲವಾಗಿ ನಾಶಮಾಡುವುದು. ರಾಜೇಂದ್ರಾ! ಮನುಷ್ಯನಿಗೆ ಮೋಕ್ಷವುಂಟಾಗುವ ಮಾರ್ಗವೇನೆಂದು ಕೇಳಿದೆಯಲ್ಲವೆ? ಅದನ್ನು ವಿವರಿಸುವೆನು ಕೇಳು. ಶಾಸ್ತ್ರಗಳಲ್ಲಿ ಸತ್ವಾದಿಗುಣಗಳ ಸಂಬಂಧವಿಲ್ಲದವನಾಗಿಯೂ, ಅನಂತಕಲ್ಯಾಣಗುಣಗಳಿಂದ ಪರಿಪೂರ್ಣನಾಗಿಯೂ, ಎಲ್ಲೆಯಿಲ್ಲದ ಸ್ವರೂಪಸ್ವಭಾವಗಳುಳ್ಳವನಾಗಿಯೂ ಇರುವ ಆ ಪರಮಾತ್ಮನಲ್ಲಿ, ನಿಶ್ಚಲವಾದ ಭಕ್ತಿ, ಅದನ್ನು ಬಿಟ್ಟ ಇತರವಸ್ತುಗಳಲ್ಲಿ ವಿರಕ್ತಿ, ಇವೆರಡುಮಾತ್ರವೇ ಮುಕ್ತಿಸಾಧಕದಾದ ಉಪಾಯವೆಂದು ನಿರ್ಣಯಿಸಲ್ಪಟ್ಟಿರುವುದು. ಈ ಭಕ್ತಿ ವೈರಾಗ್ಯಗಳೆರಡೂ ಉಂಟಾಗುವ ರೀತಿಯೇನೆಂದು ಕೇಳುವೆಯಾ ? ಭಗವದ್ಭಕ್ತರನ್ನು ಸೇವಿಸುವುದು, ಅವರಮೂಲಕವಾಗಿ ಭಗವತ್ಕಥೆಗಳನ್ನು ಕೇಳುತ್ತಿರುವುದು, ಅರ್ಥಕಾಮಗಳನ್ನೇ ಪುರುಷಾರ್ಥವೆಂದು ತಿಳಿದು ಅದರಲ್ಲಿ ಬಿದ್ದಿರುವ ಸಂಸಾರಿಗಳ ಸಹವಾಸವನ್ನು ನಿಶ್ಶೇಷವಾಗಿ ಬಿಟ್ಟುಬಿಡುವುದು, ಅಂತಹ ಸಂಸಾರಿಗಳು ಕೋರತಕ್ಕ ಅರ್ಥಕಾಮಗಳಲ್ಲಿ ಆಸೆಯಿಡದಿರುವುದು, ತತ್ತ್ವವನ್ನು ತಿಳಿಯುವುದರಲ್ಲಿ ಅಕ್ಕರೆಯಿಡುವುದು, ಆಚಾರ್ಯನಮೂಲಕವಾಗಿ ಉಪದೇಶಹೊಂದಿದ ಆತ್ಮಯೋಗವನ್ನು ಮನನಮಾಡುವುದು, ಆ ಆತ್ಮಯೋಗವನ್ನು ಅನುಷ್ಠಿಸುವುದರಲ್ಲಿ ಶ್ರದ್ಧೆ, ಪಂಚಮಹಾಯಜ್ಞಗಳೇ ಮೊದಲಾದ ತನ್ನ ನಿತ್ಯಕರ್ಮಗಳನ್ನೂ, ನೈಮಿತ್ತಿಕಕರ್ಮಗಳನ್ನೂ ಭಗವದಾರಾಧನರೂಪವಾಗಿಯೇ ನಡೆಸುವುದು, ಆತ್ಮಸ್ವರೂಪವೊಂದನ್ನೇ ಅನುಸಂಧಾನಮಾಡತಕ್ಕ ಪರಮಹಂಸರ ನಡತೆಯನ್ನು ಅನುಸರಿಸುವುದು, ಪರಿಶುದ್ಧವಾದ ಆಹಾರದಲ್ಲಿ ಪ್ರೀತಿ, ಆತ್ಮಸ್ವರೂಪವನ್ನೂ, ಭಗವದ್ಗುಣಾಮೃತವನ್ನೂ ಅನುಸಂಧಾನಮಾಡುವುದರಲ್ಲಿಹೊರತು ಇತರವಿಷಯಗಳಲ್ಲಿ ಆಸೆಯಿಲ್ಲದಿರುವುದು, ಇತರಪ್ರಾಣಿಗಳನ್ನು ಹಿಂಸಿಸದಿರುವುದು,ಭೋಜನಾದಿಕಾಲಗಳಲ್ಲಿಯೂ ಭಗವಂತನ ದಿವ್ಯಮಂಗಳವಿಗ್ರಹವನ್ನು ಧ್ಯಾನಿಸುತ್ತಿರುವುದು, ಇತರಕಾಲಗಳಲ್ಲಿ ಭಗವಂತನ ಚರಿತಾಮೃತಗಳನ್ನು ಪಾನಮಾಡುತ್ತಿರುವುದು, ಇಂದ್ರಿಯಗಳನ್ನೂ, ಮನಸ್ಸನ್ನೂ ನಿಗ್ರಹಿಸಿ, ಸರ್ವೇಂದ್ರಿಯಗನ್ನೂ ಭಗವಂತನಲ್ಲಿಯೇ ನೆಲೆಗೊಳಿಸುವುದು, ಇತರಪುರು

ಷಾರ್ಥಗಳನ್ನಾಗಲಿ, ಅವುಗಳನ್ನು ಸಾಧಿಸತಕ್ಕ ಉಪಾಯಗಳನ್ನಾಗಲಿ, ಮ ನಸ್ಸಿನಿಂದಲೂ ಸ್ಮರಿಸದಿರುವುದು, ತನ್ನ ದೇಹಧಾರಣೆಗೆ ಬೇಕಾದಷ್ಟು ಪ್ರಯತ್ನವನ್ನುಹೊರತು, ಬೇರೆ ಯಾವ ಕಾರ್ಯಗಳಲ್ಲಿಯೂ ಮನಸ್ಸಿಡದಿರು ವುದು, ಶೀತೋಷ್ಣಾದಿಬಾಧೆಗಳನ್ನು ಸಹಿಸಿಕೊಳ್ಳುವುದು, ಕರ್ಣಾಮೃತ ಪ್ರಾಯವಾದ ಭಗವದ್ಗುಣಗಳನ್ನು ಕೇಳುವುದರಿಂದಲೂ,ಹೇಳುವುದರಿಂದ ಲೂ ಭಕ್ತಿಯನ್ನು ಹೆಚ್ಚಿಸಿಕೊಳ್ಳುವುದು, ಈ ಕಾರ್ಯಗಳಿಂದ ಆತ್ಮವಲ್ಲದ ಇತರವಸ್ತುಗಳಲ್ಲಿ ವಿರಕ್ತಿಯೂ, ಪರಮಾತ್ಮನಲ್ಲಿ ಭಕ್ತಿಯೂ ಶೀಘ್ರದಲ್ಲಿ ತನಗೆತಾನೇ ಉಂಟಾಗುವುದು. ಯಾವಾಗ ಮನುಷ್ಯನಿಗೆ ಪರಬ್ರಹ್ಮದಲ್ಲಿ ಈ ವಿಧವಾದ ದೃಢಭಕ್ತಿಯುಂಟಾಗುವುದೋ, ಆಗ ಆಚಾರ್ಯಾನುಗ್ರಹಕ್ಕೆ ಪಾತ್ರನಾದ ಪುರುಷನು, ಆ ಭಕ್ತಿವೈರಾಗ್ಯಗಳ ಬಲದಿಂದ ಪಂಚ ಭೂತಾತ್ಮಕವಾದ ಶರೀರವನ್ನೂ, ಆ ಶರೀರಕ್ಕೆ ಬೀಜದಂತಿರುವ ಅಜ್ಞಾನ ವನ್ನೂ, ಬೆಂಕಿಯು ತನಗೆ ಉತ್ಪತ್ತಿಸ್ಥಾನವಾದ ಅರಣಿಯನ್ನು ದಹಿಸು ವಂತೆ ನಿರ್ಮೂಲವಾಗಿ ದಹಿಸಿಬಿಡುವನು. ಹೀಗೆ ಭಗವದ್ಭಕ್ತಿಯ ವೇಗ ದಿಂದ ದೇಹವನ್ನುದಹಿಸಿ, ಆ ದೇಹಗುಣಗಳಾದ ರಾಗದ್ವೇಷಾದಿಗಳೆಲ್ಲವ ನ್ನೂ ತ್ಯಜಿಸಿಬಿಟ್ಟವನು, ಆ ಹೊರಗಿನ ದೇಹವನ್ನಾಗಲಿ,ಒಳಗಿನ ರಾಗದ್ವೇ ಷಾದಿದೋಷಗಳನ್ನಾಗಲಿ ತಿರುಗಿ ಕಾಣಲಾರನು. ಅಡ್ಡಗೋಡೆಯಂತೆ ಸಂಸಾರದಶೆಯಲ್ಲಿ ಜೀವಾತ್ಮಪರಮಾತ್ಮರಿಗಿರುವ ಸಂಬಂಧವನ್ನು ಮರೆಸಿ ಕೊಂಡಿರತಕ್ಕ ಆ ಶರೀರಾದಿಗಳೆಲ್ಲವೂ, ಅವನಿಗೆ ಸ್ವಪ್ನಪದಾರ್ಥಗಳಂತೆ ಮ ರೆತು ಹೋಗುವುವು. ದೇಹೇಂದ್ರಿಯಾದಿಗಳಲ್ಲಿ ಅಭಿಮಾನವೆಂಬ ವಾಸನೆಯಿ ರುವವರೆಗೆಮಾತ್ರವೇ, ಆ ದೇಹವೂ ಇಂದ್ರಿಯಗಳೂ, ಅವೆರಡಕ್ಕಿಂತಲೂ ಬೇರೆಯಾದ ಭೋಗಸ್ಥಾನಾದಿಗಳೂ ಕಾಣುತ್ತಿರುವುವೇಹೊರತು, ಆ ವಾ ಸನೆಯೆಂಬ ಉಪಾಧಿಯು ಬಿಟ್ಟುಹೋದಕೂಡಲೆ, ಅವೆಲ್ಲವೂ ನಷ್ಟಪ್ರಾ ಯವಾಗಿ ಕಾಣದೆ ಹೋಗುವುವು. ಮತ್ತು ಆ ಶರೀರಸಂಬಂಧವಿರುವವ ರೆಗೆಮಾತ್ರವೇ, ಜೀವನು, ತನಗೂ, ಪರಮಾತ್ಮನಿಗೂ ಇರುವ ಸಂಬಂಧವ ನ್ನೂ ತಿಳಿಯಲಾರದೆ,ಭೇದಬುದ್ಧಿಯನ್ನೇ ಎಣಿಸುತ್ತಿರುವನು. ಆ ಶರೀರಸಂ ಬಂಧವು ಬಿಟ್ಟುಹೋದಮೇಲೆ,ಎಂದರೆ,ಮುಕ್ತಿದಶೆಯಲ್ಲಿ ಆ ಭೇದವೇತೋರ

ಲಾರದು. ಶಬ್ದಾದಿವಿಷಯಗಳನ್ನು ಚಿಂತಿಸಿದರೆ, ಅವು ಇಂದ್ರಿಯಗಳನ್ನೆಳೆಯುವುವು ಆ ಇಂದ್ರಿಯಗಳು ಮನಸ್ಸನ್ನು ಆಕರ್ಷಿಸುವುವು. ಆ ಮನಸ್ಸು, ಪರಮಪುರುಷಾರ್ಥವನ್ನು ತಿಳಿದುಕೊಳ್ಳಬೇಕಾದ ಬುದ್ಧಿಯ ಬಲವನ್ನು ಕೆಡಿಸಿಬಿಡುವುದು. ಕೆರೆಯ ಕಟ್ಟೆಯಲ್ಲಿ ಬೆಳೆದಿರುವ ಒಂದು ಜೊಂಡುಹುಲ್ಲನ್ನು ಕಿತ್ತರೆ, ಅದು ಕಟ್ಟೆಯ ಬಲವನ್ನು ತಪ್ಪಿಸಿ, ಪ್ರವಾಹದ ನೀರನ್ನು ತನ್ನದಾರಿಯಿಂದ ಹೊರಕ್ಕೆ ಬಿಡುವಂತೆ, ಶಬ್ದಾದಿವಿಷಯಗಳಲ್ಲಿ ಪ್ರವರ್ತಿಸಿದ ಮನಸ್ಸು ದುರ್ಬಲವಾಗಿ ನಿಶ್ಚಯಜ್ಞಾನವಿಲ್ಲದೆ ಕೆಟ್ಟುಹೋಗುವುದು. ಹೀಗೆ ಮನಸ್ಸಿನಲ್ಲಿ ನಿಶ್ಚಯಜ್ಞಾನವು ತಪ್ಪಿದರೆ ಪರಮಾತ್ಮೋಪಾಸನದಲ್ಲಿ ಬುದ್ಧಿಯು ಪ್ರವರ್ತಿಸದು ಇದರಿಂದ ಆತ್ಮಪರಮಾತ್ಮಸ್ವರೂಪದ ನಿಜಸ್ಥಿತಿಯನ್ನು ತಿಳಿಯತಕ್ಕ ಜ್ಞಾನವೂ ನಷ್ಟವಾಗುವುದು. ತನ್ನನ್ನೇ ತಾನು ಮರೆತುಹೋಗತಕ್ಕ ಸ್ಥಿತಿಯು ಇದೇ ಎಂದು ಪಂಡಿತರು ಹೇಳುವರು ತನ್ನ ಸ್ಥಿತಿಯನ್ನೇ ತಾನು ತಿಳಿದುಕೊಳ್ಳದೆ, ಬೇರೆ ಶಬ್ದಾದಿವಿಷಯಗಳನ್ನು ಪ್ರೀತಿಸುವುದಕ್ಕಿಂತಲೂ ಮನುಷ್ಯನಿಗೆ ಬೇರೊಂದನರ್ಥವಿಲ್ಲ. ಶಬ್ದಾದಿವಿಷಯಗಳಕಡೆಗೆ ಮನಸ್ಸನ್ನೆಳೆಯುವುದೇ ಇಂದ್ರಿಯಗಳ ಸ್ವಭಾವವು. ಆ ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳಲಾರದೆ, ತಾನೇ ಅವುಗಳಲ್ಲಿ ಆತುರಪಟ್ಟರೆ, ಅಂತಹ ಮನುಷ್ಯನಿಗೆ ಧರ್ಮಾರ್ಥ ಕಾಮ ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಲ್ಲಿ ಯಾವುದೂ ಚೆನ್ನಾಗಿ ಕೈಗೂಡಿ ಬರಲಾರದು. ಆ ಶಬ್ದಾದಿವಿಷಯಗಳ ಚಿಂತೆಯಿದ್ದಾಗ, ಮನುಷ್ಯನಮನಸ್ಸು, ಶಾಸ್ತ್ರಜ್ಞಾನದಿಂದಲೂ, ಭಗವದುಪಾಸನರೂಪವಾದ ಜ್ಞಾನದಿಂದಲೂ ಭ್ರಷ್ಟವಾಗಿ, ಜಡತ್ವವನ್ನು ಹೊಂದುವುದು. ಅನರ್ಥಕಾರಣವಾದ ಅಜ್ಞಾನವನ್ನು ದಾಟಬೇಕೆಂಬ ಅಪೇಕ್ಷೆಯುಳ್ಳವನು, ಮೊದಲು ವಿಷಯಾಭಿಲಾಷೆಯನ್ನು ನಿಶ್ಶೇಷವಾಗಿ ತ್ಯಜಿಸಬೇಕು. ವಿಷಯಾಸಕ್ತಿಯೆಂಬುದು ಧರ್ಮಾದಿಚತುರ್ವಿಧ ಪುರುಷಾರ್ಥಗಳಲ್ಲಿ ಯಾವುದನ್ನೂ ಕೈಗೂಡಿಸದೆ ನಾಶಮಾಡುವುದು. ಈ ನಾಲ್ಕು ಪುರುಷಾರ್ಥಗಳಲ್ಲಿ ಮೋಕ್ಷವೆಂಬುದೇ ಎಂದೆಂದಿಗೂ ನಾಶವಿಲ್ಲದ ಪುರುಷಾರ್ಥವೆಂಬುದಕ್ಕಾಗಿ, ವಿವೇಕಿಗಳು ಅದನ್ನೇ ಅಪೇಕ್ಷಿಸುವರು. ಉಳಿದ ಮೂರು ಪುರುಷಾರ್ಥಗಳಿಗೂ ಕಾಲಭಯವುಂಟು! ಆದುದರಿಂದ ಅವು ಶಾಶ್ವ

ತಗಳಲ್ಲ. ಬ್ರಹ್ಮದೇವನು ಮೊದಲಾಗಿ, ಕ್ರಿಮಿಕೀಟಗಳವರೆಗಿರುವ ಉತ್ಕೃಷ್ಟಾಪಕೃಷ್ಟಗಳೆನಿಸಿದ ಸಮಸ್ತಪದಾರ್ಥಗಳೂ ಸತ್ವಾದಿಗುಣಗಳ ಹೆಚ್ಚುಕಡಿಮೆಗಳಿಂದಲೇ ಸೃಷ್ಟಿಸಲ್ಪಟ್ಟಿರುವುವು. ಆದುದರಿಂದ ಸೃಷ್ಟಿಗೊಳಪಟ್ಟ ಈ ವಸ್ತುಗಳೆಲ್ಲ ಪ್ರಳಯಕಾಲದಲ್ಲಿ ನಿಲ್ಲಲಾರವು. ಕಾಲರೂಪಿಯಾದ ಪರಮೇಶ್ವರನು ಆಗಾಗ ಅವುಗಳನ್ನು ನಾಶಗೊಳಿಸುವುದರಿಂದ ಅವುಗಳಿಗೆ ಕ್ಷೇಮವಿಲ್ಲ. ಆದುದರಿಂದ ಎಲೈ ರಾಜೇಂದ್ರನೆ! ದೇಹದಿಂದಲೂ, ಇಂದ್ರಿಯದಿಂದಲೂ, ಪ್ರಾಣದಿಂದಲೂ, ಮನಸ್ಸಿನಿಂದಲೂ ಆವರಿಸಲ್ಪಟ್ಟ ಚರಾಚರಾತ್ಮಕವಾದ ಸಮಸ್ತವಸ್ತುಗಳಿಗೂ ಅಂತರ್ಯಾಮಿಯಾಗಿಯೂ, ಸ್ವಯಂಪ್ರಕಾಶವುಳ್ಳವನಾಗಿಯೂ, ಚೇತನರ ಹೃದಯದಲ್ಲಿ ನೆಲೆಗೊಂಡವನಾಗಿಯೂ, ಷಾಡ್ಗುಣ್ಯಪರಿಪೂರ್ಣನಾಗಿಯೂ ಇರುವ ಭಗವಂತನಿಗೆ, ನಿನ್ನನ್ನು ಶರೀರವೆಂದೂ, ಅವನು ನಿನ್ನಲ್ಲಿ ಅಂತರ್ಯಾಮಿಯೆಂದೂ ನೀನು ಚೆನ್ನಾಗಿ ತಿಳಿದು ''ಆ ಪರಬ್ರಹ್ಮವೇ ನಾನೆಂದು ಭಾವಿಸುತ್ತಿರು! ಹಗ್ಗವನ್ನು ನೋಡಿದಾಗ ಹಾವೆಂಬ ಭ್ರಾಂತಿಯುಂಟಾಗುವಂತೆ, ಜೀವಾತ್ಮನಲ್ಲಿ ದೇವಮನುಷ್ಯಾದಿಭೇದಗಳೆಲ್ಲವೂ ಭ್ರಾಂತಿಯಿಂದ ತೋರುವುದುಂಟು. ಈ ರೂಪಭೇದಗಳೆಲ್ಲವೂ ಆತ್ಮನಿಗೆ ಮಾಯೆಯ ಸಂಬಂಧದಿಂದುಂಟಾಗಿ, ಜೀವಾತ್ಮ ಪರಮಾತ್ಮವಿವೇಕವನ್ನು ತಪ್ಪಿಸುವುದಕ್ಕೆ ಕಾರಣವಾಗಿರುವುದು. ಜೀವಾತ್ಮಗಳಿಗೆ ವಾಸ್ತವದಲ್ಲಿ ಈ ಪ್ರಕೃತಿಸಂಬಂಧಗಳಾದ ವಿಕಾರಗಳಿಲ್ಲವು ಶುದ್ಧವಾದ ಜೀವಾತ್ಮಸ್ವರೂಪವೂಕೂಡ ಸ್ವಯಂಪ್ರಕಾಶವುಳ್ಳುದು ಕರ್ಮಸಂಬಂಧವಿಲ್ಲದುದು. ಹಾಗಿದ್ದರೂ ಅನಾದಿಯಾದ ಕರ್ಮವಾಸನೆಯಿಂದ ಅವಕ್ಕೆ ಪ್ರಕೃತಿಸಂಬಂಧವುಂಟಾಗುವುದು. ಅಂತಹ ಜೀವಾತ್ಮಗಳೆಲ್ಲಕ್ಕೂ ಅಂತರ್ಯಾಮಿಯಾಗಿ, ತಾನೂ ಆ ಆತ್ಮಸ್ವರೂಪದಿಂದಲೇ ತೋರುತ್ತಿರುವ ಆಪರಮಪುರುಷನನ್ನು ನಾವು ಮರೆಹುಗುವೆವು ಪರಮಾತ್ಮನು ಜೀವಾತ್ಮನಲ್ಲಿ ಸೇರಿದ್ದರೂ, ಅವನಿಗೆ ಜೀವಗತವಾದ ದೋಷಗಳು ತಗುಲಲಾರವು ಆತನು ನಿತ್ಯಮುಕ್ತನು. ಅವನಿಗೆ ಸಹಜವಾಗಿ ಪ್ರಕೃತಿಸಂಬಂಧವಿಲ್ಲದಿದ್ದರೂ, ಜೀವನಿಗೆ ಕರ್ಮಸಂಬಂಧದಿಂದುಂಟಾಗುವ ಆ ಪ್ರಕೃತಿವಿಕಾರಗಳೇ ಅವನಲ್ಲಿಯೂ ತೋರುವುವು. ಎಲ್ಲವನ್ನೂ ಬ್ರಹ್ಮಾತ್ಮಕವೆಂದು ತಿಳಿದ ಜಿತೇಂ

ಧ್ರಿಯರಾದ ಮಹರ್ಷಿಯರೂಕೂಡ, ಆ ಭಗವಂತನ ಪಾದಾರವಿಂದದ ರಸ
ಗಳಂತೆ ತೋರುವ ಬೆರಳುಗಳ ಸೌಂದರ್ಯವನ್ನು ಭಕ್ತಿಯಿಂದ ಭಾವಿಸುತ್ತ,
ಅದರಿಂದ ತಮ್ಮ ಮನಸ್ಸಿನಲ್ಲಿ ಅಂಟಿರುವ ಕರ್ಮವಾಸನೆಯೆಂಬ ಗಂಟನ್ನು
ಸಡಿಲಿಸಿಕೊಳ್ಳುವರು. ಅಂತಹ ಭಗವಂತನನ್ನೇ ನೀನೂ ಮರೆಹೊಗುವವ
ನಾಗು. ಓ ರಾಜೇಂದ್ರಾ! ಸಂಸಾರವೆಂಬ ಮಹಾಸಮುದ್ರವು ಅಪಾರ
ವಾದುದು ಅದನ್ನು ದಾಟುವುದು ಮಹಾಕಷ್ಟವು. ಸರ್ವೇಶ್ವರನೆಂಬ ಹಡ
ಗಿನ ಸಹಾಯವಿಲ್ಲದೆ ಅದನ್ನು ಯಾರೂ ದಾಟಲಾರರು. ಆ ಸಮುದ್ರದಲ್ಲಿ
ಅರಿಷಡ್ವರ್ಗಗಳೆಂಬ ದೊಡ್ಡ ಮೊಸಳೆಗಳು ಕೊಲ್ಲುವುದಕ್ಕೆ ಕಾದಿರುವುವು.
ಈಶ್ವರಸಹಾಯವಿಲ್ಲದೆ ಅದನ್ನು ದಾಟಬೇಕೆಂದು ಪ್ರಯತ್ನಿಸುವವರು,ನಡು
ದಾರಿಯಲ್ಲಿ ಮುಳುಗಿಹೋಗುವರೇಹೊರತು ಆ ಸಮುದ್ರವನ್ನು ದಾಟಿ ದಡ
ವನ್ನು ಸೇರಲಾರರು ಆದುದರಿಂದ,ಲೋಕದಲ್ಲಿ ಸಮಸ್ತಚೇತನರಿಗೂಸುಲ
ಭನಾದ ಆ ಭಗವಂತನ ಪಾದಗಳನ್ನೇ ನೀನು ನಾವೆಯಾಗಿ ಮಾಡಿಕೊಂಡು,
ದಾಟಲಸಾಧ್ಯವಾದ ಆ ಸಂಸಾರಸಮುದ್ರವನ್ನು ದಾಟುವನಾಗು" ಎಂ
ದನು. ಆತ್ಮಪರಮಾತ್ಮತತ್ವವನ್ನು ತಿಳಿದವನಾಗಿಯೂ, ಬ್ರಹ್ಮಪುತ್ರನಾ
ಗಿಯೂ ಇರುವ ಸನತ್ಕುಮಾರನು ಹೇಳಿದ ಈ ತತ್ವಾರ್ಥವನ್ನು ಕೇಳಿ, ಪೃ
ಥುಚಕ್ರವರ್ತಿಯು ಸಂತೋಷದಿಂದ ಆತನನ್ನು ಸ್ತುತಿಸುತ್ತ, ಹೀಗೆಂದು
ಹೇಳುವನು. "ಓ ಮಹಾತ್ಮಾ! ದೀನವತ್ಸಲನಾದ ಭಗವಂತನು ಮೊದಲೇ
ನನಗೆ ಈ ವಿಷಯವನ್ನು ಸೂಚಿಸಿದ್ದನು. ಆ ಭಗವದನುಗ್ರಹವನ್ನು ನೆರವೇ
ರಿಸುವುದಕ್ಕಾಗಿಯೇ ದಯಾಳುವಾದ ನೀನು ನನ್ನಲ್ಲಿಗೆ ಬಂದು ನನ್ನ ಕೋ
ರಿಕೆಗಳೆಲ್ಲವನ್ನೂ ಸಂಪೂರ್ಣವಾಗಿ ನೆರವೇರಿಸಿದೆ. ಈ ತತ್ವೋಪದೇಶದಿಂದ
ಮಹೋಪಕಾರವನ್ನು ಮಾಡಿದ ನಿನಗೆ ಪ್ರತ್ಯುಪಕಾರವಾಗಿ ನಾನು ಯಾ
ವ ಗುರುದಕ್ಷಿಣೆಯನ್ನು ಕೊಡಲಿ! ಈ ನನ್ನ ದೇಹವಾಗಲಿ, ನನ್ನಲ್ಲಿರತಕ್ಕ
ಬೇರೆ ಉತ್ತಮವಸ್ತುಗಳಾಗಲಿ, ಮಹಾತ್ಮನಾದ ನಿನ್ನ ಅನುಗ್ರಹದಿಂದಲೇ
ಲಭಿಸಿದುವಲ್ಲದೆ ಬೇರೆಯಲ್ಲ. ಇವುಗಳಲ್ಲಿ ಯಾವುದನ್ನು ನನ್ನದೆಂದು ಭಾವಿ
ಸಿ ನಾನು ನಿಮಗೆ ಒಪ್ಪಿಸಬಲ್ಲೆನು ? ನೀನೇ ಅನುಗ್ರಹಿಸಿಕೊಟ್ಟುದ
ನ್ನು ಹಿಂತಿರುಗಿಕೊಟ್ಟರೂ ಫಲವೇನು ? ಹಾಗಿದ್ದರೂ ಭೃತ್ಯನು ತನಗೆ

ರಾಜಾನುಗ್ರಹದಿಂದ ಲಭಿಸಿದ ಹಣವನ್ನು,ಅವನಿಗೇ ಹಿಂತಿರುಗಿ ಕೊಡುವಂತೆ,ಈಗ ನಾನೂ, ಈ ನನ್ನ ಪ್ರಾಣಗಳನ್ನೂ,ನನ್ನ ಧನವನ್ನೂ, ನನ್ನ ಮಕ್ಕಳನ್ನೂ,ಈ ನನ್ನ ಗೃಹವನ್ನೂ, ನನ್ನ ಪರಿವಾರಗಳನ್ನೂ, ರಾಜ್ಯ, ಸೈನ್ಯ, ಕೋಶ, ಭೂಮಿ ಮುಂತಾದುವುಗಳೆಲ್ಲವನ್ನೂ ನಿಮ್ಮ ಪಾದಾರವಿಂದಗಳಲ್ಲಿ ಅರ್ಪಣಮಾಡುವೆನು. “ಈ ರಾಜ್ಯಕೋಶಾದಿಗಳಿಂದ ನನಗೇನು ?” ಅವುಗಳನ್ನು ನಾನು ಪರಿಪಾಲಿಸಬಲ್ಲೆನೆ”? ಎಂದು ನೀನು ಚಿಂತಿಸಬೇಕಾದುದಿಲ್ಲ. ಸೇನಾಧಿಪತ್ಯಕ್ಕಾಗಲಿ, ದಂಡಾಧಿಕಾರಕ್ಕಾಗಲಿ, ಕೊನೆಗೆ ಸರ್ವಲೋಕಾಧಿಪತ್ಯಕ್ಕಾಗಲಿ, ವೇದಶಾಸ್ತ್ರಗಳನ್ನು ಬಲ್ಲ ನಿಮ್ಮಂತವರೇ ಅರ್ಹರು ! ಲೋಕದಲ್ಲಿ ಬ್ರಾಹ್ಮಣರು ತಮ್ಮ ಅನ್ನವನ್ನೇ ತಾವು ತಿನ್ನತಕ್ಕವರು. ತಮ್ಮ ವಸ್ತುವನ್ನೇ ತಾವು ಧರಿಸುವರು ಇತರ ಜಾತಿಯವರಿಗೂ ತಾವಾಗಿಯೇ ಕೊಡುವರು ಕ್ಷತ್ರಿಯರೇ ಮೊದಲಾದ ಇತರ ವರ್ಣದವರೆಲ್ಲರೂ ಬ್ರಾಹ್ಮಣಾನುಗ್ರಹದಿಂದ ಬಂದುದನ್ನೇ ಉಪಯೋಗಿಸತಕ್ಕವರು. ವೇದಗಳನ್ನು ಪರಿಶೀಲಿಸಿ, ಆತ್ಮಸ್ವರೂಪವನ್ನು ಚೆನ್ನಾಗಿ ತಿಳಿದ ನೀನು, ದುಃಖಸಮುದ್ರವನ್ನು ದಾಟಿಸತಕ್ಕ ಉಪಾಯವನ್ನು ಈಗ ನನಗೆ ಉಪದೇಶಿಸಿದಂತಾಯಿತು.ದಯಾಳುಗಳಾದ ನಿಮ್ಮಂತವರು ಮಾಡುವ ಈ ಪರೋಪಕಾರಕ್ಕಾಗಿ,ನಿಮ್ಮಲ್ಲಿ ನೀವೇ ತೃಪ್ತಿಹೊಂದಬೇಕೇಹೊರತು, ನಿಮ್ಮ ಉಪಕಾರಕ್ಕೆ ನಾವು ಯಾವ ಪ್ರತ್ಯುಪಕಾರವನ್ನೂ ಮಾಡಲಾರೆವು.ಇದೋ ಅರ್ಘ್ಯಪ್ರದಾನಪೂರ್ವಕವಾದ ಈ ಅಂಜಲಿಯೊಂದುಹೊರತು,ಬೇರೆ ಯಾವ ಉಪಕಾರವನ್ನೂ ನಾನು ಮಾಡಲಾರೆನು”ಎಂದನು. ಆತ್ಮಯೋಗವನ್ನು ರಕ್ಷಿಸತಕ್ಕ ಸನಕಾದಿಗಳೆಲ್ಲರೂ,ಆಪೃಥುಚಕ್ರವರ್ತಿಯ ಗುಣವನ್ನು ಕೊಂಡಾಡುತ್ತ, ಅವನಿಂದ ಪೂಜಿತರಾಗಿ,ಅಲ್ಲಿ ನೆರೆದಿದ್ದ ಜನರೆಲ್ಲರೂ ನೋಡುತ್ತಿರುವಹಾಗೆಯೇ ಅಂತರಿಕ್ಷಮಾರ್ಗವಾಗಿ ಹೊರಟು ಕಣ್ಮರೆಯಾದರು. ಆ ಮೇಲೆ ಇತ್ತಲಾಗಿ ಪೃಥುಚಕ್ರವರ್ತಿಯು, ಆ ಸನತ್ಕುಮಾರನ ತತ್ವೋಪದೇಶದಿಂದ ತನ್ನನ್ನು ಕೃತಕೃತ್ಯನನ್ನಾಗಿ ಭಾವಿಸಿ, ಸಂತೋಷದಿಂದಿದ್ದನು. ಅದುಮೊದಲು ಆ ರಾಜನು ಕಾಲಕ್ಕೂ, ದೇಶಕ್ಕೂ,ತನ್ನ ದೇಹಬಲಕ್ಕೂ, ದ್ರವ್ಯಬಲಕ್ಕೂ,ಅನುಗುಣವಾಗಿ,ತಾನು ನಡೆಸತಕ್ಕ ವರ್ಣಾಶ್ರಮಧರ್ಮಗ

ಳೆಲ್ಲವನ್ನೂ ಭಗವದರ್ಪಣರೂಪವಾಗಿಯೇ ನಡೆಸುತ್ತಬಂದನು. ಮತ್ತು ತಾನು ನಡೆಸತಕ್ಕ ಸಮಸ್ತಕರ್ಮಗಳ ಫಲವೂ ಬ್ರಹ್ಮಾಧೀನವೆಂದೂ, ಆ ವಿಷಯದಲ್ಲಿ ತನ್ನ ಪ್ರಯತ್ನವು ಕಾರಣವಲ್ಲವೆಂದೂ ತಿಳಿದು, ತಾನೇ ಆ ಕರ್ಮಗಳನ್ನು ನಡೆಸತಕ್ಕವನೆಂಬ ಸ್ವತಂತ್ರಾಭಿಮಾನವನ್ನೂ, ಅಹಂಕಾರ ಮಮಕಾರಗಳನ್ನೂ ನಿಶ್ಶೇಷವಾಗಿ ತೊರೆದು. ಆ ಕರ್ಮಗಳನ್ನು ನಡೆಸುತ್ತಿದ್ದನು. ಈ ಅಭಿಮಾನಗಳೆಲ್ಲವೂ ಆತ್ಮನಿಗೆ ಪ್ರಕೃತಿಸಂಬಂಧದಿಂದಲೇ ಉಂಟಾಗುವುವೆಂದೂ, ಆ ಆತ್ಮವು ಪ್ರಕೃತಿಗಿಂತಲೂ ವಿಲಕ್ಷಣವಾದುದೆಂದೂ ತಿಳಿದುಕೊಂಡನು. ಮತ್ತು ಅವನು ಭೋಗಸಮೃದ್ಧವಾದ ತನ್ನ ರಾಜ್ಯದಲ್ಲಿರುತ್ತಿದ್ದರೂ, ಬೇಕಾದ ಸಾಮ್ರಾಜ್ಯಸಂಪತ್ತುಗಳನ್ನು ಪಡೆದಿದ್ದರೂ, ಶಬ್ದಾದಿವಿಷಯಗಳಿಗೆ ವಶನಾಗದೆ, ದೇಹಾತ್ಮಭ್ರಮವನ್ನು ಬಿಟ್ಟು, ಕೆಸರುನೀರಿನಲ್ಲಿ ಪ್ರತಿಬಿಂಬಿಸಿದರೂ, ಅದರ ಕೊಳೆಗಳನ್ನಂಟಿಸಿಕೊಳ್ಳದ ಸೂರ್ಯನಂತೆ ನಿಷ್ಕಲ್ಮಷನಾಗಿರುತ್ತಿದ್ದನು. ಹೀಗೆ ಪೃಥುಚಕ್ರವರ್ತಿಯು ಭಕ್ತಿಯೋಗದಿಂದ ಕರ್ಮಗಳನ್ನಾಚರಿಸುತ್ತ, ಅರ್ಚಿಯೆಂಬ ತನ್ನ ಪತ್ನಿಯಲ್ಲಿ ತನಗೆ ಸಮಾನಗುಣವುಳ್ಳ ಐದುಮಂದಿಪುತ್ರರನ್ನು ಪಡೆದನು ಅವರಿಗೆ ಕ್ರಮವಾಗಿ ವಿಜಿತಾಶ್ವನೆಂದೂ, ಧನ್ವಕೇಶನೆಂದೂ, ಹರ್ಯಕ್ಷನೆಂದೂ, ದ್ರವಿಣನೆಂದೂ, ವೃಕನೆಂದೂ ಹೆಸರು ಹೀಗೆ ಆ ಪೃಥುಚಕ್ರವರ್ತಿಯು ತಾನು ರಾಜ್ಯವನ್ನು ನಡೆಸುವಾಗ, ಇಂದ್ರಾದಿದಿಕ್ಪಾಲಕರಲ್ಲಿರುವ ಅಸಾಧಾರಣಗುಣಗಳನ್ನು ತನ್ನಲ್ಲಿ ಹೊರಪಡಿಸುತ್ತ, ಪರಮಾತ್ಮನಿಂದ ಸೃಷ್ಟವಾದ ಈ ಜಗತ್ತನ್ನು ರಕ್ಷಿಸುವುದಕ್ಕಾಗಿ, ಕಾಲಕ್ಕೆ ತಕ್ಕಂತೆ ಆಯಾಗುಣಗಳನ್ನು ಹೊರಪಡಿಸುತಿದ್ದನು. ತನ್ನ ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ, ತನ್ನ ಗುಣಗಳಿಂದಲೂ, ಲೋಕವನ್ನು ಉಲ್ಲಾಸಗೊಳಿಸುವುದರಿಂದ, ಚಂದ್ರನಂತೆ ತನ್ನ ರಾಜಶಬ್ದವನ್ನು ಸಾರ್ಥಕಪಡಿಸುತ್ತಿದ್ದನು. ಸೂರ್ಯನು ತನ್ನ ತಾಪದಿಂದ ನೆಲದ ನೀರನ್ನೆಳೆದು, ಉಚಿತಕಾಲದಲ್ಲಿ ಅದನ್ನು ನೆಲದ ಮೇಲೆಯೇ ಚೆಲ್ಲುವಂತೆ ಪ್ರಜೆಗಳಿಂದ ತೆಗೆದ ತೆರಿಗೆಯನ್ನು, ಸಮಯೋಚಿತವಾಗಿ ಪ್ರಜಾರಕ್ಷಣೆಗಾಗಿಯೇ ಉಪಯೋಗಿಸುತ್ತಿದ್ದನು. ಅಗ್ನಿಯಂತೆ ದುಸ್ಸಹವಾದ ತೇಜಸ್ಸಿನಿಂದ ಬೆಳಗುತ್ತಿದ್ದನು. ಮಹೇಂದ್ರನಂತೆ

ಶತ್ರುಗಳಿಗೆ ದುರ್ಜಯನಾಗಿದ್ದನು. ತಾಳ್ಮೆಯಿಂದ ಭೂದೇವಿಯನ್ನು ಹೋಲುತ್ತಿದ್ದನು. ಪ್ರಜೆಗಳಿಗೆ ಬೇಕುಬೇಕಾದ ವಸ್ತುಗಳನ್ನೊದಗಿಸಿ ಕೊಡುವುದರಲ್ಲಿ ಕಾಮಧೇನುವಂತಿದ್ದನು. ಪರ್ಜನ್ಯನಂತೆ ಲೋಕಕ್ಕೆ ಯಥೇಷ್ಟವಾದ ಧನವನ್ನು ಕರೆದು ತೃಪ್ತಿಗೊಳಿಸುತ್ತಿದ್ದನು. ಸಮುದ್ರದಂತೆ ಗಂಭೀರನಾಗಿಯೂ, ಸತ್ಯದಲ್ಲಿ ಮೇರುವಂತೆ ನಿಶ್ಚಲನಾಗಿಯೂ, ದುಷ್ಟರನ್ನು ಶಿಕ್ಷಿಸುವುದರಲ್ಲಿ ಯಮಧರ್ಮರಾಜನಂತೆ ಕ್ರೂರನಾಗಿಯೂ, ಐಶ್ವರ್ಯದಲ್ಲಿ ಹಿಮವಂತನಂತೆ ಸಮೃದ್ಧಿಯುಳ್ಳವನಾಗಿಯೂ, ಕುಬೇರನಂತೆ ಧನಾಢ್ಯನಾಗಿಯೂ ಇದ್ದನು. ರಾಜ್ಯರಕ್ಷಣಕ್ಕೆ ಬೇಕಾದ ಧನವನ್ನು ಬಚ್ಚಿಡುವುದರಲ್ಲಿ ಸಮುದ್ರಾಧಿಪತಿಯಾದ ವರುಣನನ್ನು ಹೋಲುತಿದ್ದನು. ವಾಯುವಿನಂತೆ ಸರ್ವವ್ಯಾಪಿಯಾಗಿದ್ದನು. ಬಲದಿಂದಲೂ, ತೇಜಸ್ಸಿನಿಂದಲೂ, ದೇಹಕಾಂತಿಯಿಂದಲೂ, ದುಸ್ಸಹವಾದ ವೀರ್ಯದಿಂದಲೂ ಭೂತಪತಿಯಾದ ರುದ್ರನನ್ನು ಹೋಲುತಿದ್ದನು, ಸೌಂದರ್ಯದಲ್ಲಿ ಮನ್ಮಥನನ್ನೂ, ಧೈರ್ಯದಲ್ಲಿ ಸಿಂಹವನ್ನೂ, ವಾತ್ಸಲ್ಯಗುಣದಲ್ಲಿ ಸ್ವಾಯಂಭುವಮನುವನ್ನೂ, ಪ್ರಭುತ್ವದಲ್ಲಿ ಬ್ರಹ್ಮದೇವನನ್ನೂ ಹೋಲುತಿದ್ದನು ವೇದಾರ್ಥವಿಮರ್ಶನದಲ್ಲಿ ಬೃಹಸ್ಪತಿಯನ್ನೂ, ಸ್ವಾತಂತ್ರ್ಯದಲ್ಲಿ ಶ್ರೀಮಹಾವಿಷ್ಣುವನ್ನೂ ಹೋಲುತಿದ್ದನು. ಮತ್ತು ಗೋಬ್ರಾಹ್ಮಣರಲ್ಲಿಯೂ, ಗುರುಹಿರಿಯರಲ್ಲಿಯೂ ಭಗವದ್ಭಕ್ತರಲ್ಲಿಯೂ ವಿಶೇಷಭಕ್ತಿಯುಳ್ಳವನಾಗಿದ್ದನು. ಲಜ್ಜೆ, ವಿನಯ, ಸೌಶೀಲ್ಯ, ಮುಂತಾದ ಗುಣಗಳಲ್ಲಿಯೂ, ಪರೋಪಕಾರದಲ್ಲಿಯೂ, ತನಗೆ ತಾನೇ ಸಾಟಿಯಾಗಿದ್ದನೇ ಹೊರತು ಅವನಿಗೆ ಸಮಾನರಾದವರೊಬ್ಬರೂ ಇರಲಿಲ್ಲ. ಮೂರು ಲೋಕದಲ್ಲಿಯೂ ಅಲ್ಲಲ್ಲಿ ಪುರುಷರಿಂದ ಕೀರ್ತಿಸಲ್ಪಡುತಿದ್ದ ಆತನ ಕೀರ್ತಿಯು, ಶ್ರೀರಾಮಚಂದ್ರನ ಕೀರ್ತಿಯಂತೆ ಎಲ್ಲಾಸ್ತ್ರೀಯರ ಕರ್ಣರಂಧ್ರಗಳಲ್ಲಿಯೂ ತುಂಬಿ ತುಳುಕುತಿತ್ತು. ಇಲ್ಲಿಗೆ ಇಪ್ಪತ್ತೊಂದನೆಯ ಅಧ್ಯಾಯವು.

---

ಪೃಥುವು ತನ್ನ ಮಕ್ಕಳಿಗೆ ರಾಜ್ಯವನ್ನೊಪ್ಪಿಸಿ, ಭಾರ್ಯಾಸಮೇತನಾಗಿ ತಪಸ್ಸಿನಲ್ಲಿದ್ದು, ದೇಹಾವಸಾನದಲ್ಲಿ ವಿಮಾನವನ್ನೇರಿ ವೈಕುಂಠಕ್ಕೆ ಹೋದುದು.

ವಿದುರಾ! ಕೇಳು! ತತ್ವಜ್ಞನಾದ ಆ ರಾಜನು ರಾಜ್ಯವನ್ನು ನಡೆಸುತ್ತಿರುವಾಗ, ದೇಶದ ಪ್ರಜೆಗಳೆಲ್ಲರನ್ನೂ ಕ್ಷೇಮದಿಂದ, ಪೋಷಿಸುವುದು, ಜಂಗಮಸ್ಥಾವರರೂಪವಾದ ಜಗತ್ತಿಗೆಲ್ಲಾ ಜೀವನಾಧಾರವನ್ನು ಕಲ್ಪಿಸಿಕೊಡುವುದು, ಸತ್ಪುರುಷರ ಧರ್ಮಕ್ಕೆ ಲೋಪವಿಲ್ಲದಂತೆ ರಕ್ಷಿಸುವುದು, ಇವೇ ಮೊದಲಾದ ಕಾರ್ಯಗಳಿಂದ, ಪ್ರಜಾಪಾಲನರೂಪವಾದ ಈಶ್ವರಾಜ್ಞೆಯನ್ನು ಕ್ರಮವಾಗಿ ನಿರ್ವಹಿಸುತ್ತ, ತಾನು ಯಾವ ಕಾರ್ಯಕ್ಕಾಗಿ ಹುಟ್ಟಿದನೋ ಆ ಕಾರ್ಯಗಳೆಲ್ಲವನ್ನೂ ಮುಗಿಸಿದನು. ಆಮೇಲೆ ಒಂದಾನೊಂದುಕಾಲದಲ್ಲಿ ತನಗೆ ವಾರ್ಧಕದಶೆಯುಂಟಾದುದನ್ನು ನೋಡಿ, ರಾಜ್ಯವನ್ನು ತನ್ನ ಮಕ್ಕಳಿಗೊಪ್ಪಿಸಿ, ತಪೋವನಕ್ಕೆ ಹೋಗಬೇಕೆಂದು ಸಂಕಲ್ಪಿಸಿದನು. ತನಗೆ ಪುತ್ರಿಯಂತಿದ್ದ ಭೂಮಿಯು, ತನ್ನ ವಿಯೋಗವನ್ನು ಸಹಿಸಲಾರದೆ ರೋದಿಸುತಿದ್ದರೂ, ಪ್ರಜೆಗಳೆಲ್ಲರೂ ತನ್ನನ್ನು ಬಿಡಲಾರದೆ ದುಃಖಿಸುತಿದ್ದರೂ ಲಕ್ಷ್ಯಮಾಡದೆ, ಆ ಭೂಮಿಯನ್ನು ತನ್ನ ಮಕ್ಕಳ ವಶಕ್ಕೆ ಕೊಟ್ಟು, ಭಾರ್ಯಾಸಮೇತನಾಗಿ ತಪೋವನಕ್ಕೆ ಹೊರಟನು. ಅಲ್ಲಿ ಶಮದಮಾದಿ ಗುಣಗಳನ್ನು ಹಿಡಿದು, ಮೊದಲು ತಾನು ದಿಗ್ವಿಜಯವನ್ನು ಮಾಡುವಾಗ ಹೇಗೋಹಾಗೆ ದೃಢಪ್ರಯತ್ನದಿಂದ ವಾನಪ್ರಸ್ಥರಿಗೆ ಯೋಗ್ಯವಾದ ಉಗ್ರತಪಸ್ಸಿನಲ್ಲಿ ನೆಲೆಗೊಂಡಿದ್ದನು. ಕೆಲವು ಕಾಲದವರೆಗೆ ಕಂದಮೂಲಫಲಾದಿಗಳನ್ನೇ ಭಕ್ಷಿಸುತ್ತಬಂದನು. ಆಮೇಲೆ ಕೆಲವು ಕಾಲದವರೆಗೆ ತರಗೆಲೆಯಿಂದಲೂ,ಆಮೇಲೆಕೆಲವುಪಕ್ಷಗಳವರೆಗೆಜಲಾಹಾರದಿಂದಲೂ,ಆಮೇಲೆಕೇವಲವಾಯುಭಕ್ಷಣದಿಂದಲೂ,ಪ್ರಾಣಧಾರಣೆಯನ್ನು ಮಾಡುತಿದ್ದನು. ಬೇಸಗೆಯಲ್ಲಿ ಪಂಚಾಗ್ನಿಮಧ್ಯದಲ್ಲಿಯೂ, ಮಳೆಗಾಲದಲ್ಲಿ ಎಡೆಬಿಡದೆ ಸುರಿಯುವ ಮಳೆಯಲ್ಲಿಯೂ, ಹನಿಗಾಲದಲ್ಲಿ ಕಂಠಪ್ರಮಾಣದ ನೀರಿನಲ್ಲಿಯೂ ತಪಸ್ಸನ್ನು ಮಾಡುತಿದ್ದನು ಬರೀನೆಲದಮೇಲೆಯೇ ಮಲಗುತ್ತ, ಶೀತೋ

ಷ್ಣಾದಿಬಾಧೆಗಳನ್ನು ಲಕ್ಷ್ಯಮಾಡದೆ, ಮೌನವನ್ನು ಹಿಡಿದು ಇಂದ್ರಿಯಗಳನ್ನು ಜಯಿಸಿ, ಸ್ತ್ರೀಚಾಪಲ್ಯವನ್ನು ಬಿಟ್ಟು ಪ್ರಾಣವಾಯುವನ್ನಡಗಿಸಿ ಭಗವದ್ಧ್ಯಾನರೂಪವಾದ ತಪಸ್ಸಿನಲ್ಲಿಯೇ ಇರುತಿದ್ದನು. ಹೀಗೆ ಆ ರಾಜನು ದಿನದಿನಕ್ಕೆ ಸಾಧಿಸಿದ ತಪೋಬಲದಿಂದ ತನ್ನ ಪ್ರಾರಬ್ಧ ಕರ್ಮಗಳೆಲ್ಲವನ್ನೂ ಕಳೆದು, ಪ್ರಾಣಾಯಾಮಗಳಿಂದ ಮನಸ್ಸನ್ನು ಶುದ್ಧಪಡಿಸಿ, ಕಾಮಕ್ರೋಧಾದಿಗಳೆಲ್ಲವನ್ನೂ ಜಯಿಸಿ, ಮನಸ್ಸಿನ ವ್ಯಸನಗಳೆಲ್ಲವನ್ನೂ ಅಡಗಿಸಿ, ತನಗೆ ಸನತ್ಕುಮಾರರು ಉಪದೇಶಿಸಿದ ಅಧ್ಯಾತ್ಮಯೋಗದಿಂದಲೇ ಯೋಗಾರಾಧ್ಯನಾದ ಪರಮಪುರುಷನನ್ನು ಆರಾಧಿಸುತ್ತ,ಬಂಧಸು: ಕೇವಲ ನಿವೃತ್ತಿಧರ್ಮವನ್ನು ಹಿಡಿದು ಪ್ರಯತ್ನಪೂರ್ವಕವಾಗಿ ಭಗವಂತನನ್ನು ಧ್ಯಾನಿಸುತಿದ್ದ ಆ ರಾಜನಿಗೆ ಆ ಪರಮಾತ್ಮನಲ್ಲಿ ನಿಶ್ಚಲವಾದ ಭಕ್ತಿಯೂ ನೆಲೆಗೊಂಡಿತು. ಅದರಿಂದ ಸತ್ವಗುಣವನ್ನು ಹೊಂದಿ ಶುದ್ಧಮನಸ್ಸುಳ್ಳ ಆ ರಾಜನಿಗೆ ಪೂರ್ಣವಾದ ಭಕ್ತಿಯೂ, ಅದರಿಂದ ಆತ್ಮಜ್ಞಾನವೂ, ವೈರಾಗ್ಯವೂ ಹುಟ್ಟಿತು ಈ ಭಕ್ತಿಜ್ಞಾನವೈರಾಗ್ಯಗಳಿಂದ ಆತನಿಗೆ ಪ್ರಕೃತಿಸಂಬಂಧದಿಂದುಂಟಾಗಿದ್ದ ಸಂದೇಹಗಳೆಲ್ಲವೂ ಅಡಗಿದುವು. ತನ್ನ ಜೀವಾತ್ಮನನ್ನು ಮರೆಸಿರತಕ್ಕ ಪ್ರಕೃತಿಸಂಬಂಧವಾದ ದೇಹಕ್ಕೂ, ಆತ್ಮಕ್ಕೂ ಸಂಬಂಧವಿಲ್ಲವೆಂಬ ಜ್ಞಾನವುಂಟಾಯಿತು. ಆ ಆತ್ಮದ ನಿಜಸ್ಥಿತಿಯು ತಿಳಿದೊಡನೆ, ದೇಹವೇ ಮೊದಲಾದ ಇತರವಸ್ತುಗಳ ಚಿಂತೆಯೇ ತಪ್ಪಿಹೋಯಿತು. ಆ ಆತ್ಮನಿಗೆ ಪ್ರಕೃತಿಸಂಬಂಧದಿಂದುಂಟಾಗುತಿದ್ದ ವ್ಯಾಪಾರಗಳೆಲ್ಲವೂ ನಿಂತು ಹೋದುವು. ಈ ಆತ್ಮಜ್ಞಾನವು ಪೂರ್ಣವಾಗಿ ಕೈಗೂಡಿದಮೇಲೆ ದೇಹಾತ್ಮಸಂಬಂಧವನ್ನು ಚಿಂತಿಸುವುದಕ್ಕೆ ಕಾರಣವಾದ ಅಜ್ಞಾನವೂ ತಪ್ಪಿ, ಆತ್ಮನಿಗೂ, ಪರಮಾತ್ಮನಿಗೂ ಇರುವ ಸಂಬಂಧವನ್ನು ಮಾತ್ರ ಚಿಂತಿಸುವುದರಲ್ಲಿ ಬುದ್ಧಿಯು ಪ್ರವರ್ತಿಸಿತು. ಪರಮಾತ್ಮನಿಗೆ ಒಳಪಟ್ಟ ಆತ್ಮಸ್ವರೂಪವನ್ನೇ ಅನುಭವಿಸುತಿದ್ದನು. ವಿದುರಾ! ಯೋಗವನ್ನು ಹಿಡಿದಾಗಲೂ, ಭಗವಂತನ ಕಥೆಗಳನ್ನು ಪ್ರೀತಿಯಿಂದ ಕೇಳದಿರುವವನ ಮನಸ್ಸು, ಆ ಯೋಗದಲ್ಲಿ ದೃಢವಾಗಿ ನಿಲ್ಲಲಾರದು. ಭಗವತ್ಕಥೆಗಳು ಕಿವಿಗೆ ಬೀಳದಿದ್ದಾಗ ಮನಸ್ಸು ಎಚ್ಚರತಪ್ಪಿ ಹೋಗುವುದು. ಅದರಿಂದ ಅವನು

ಅದುವರೆಗೆ ಮಾಡಿದ ಪ್ರಯತ್ನಗಳೆಲ್ಲವೂ ಕ್ಷಣಮಾತ್ರದಲ್ಲಿ ವ್ಯರ್ಥವಾಗುವುವು. ಈ ಪೃಥುಚಕ್ರವರ್ತಿಯಾದರೋ,ಭಗವತ್ಕಥೆಗಳಲ್ಲಿ ಬಹಳ ಶ್ರದ್ಧೆಯುಳ್ಳವನಾದುದರಿಂದ, ಇವನ ಮನಸ್ಸು ಎಳ್ಳಷ್ಟಾದರೂ ಎಚ್ಚರತಪ್ಪದೆ ಆ ಯೋಗಮಾರ್ಗದಲ್ಲಿ ನೆಲೆಗೊಂಡಿದ್ದಿತು ಹೀಗೆ ಆ ಮಹಾವೀರನು, ಆತ್ಮ ಪರಮಾತ್ಮಸ್ವರೂಪವನ್ನು ಚಿಂತಿಸುವುದರಲ್ಲಿಯೇ ಮನಸ್ಸನ್ನು ನೆಲೆಗೊಳಿಸಿದಮೇಲೆ,ಪಾಪರಾಹಿತ್ಯವೇ ಮೊದಲಾದ ಎಂಟು ಗುಣಗಳುಳ್ಳ ತನ್ನ ಶುದ್ಧಾತ್ಮಸ್ವರೂಪವು ತನಗೆ ತೋರಿಬಂದುದರಿಂದ, ಪರಬ್ರಹ್ಮದೊಡನೆ ಸಮಾನರೂಪದಿಂದ ತನ್ನನ್ನುಭಾವಿಸಿಕೊಂಡನು- ಅವನ ಪ್ರಾರಬ್ಧಕರ್ಮವು ತೀರಿಹೋಗುವಕಾಲವು ಬಂದೊಡನೆ ತನ್ನ ಶರೀರವನ್ನೂ ಸೀಗಿದನು. ವಿದುರಾ,ಅವನು ಶರೀರತ್ಯಾಗವನ್ನು ಮಾಡಿದ ಕ್ರಮವನ್ನು ತಿಳಿಸುವೆನು ಕೇಳು. ಅವನು ತನ್ನ ಹಿಮ್ಮಡಿಗಳಿಂದ ಆಸನದ್ವಾರವನ್ನು ಬಲವಾಗಿ ಬಂಧಿಸಿ,ಪ್ರಾಣವಾಯುವನ್ನು ಅದರ ಮೂಲಸ್ಥಾನದಿಂದ ಮೆಲ್ಲಗೆ ಮೇಲುಮುಖವಾಗಿ ಹೊರಡಿಸಿ, ನಾಭಿಸ್ಥಾನಕ್ಕೆ ತಂದನು. ಹಾಗೆಯೇ ಅಲ್ಲಿಂದ ಕ್ರಮವಾಗಿ, ಎದೆ, ಕಂಠ, ಮುಂತಾದ ಸ್ಥಾನಗಳಿಗೆ ತಂದು, ಅಲ್ಲಿಂದ, ಹುಬ್ಬುಗಳ ನಡುಭಾಗಕ್ಕೂ, ಅಲ್ಲಿಂದ ಬ್ರಹ್ಮರಂಧ್ರಕ್ಕೂ ತಂದು ನಿಲ್ಲಿಸಿದನು. ಆ ಸ್ಥಿತಿಯಲ್ಲಿ ತನಗೆ ಲಭಿಸಬಹುವಾದ ಅಣಿಮಾದ್ಯೈಶ್ವರ್ಯಾದಿಗಳಲ್ಲಿಯೂ, ಕೈವಲ್ಯಾದಿಗಳಲ್ಲಿಯೂ ಆಸೆಯನ್ನಿಡದೆ, ತನ್ನ ದೇಹದಲ್ಲಿದ್ದ ಆ ಪ್ರಾಣವಾಯುವನ್ನು ಮಹಾವಾಯುವಿನೊಡನೆ ಸೇರಿಸಿದನು. ಹಾಗೆಯೇ ತನ್ನ ದೇಹದಲ್ಲಿದ್ದ ಭೂಮ್ಯಂಶವನ್ನು ಭೂಮಿಯಲ್ಲಿಯೂ, ತೇಜಸ್ಸನ್ನು ತೇಜಸ್ಸಿನಲ್ಲಿಯೂ, ಇಂದ್ರಿಯಗಳಿಗೆ ಸ್ಥಾನವಾದ ರಂಧ್ರಗಳನ್ನು ಮಹಾಕಾಶದಲ್ಲಿಯೂ, ಜಲಾಂಶವನ್ನು ಮಹಾಜಲದಲ್ಲಿಯೂ ಸೇರಿಸಿದನು.ಹೀಗೆ ತನ್ನ ದೇಹದಲ್ಲಿರುವ ಪಂಚಭೂತಾಂಶಗಳನ್ನೂ ಅದಕ್ಕೆ ಕಾರಣಗಳಾದ ಪಂಚಮಹಾಭೂತಗಳಲ್ಲಿ ಲಯಹೊಂದಿಸಿದಂತೆ ಭಾವಿಸಿ, ಆಮೇಲೆ ಕ್ರಮವಾಗಿ ಆ ಮಹಾಭೂಮಿಯು ಮಹಾಜಲದಲ್ಲಿಯೂ, ಆ ಮಹಾಜಲವು ಮಹಾತೇಜಸ್ಸಿನಲ್ಲಿಯೂ,ಅದು ಮಹಾವಾಯುವಿನಲ್ಲಿಯೂ.ಅದು ಮಹಾಕಾಶದಲ್ಲಿಯೂ ಮರೆಗೊಂಡಂತೆ ಭಾವಿಸಿದನು.ಹಾಗೆಯೇ ಮನಸ್ಸು ಇಂದ್ರಿಯಗಳಲ್ಲಿಯೂ,

ಇಂದ್ರಿಯಗಳು ತನ್ಮಾತ್ರಗಳಲ್ಲಿಯೂ, ತನ್ಮಾತ್ರಗಳು ಅಹಂಕಾರತತ್ವದಲ್ಲಿಯೂ, ಆ ಅಹಂಕಾರತತ್ವವು ಮಹತ್ತತ್ವದಲ್ಲಿಯೂ, ಆ ಮಹತ್ತತ್ವವು ಪ್ರಧಾನವೆನಿಸಿಕೊಂಡ ಪ್ರಕೃತಿತತ್ವದಲ್ಲಿಯೂ ಲಯಹೊಂದಿದಂತೆ ಭಾವಿಸಿದನು. ಹೀಗೆ ಮೂಲಪ್ರಕೃತಿಯಿಂದ ಹುಟ್ಟಿ ತನ್ನ ದೇಹದಲ್ಲಿ ಸೇರಿದ್ದ ತತ್ವಾಂಶಗಳೆಲ್ಲವೂ, ಯಾವಕ್ರಮದಿಂದ ಸೃಷ್ಟಿಸಲ್ಪಟ್ಟವೋ, ಆ ಕ್ರಮಕ್ಕೆ ವಿಲೋಮವಾಗಿ,ತನಗೆ ಕಾರಣಗಳಾದ ಹಿಂದಿನ ತತ್ವಗಳಲ್ಲಿ ಲಯಹೊಂದುತ್ತ ಬಂದಂತೆ ಭಾವಿಸಿಕೊಂಡನು ಪ್ರಾಯಕವಾಗಿ ತಾನು ಜೀವಿಸಿದ್ದಕಾಲದಲ್ಲಿಯೇ ತನ್ನ ಕರ್ಮಗಳೆಲ್ಲವನ್ನೂ ಅನುಭವಿಸಿ ಕಳೆದು, ಸ್ವಲ್ಪಮಾತ್ರವೇ ಕರ್ಮಶೇಷವನ್ನು ಹೊಂದಿದ್ದ ಆ ಪೃಥುಚಕ್ರವರ್ತಿಯು,ಹೀಗೆ ಪ್ರಕೃತಿಸಂಬಂಧವನ್ನು ನೀಗಿದ ಆತ್ಮಸ್ವರೂಪವನ್ನು ಅನುಸಂಧಾನಮಾಡುವಾಗ,ಜ್ಞಾನವೈರಾಗ್ಯಗಳ ಬಲದಿಂದ ಆ ಕರ್ಮಶೇಷವನ್ನೂ ನೀಗಿ ಮುಕ್ತಿಯನ್ನು ಹೊಂದಿದನು. ಅವನೊಡನೆ ತಪೋವನಕ್ಕೆ ಬಂದಿದ್ದ ಅವನ ಪತ್ನಿಯಾದ ಅರ್ಚಿಯು,ನೆಲದಮೇಲೆ ಕಾಲಿಟ್ಟು ನಡೆಯುವುದಕ್ಕೂ ಅರ್ಹಳಲ್ಲದಷ್ಟು ಸುಕುಮಾರಿಯಾಗಿದ್ದರೂ, ಪರಮಪತಿವ್ರತೆಯಾದುದರಿಂದ, ತನ್ನ ಪತಿಯು ನಡೆಸುತಿದ್ದ ವ್ರತಗಳೆಲ್ಲವನ್ನೂ ತಾನು ಶ್ರದ್ಧೆಯಿಂದ ನಡೆಸುತ್ತ, ಬೇಕಾದ ಶುಶ್ರೂಷೆಗಳನ್ನೆಲ್ಲಾ ನಡೆಸುತಿದ್ದಳು. ಋಷಿಗಳಂತೆ ಗೆಡ್ಡೆಗೆಣಸುಗಳನ್ನೇ ತಿಂದು ಜೀವಿಸುತಿದ್ದಳು ಇದರಿಂದ ಅವಳ ದೇಹವು ಕ್ರಮಕ್ರಮವಾಗಿ ಕೃಶಿಸುತ್ತಬಂದರೂ, ಅವಳು ಸ್ವಲ್ಪವಾದರೂ ಮನಸ್ಸಿನಲ್ಲಿ ಬೇಸರಗೊಳ್ಳದೆ, ತನ್ನ ಪತಿಯ ಹಸ್ತಸ್ಪರ್ಶವನ್ನೇ ತನಗೆ ಪರಮಸಮ್ಮಾನವೆಂದು ಭಾವಿಸಿ ಸಂತೋಷದಿಂದಿದ್ದಳು. ಅಂತಹ ನಾರೀಮಣಿಯು ತನ್ನ ಪತಿಯಾದ ಪೃಥುಚಕ್ರವರ್ತಿಯ ಶರೀರವು ಚೈತನ್ಯವಿಲ್ಲದೆ ಮರದ ತುಂಡಿನಂತೆ ಬಿದ್ದಿರುವುದನ್ನು ನೋಡಿ, ಸ್ವಲ್ಪಹೊತ್ತಿನವರೆಗೆ ದುಃಖದಿಂದ ರೋದಿಸುತಿದ್ದು, ಕೊನೆಗೆ ಪರ್ವತದ ತಪ್ಪಲಲ್ಲಿ ಒಂದು ಚಿತೆಯನ್ನೊಡ್ಡಿ ಅದರಲ್ಲಿ ತನ್ನ ಪತಿಯ ದೇಹವನ್ನೇರಿಸಿದಳು. ಆಮೇಲೆ ಅಲ್ಲಿದ್ದ ಒಂದಾನೊಂದು ನದಿಯಲ್ಲಿ ಸ್ನಾನಮಾಡಿ ಕಾಲೋಚಿತವಾದ ಕರ್ಮವನ್ನು ಮುಗಿಸಿ, ತನ್ನ ಪತಿಗೆ ಜಲತರ್ಪಣವನ್ನು ಬಿಟ್ಟು,ದೇವತೆಗಳನ್ನೂ ತನ್ನ ಪತಿಯ ಪಾದಾರ

ವಿಂದಗಳನ್ನೂ ಧ್ಯಾನಿಸುತ್ತ, ಆ ಚಿತಾಗ್ನಿಯನ್ನು ಮೂರಾವರ್ತಿಪ್ರದಕ್ಷಿಣೆ ಮಾಡಿ ಬಂದು, ತಾನೂ ಆ ಚಿತೆಯಮೇಲೆ ಮಲಗಿಬಿಟ್ಟಳು. ಮಹಾಪತಿವ್ರತೆಯಾದ ಆಕೆಯು ತನ್ನ ಪತಿಯೊಡನೆ ಸಹಗಮನಮಾಡಿದುದನ್ನು ನೋಡಿ, ಆಕಾಶದಲ್ಲಿ ದೇವಸ್ತ್ರೀಯರು ತಮ್ಮತಮ್ಮ ಪತಿಗಳೊಡನೆ ಬಂದು, ಅವಳನ್ನು ಬಹಳವಾಗಿ ಕೊಂಡಾಡುತ್ತ ಮಂದರಪರ್ವತದ ತಪ್ಪಲಲ್ಲಿ ಪುಷ್ಪವರ್ಷಗಳನ್ನು ಕರೆಯುತ್ತಿದ್ದರು. ದೇವದುಂದುಭಿಗಳು ಮೊಳಗುತಿದ್ದುವು. ಆಗ ಆ ದೇವಸ್ತ್ರೀಯರೆಲ್ಲರೂ ಒಬ್ಬರಿಗೊಬ್ಬರು ಆಕೆಯ ಗುಣಗಳನ್ನು ಹೀಗೆಂದು ಪ್ರಶಂಸೆಮಾಡುವರು. “ ಆಹಾ ! ಈಕೆಯಲ್ಲವೇ ಭಾಗ್ಯಶಾಲಿನಿ ! ಯಜ್ಞಪತಿಯಾದ ಶ್ರೀಹರಿಯನ್ನು ಮಹಾಲಕ್ಷ್ಮಿಯು ಹೇಗೋಹಾಗೆ ಇವಳು ಸರ್ವವಿಧದಿಂದಲೂ ತನ್ನ ಪತಿಯಾದ ಪೃಥುರಾಜನನ್ನೇ ಅನುವರ್ತಿಸುತಿದ್ದಳು. ಈಕೆಯ ಪುಣ್ಯವೇ ಪುಣ್ಯವು ! ನಾವೆಲ್ಲರೂ ನೋಡುತ್ತಿರುವಹಾಗೆಯೇ ಇವಳು ನಮ್ಮ ಲೋಕಗಳೆಲ್ಲವನ್ನೂ ದಾಟಿ, ತನ್ನ ಪತಿಯೊಡನೆ ಎಲ್ಲಕ್ಕಿಂತಲೂಮೇಲೆನಿಸಿದ ಊರ್ಧ್ವಲೋಕವನ್ನು ಸೇರುವುದರಲ್ಲಿಸಂದೇಹವಿಲ್ಲ. ಅಲ್ಪಾಯುಸ್ಸುಳ್ಳ ಮನುಷ್ಯಜನ್ಮದಲ್ಲಿ ಹುಟ್ಟಿದ್ದರೂ, ನಿವೃತ್ತಿಧರ್ಮವನ್ನು ಹಿಡಿದವರು, ಅತ್ಯುತ್ತಮವಾದ ವಿಷ್ಣುಪದವನ್ನೇ ಸುಲಭವಾಗಿ ಸಾಧಿಸಬಲ್ಲರು. ಹೀಗಿರುವಾಗ ಅವರಿಗೆ, ಈಗ ನಾವು ಅನುಭವಿಸತಕ್ಕ ಸ್ವರ್ಗಾದಿಗಳನ್ನು ಪಡೆಯುವುದೊಂದಸಾಧ್ಯವೆ? ಅವರಿಗೆ ಯಾವ ಪುಣ್ಯಲೋಕವೂ ದುರ್ಲಭವಲ್ಲ ! ಇಷ್ಟು ಸುಲಭಮಾರ್ಗದಿಂದ ಮುಕ್ತಿಯನ್ನು ಸಾಧಿಸಿಕೊಡತಕ್ಕ ಮನುಷ್ಯಜನ್ಮವನ್ನು ಕಷ್ಟದಿಂದ ಪಡೆದಿರುವಾಗಲೂ,ಮೋಕ್ಷದಲ್ಲಿ ದೃಷ್ಟಿಯಿಡದೆ, ನಮ್ಮಂತೆ ಅಲ್ಪವಾದ ವಿಷಯಸುಖಕ್ಕಾಗಿ ಯಾವನು ಯತ್ನಿಸುವನೋ, ಅವನನ್ನು ದೈವದಿಂದ ವಂಚಿಸಲ್ಪಟ್ಟವನೆಂದೇ ಹೇಳಬೇಕು. ಅಂತವರನ್ನು ಆತ್ಮದ್ರೋಹಿಗಳೆಂದೇ ತಿಳಿಯಬೇಕು- ಇದಕ್ಕಿಂತಲೂ ಬೇರೆ ಅನರ್ಥವೇನುಂಟು”? ಎಂದು ಮಾತಾಡಿಕೊಳ್ಳುತಿದ್ದರು. ಹೀಗೆ ದೇವತಾಸ್ತ್ರೀಯರು ಪ್ರಶಂಸೆಮಾಡುತ್ತಿರುವಾಗಲೇ ಆ ಅರ್ಚಿದೇವಿಯು,ತನ್ನ ಪತಿಯೊಡನೆ ಪರಮಪದವನ್ನು ಸೇರಿದಳು. ವಿದುರಾ! ತತ್ವಜ್ಞರಲ್ಲಿ ಮೇಲೆನಿಸಿದ ಮಹಾತ್ಮನಾದ ಪೃಥುಚಕ್ರವರ್ತಿಯ ಚರಿತ್ರವನ್ನು ನಿನಗೆ

ಸಾಂಗವಾಗಿ ತಿಳಿಸಿರುವೆನು. ಪುಣ್ಯಸಾಧನವಾದ ಈ ಚರಿತ್ರವನ್ನು ಯಾವನು ಶ್ರದ್ಧೆಯಿಂದ ಪಠಿಸುವನೋ,ಅಥವಾ ಕಿವಿಯಿಂದ ಕೇಳುವನೋ ಅವನು ಆ ಪೃಥುವಿನ ಪದವಿಯನ್ನೇ ಹೊಂದುವನು. ಇದನ್ನು ಕೇಳುವುದ ರಿಂದ ಬ್ರಾಹ್ಮಣನು ಬ್ರಹ್ಮವರ್ಚಸ್ಸನ್ನೂ, ಕ್ಷತ್ರಿಯನು ರಾಜ್ಯಾಧಿಪತ್ಯವ ನ್ನೂ ವೈಶ್ಯಶೂದ್ರರು, ತಮ್ಮ ಕುಲದಲ್ಲಿ ಪ್ರಾಮುಖ್ಯವನ್ನೂ ಪಡೆ ಯುವರು. ಸ್ತ್ರೀಯಾಗಲಿ, ಪುರುಷನಾಗಲಿ, ಈ ಚರಿತ್ರವನ್ನು ಶ್ರದ್ಧೆಯಿಂದ ಮೂರಾವೃತ್ತಿ ಕೇಳಿದರೆ, ಸಂತಾನವಿಲ್ಲದವನು ಸಂತಾನವನ್ನು ಪಡೆಯುವ ನು. ದರಿದ್ರರು ಧನಾಢ್ಯರಾಗುವರು! ಕೀರ್ತಿಯಿಲ್ಲದವನು ಮಹಾಯಶ ಸ್ಸನ್ನು ಪಡೆಯುವನು. ಮೂರ್ಖನೂ ಪಂಡಿತನಾಗುವನು ಈ ಚರಿತ್ರವು ಸಮಸ್ತಜನರಿಗೂ ಶುಭಪ್ರದವಾದುದು. ಅಮಂಗಳವನ್ನು ನೀಗಿಸುವುದು. ಕಲಿದೋಷವನ್ನು ಕಳೆಯುವುದು. ಕೀರ್ತಿ, ಸಂಪತ್ತು, ಆಯುಸ್ಸು, ಸದ್ಗತಿ, ಮಂತಾದುವನ್ನು ಕೈಗೂಡಿಸುವುದು.ಧರ್ಮಾರ್ಥಕಾಮಮೋಕ್ಷಗಳೆಂಬನಾ ಲ್ಕುಪುರುಷಾರ್ಥಗಳಲ್ಲಿ ಸಿದ್ಧಿಯನ್ನಪೇಕ್ಷಿಸುವವರು,ಅವಶ್ಯವಾಗಿ ಇದನ್ನು ಶ್ರ ದ್ಧೆಯಿಂದ ಕೇಳಬೇಕು. ಯುದ್ಧದಲ್ಲಿ ಜಯವನ್ನಪೇಕ್ಷಿಸತಕ್ಕರಾಜನು, ಮೊ ದಲು ಈ ಚರಿತ್ರೆಯನ್ನು ಒಂದಾವರ್ತಿ ಶ್ರದ್ಧೆಯಿಂದ ಕೇಳಿ,ಜೈತ್ರಯಾತ್ರೆಗೆ ಹೊರಟಪಕ್ಷದಲ್ಲಿ,ಅವನಿಗೆ ಇತರರಾಜರೆಲ್ಲರೂ ಪೃಥುಚಕ್ರವರ್ತಿಗೆ ಹೇಗೋ ಹಾಗೆ, ತಾವಾಗಿ ಕಪ್ಪವನ್ನು ತಂದೊಪ್ಪಿಸುವರು ಹೀಗೆ ಈ ಪುಣ್ಯಚರಿತ್ರವು ಬಹುಫಲಗಳನ್ನು ಕೊಡತಕ್ಕುದಾಗಿದ್ದರೂ, ಯಾವವಿಧವಾದ ಫಲದಲ್ಲಿ ಯೂ ಮನಸ್ಸಿಡದೆ, ಪರಮಾತ್ಮನಲ್ಲಿ ದೃಢವಾದ ಭಕ್ತಿಯನ್ನು ಹಿಡಿದು ಈಕಥೆಯನ್ನು ಇತರರಿಗೆ ಹೇಳುತ್ತಲೂ, ಕೇಳುತ್ತಲೂ,ಪಠಿಸುತ್ತಲೂ ಬಂ ದರೆ, ಭಗವಂತನಲ್ಲಿ ಭಕ್ತಿಯು ಬೇರೂರುವುದರಿಂದ, ಅವನು ಪೃಥುಚಕ್ರ ವರ್ತಿಯು ಪಡೆದ ಉತ್ತಮಗತಿಯನ್ನೇ ಹೊಂದುವನು. ಫಲಾಪೇಕ್ಷೆಯಿಲ್ಲದೆ ಪ್ರತಿದಿನವೂ ಈ ಕಥೆಯ ಶ್ರವಣಕೀರ್ತನಗಳನ್ನು ಮಾಡಿದವನು, ಸಂಸಾರ ಸಮುದ್ರಕ್ಕೆ ಹಡಗಿನಂತಿರುವ ಭಗವಂತನ ಪಾದಾರವಿಂದಗಳಲ್ಲಿ ದೃಢವಾ ದ ಭಕ್ತಿಯನ್ನುಹೊಂದುವನು. ಇಲ್ಲಿಗೆ ಇಪ್ಪತ್ತೆರಡನೆಯ ಅಧ್ಯಾಯವು.

---

{ಪೃಥುವಿನ ಸಂತತಿಯಲ್ಲಿ ಹುಟ್ಟಿದ ಇತರರಾಜರ ಚರಿತ್ರವು. ಪ್ರಾಚೀನ ಬರ್ಹಿಯ ಮಕ್ಕಳಾದ ಪ್ರಚೇತಸರು ರುದ್ರನಿಂದ ಭಗವತ್ತತ್ವವನ್ನು ಕೇಳಿದುದು.}

ವಿದುರಾ! ಕೇಳು! ಪೃಥುಚಕ್ರವರ್ತಿಯ ಮಕ್ಕಳಲ್ಲಿ ವಿಜಿತಾಶ್ವನೆಂಬವನು ಬಹಳಕೀರ್ತಿಯನ್ನು ಪಡೆದು ಚಕ್ರವರ್ತಿಯಾದನು. ಅವನಿಗೆ ತನ್ನ ನಾಲ್ವರುಸೋದರರಲ್ಲಿಯೂ ಬಹಳ ಪ್ರೇಮವಿದ್ದುದರಿಂದ, ಅವರಲ್ಲಿ ಹರ್ಯಕ್ಷನಿಗೆ ಪೂರ್ವದಿಕ್ಕನ್ನೂ ಧೂಮ್ರಕೇಶನಿಗೆ ದಕ್ಷಿಣದಿಕ್ಕನ್ನೂ ವೃಕನಿಗೆ ಪಶ್ಚಿಮದಿಕ್ಕನ್ನೂ, ಧ್ರುವನಿಗೆ ಉತ್ತರದಿಕ್ಕನ್ನೂ ಹಂಚಿಕೊಟ್ಟು, ಅವರನ್ನು ಆಯಾ ಅಧಿಕಾರದಲ್ಲಿರಿಸಿದನು. ಹಿಂದೆ ಪೃಥುಚಕ್ರವರ್ತಿಯಯಜ್ಞದಲ್ಲಿ ಈ ವಿಜಿತಾಶ್ವನು ಇಂದ್ರನನ್ನು ಜಯಿಸಿ ಕುದುರೆಯನ್ನು ತಂದನಷ್ಟೆ? ಆಗ ಇಂದ್ರಾನುಗ್ರಹದಿಂದ ಅಂತರ್ಧಾನಗತಿಯನ್ನು ಪಡೆದು, ಅಂತರ್ಧಾನನೆಂಬ ಹೆಸರಿನಿಂದಲೂ ಪ್ರಖ್ಯಾತನಾಗಿದ್ದನು. ಈ ವಿಜಿತಾಶ್ವನಿಗೆ ಶಿಖಂಡಿನಿಯೆಂಬ ಪತ್ನಿಯಲ್ಲಿ ಪಾವಕನೆಂದೂ, ಪವಮಾನನೆಂದೂ, ಶುಚಿಯೆಂದೂ ಮೂವರು ಪುತ್ರರು ಹುಟ್ಟಿದರು. ಮೊದಲು ಒಂದಾನೊಂದುಕಾಲದಲ್ಲಿ ವಸಿಷ್ಠಮಹರ್ಷಿಯ ಶಾಪದಿಂದ ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿಗಳೆಂಬ ತ್ರೇತಾಗ್ನಿಗಳೇ ಹೀಗೆ ಮನುಷ್ಯಗರ್ಭದಲ್ಲಿ ಈಮೂವರು ಪುತ್ರರಾಗಿ ಜನಿಸಿದ್ದುದರಿಂದ, ಈ ಮೂವರು ಪುತ್ರರೂ, ಶೀಘ್ರದಲ್ಲಿಯೇ ಶಾಪವಿಮೋಚನವನ್ನು ಹೊಂದಿ,ತಿರುಗಿ ತಮಗೆ ಮೊದಲಿದ್ದ ಅಗ್ನಿಸ್ವರೂಪವನ್ನೇ ಹೊಂದಿದರು. ಅಶ್ವಚೋರನಾದ ಇಂದ್ರನು ತನ್ನ ಕಣ್ಣಿಗೆ ಬಿದ್ದಾಗಲೂ ಅವನನ್ನು ಕೊಲ್ಲದೆ ಬಿಟ್ಟ, ಮಹೋದಾರಸ್ವಭಾವವುಳ್ಳ ಆ ವಿಜಿತಾಶ್ವನಿಗೆ, ನಭಸ್ವತಿಯೆಂಬ ಎರಡನೆಯ ಭಾರ್ಯೆಯಲ್ಲಿ ಹವಿರ್ಧಾನನೆಂಬ ಬೇರೊಬ್ಬಪುತ್ರನು ಹುಟ್ಟಿದನು. ಈ ಹವಿರ್ಧಾನನು ರಾಜ್ಯಕ್ಕೆಬಂದಮೇಲೆ,ಕಪ್ಪವನ್ನು ತೆಗೆಯುವುದು,ಪ್ರಜೆಗಳನ್ನು ದಂಡಿಸುವುದು ಸುಂಕ,ತೆರಿಗೆ, ಮುಂತಾದುವುಗಳನ್ನು ತೆಗೆಯುವುದು, ಇವೇ ಮುಂತಾದ ಕಾರ್ಯಗಳಿಂದ ರಾಜವೃತ್ತಿಯೆಂಬುದು ಬಹಳ ಕ್ರೂರಕಾರ್ಯವೆಂದು ಅವನ ಮನಸ್ಸಿಗೆ ತೋರಿತು. ಆದುದರಿಂದ ಅವನು ರಾಜಕಾರ್ಯದಲ್ಲಿ ಜಿಹಾಸೆಪ

ಟ್ಟು, ದೀರ್ಘಸತ್ರವೆಂಬ ಒಂದಾನೊಂದು ದೊಡ್ಡ ಯಾಗವನ್ನಾರಂಭಿಸಿ, ಆ ನೆವದಿಂದ ರಾಜ್ಯಭಾರದ ಚಿಂತೆಯನ್ನೇ ಬಿಟ್ಟು ಬಿಟ್ಟನು. ಆತ್ಮಸ್ವರೂಪ ವನ್ನು ಚೆನ್ನಾಗಿ ತಿಳಿದ ಆ ರಾಜನು, ಆ ಯಾಗದ ಮೂಲಕವಾಗಿ ಸರ್ವ ಜೀವಾಂತರ್ಯಾಮಿಯಾಗಿಯೂ,ಆಪನ್ನಿವಾರಕನಾಗಿಯೂ ಇರುವ ಭಗವಂತ ನನ್ನೇ ಆರಾಧಿಸುತಿದ್ದು, ನಿರ್ವಿಘ್ನವಾದ ಸಮಾಧಿಯಿಂದ ವಿಷ್ಣುಲೋಕವ ನ್ನೂ ಹೊಂದಿದನು.ಈ ಹವಿರ್ಧಾನನು ಹವಿರ್ಧಾನಿಯೆಂಬ ತನ್ನ ಪತ್ನಿಯಲ್ಲಿ ಬರ್ಹಿಷದನೆಂದೂ, ಗಯನೆಂದೂ, ಶುಕ್ರನೆಂದೂ, ಕೃಷ್ಣನೆಂದೂ, ಸತ್ಯ ನೆಂದೂ, ಜಿತವ್ರತನೆಂದೂ ಆರುಮಂದಿಪುತ್ರರನ್ನು ಪಡೆದಿದ್ದನು. ಈ ಮಕ್ಕಳಲ್ಲಿ ಹಿರಿಯವನಾದ ಬರ್ಹಿಷದನು, ಬಹಳ ಭಾಗ್ಯಶಾಲಿಯಾಗಿ, ತನ್ನ ತಂದೆಯ!ರಾಜ್ಯವನ್ನು ಕೈಕೊಂಡು, ಪ್ರಜೆಗಳನ್ನು ಧರ್ಮದಿಂದ ಪಾಲಿ ಸುತ್ತಬಂದನು. ಮತ್ತು ಇವನು ಕರ್ಮಮಾರ್ಗದಲ್ಲಿಯೂ ಯೋಗಮಾರ್ಗ ದಲ್ಲಿಯೂ ನಿಷ್ಠನಾಗಿದ್ದನು. ಇವನು ಒಂದುಕಡೆಯಲ್ಲಿ ಯಾಗವನ್ನು ಮುಗಿಸಿದೊಡನೆ, ಅದಕ್ಕೆ ಸಮೀಪದಲ್ಲಿ ತಿರುಗಿ ಮತ್ತೊಂದು ಯಜ್ಞಶಾಲೆ ಯನ್ನು ಮಾಡುತ್ತ, ಹೀಗೆಯೇ ಭೂಮಂಡಲವೆಲ್ಲವನ್ನೂ ಯಜ್ಞವಾಟವ ನ್ನಾಗಿ ಮಾಡಿದನು. ಹೀಗೆ ಆಯಾಯಜ್ಞಕಾಲಗಳಲ್ಲಿ ಪೂರ್ವಾಗ್ರವಾಗಿ ಹರ ಡಿದ ದರ್ಭಾಸ್ತರಣಗಳಿಂದಲೇ ಭೂಭಾಗವೆಲ್ಲವನ್ನೂ ತುಂಬಿ ಬಿಟ್ಟುದರಿಂದ, ಇವನಿಗೆ ಪ್ರಾಚೀನಬರ್ಹಿಯೆಂಬ ಹೆಸರು ಪ್ರಸಿದ್ಧವಾಯಿತು. ಈ ಪ್ರಾ ಚೀನಬರ್ಹಿಯು ಬ್ರಹ್ಮಾಜ್ಞೆಯಿಂದ ಸಮುದ್ರರಾಜನ ಮಗಳಾದ(ಶ್ರ)ಶತದ್ರು ತಿಯೆಂಬವಳನ್ನು ಮದಿವೆಯಾದನು. ಸರ್ವಾಂಗಸುಂದರಿಯಾಗಿಯೂ, ಎಳ ವಯಸ್ಸಿನವಳಾಗಿಯೂ,ಸರ್ವಾಭರಣಭೂಷಿತಳಾಗಿಯೂ ಇದ್ದ ಈಶತದ್ರುತಿ ಯು, ವಿವಾಹಕಾಲದಲ್ಲಿ ಹೋಮಾಗ್ನಿಯನ್ನು ಪ್ರದಕ್ಷಿಣಮಾಡುವಾಗ, ಅ ಗ್ನಿಹೋತ್ರನೂಕೂಡ ಆಜ್ಯಧಾರೆಯನ್ನು ಪ್ರೀತಿಸುವಂತೆ ಅಥವಾ *(ಶುಕ

---

* ಹಿಂದೆ ಒಂದಾನೊಂದುಕಾಲದಲ್ಲಿ ಸಪ್ತರ್ಷಿಗಳು ಯಾಗಮಾಡುತಿದ್ದಾಗ, ಅ ಗ್ನಿದೇವನು ಅವರ ಪತ್ನಿಯರನ್ನು ನೋಡಿ ಕಾಮಪೀಡಿತನಾದನು. ಅದನ್ನು ನೋಡಿ ಅಗ್ನಿಪತ್ನಿಯಾದ ಸ್ವಾಹಾದೇವಿಯು, ಆ ಸಪ್ತರ್ಷಿಗಳ ಪತ್ನಿಯರ ರೂಪದಿಂದಲೇ ಬಂ ದು ಅವನೊಡನೆ ರಮಿಸಿದಳು. ಮತ್ತು ಹೆಣ್ಣುಗಿಳಿಯರೂಪದಿಂದ ಆ ಅಗ್ನಿಯ ತೇಜ

ರೂಪದಿಂದ ಬಂದ ಸ್ವಾಹಾದೇವಿಯನ್ನು ಪ್ರೀತಿಸಿದಂತೆ) ಅವಳನ್ನು ಕಾಮಿಸುತಿದ್ದನು. ಇದಲ್ಲದೆ ಹೊಸಮದವಣಿಗಿತ್ತಿಯಾದ ಆ ಶತದ್ರುತಿಯು, ಕಾಲಂದುಗೆಗಳ ಗಲ್ಘಲಧ್ವನಿಯೊಡನೆ ನಡೆದು ಬರುವಾಗ,ಅವಳ ಸೊಬಗನ್ನು ನೋಡಿ, ದೇವಾಸುರಸಿದ್ಧಗಂಧರ್ವವಿದ್ಯಾಧರಾದಿಗಳೂ, ಮಹರ್ಷಿಗಳೂ, ಪನ್ನಗರೂ, ಇತರಮನುಷ್ಯರೂ ಮೋಹಗೊಂಡು ಮರುಳಾಗುತಿದ್ದರು. ಈ ಶತದ್ರುತಿಯಲ್ಲಿ ಪ್ರಾಚೀನಬರ್ಹಿಗೆ ಹತ್ತುಮಂದಿಮಕ್ಕಳು ಹುಟ್ಟಿದರು. ಇವರೆಲ್ಲರೂ ಪ್ರಚೇತಸರೆಂಬ ಒಂದೇ ಹೆಸರಿನಿಂದ ಕರೆಯಲ್ಪಡುತ್ತ, ವ್ರತಾಚಾರ ಮುಂತಾದುವುಗಳಲ್ಲಿಯೂ ಒಂದೇವಿಧವಾಗಿ ನಡೆಯುತಿದ್ದರು. ಅವರೆಲ್ಲರೂ ಧರ್ಮಪಾರಂಗತರಾಗಿದ್ದರು. ಇವರೆಲ್ಲರೂ ತಮ್ಮ ತಂದೆಯಾದ ಪ್ರಾಚೀನಬರ್ಹಿಯಿಂದ ಪ್ರಜಾಸೃಷ್ಟಿಕಾರ್ಯಕ್ಕಾಗಿ ನಿಯಮಿಸಲ್ಪಟ್ಟು, ತಪಸ್ಸುಮಾಡುವುದಕ್ಕಾಗಿ ವನಕ್ಕೆ ಹೊರಟರು. ಇವರು ತಪಸ್ಸಿಗಾಗಿ ಅರಣ್ಯಕ್ಕೆ ಹೊರಟಾಗ,ದಾರಿಯಲ್ಲಿ ಪೂಜ್ಯನಾದ ರುದ್ರನು ಪ್ರತ್ಯಕ್ಷನಾಗಿ, ಅವರಿಗೆ ಪರಮಾತ್ಮತತ್ವವನ್ನುಪದೇಶಿಸಿದನು. ಆ ಉಪದೇಶ ಕ್ರಮದಿಂದಲೇ ಅವರು ಏಕಾಗ್ರಚಿತ್ತರಾಗಿ, ಧ್ಯಾನದಿಂದಲೂ, ಜಪದಿಂದಲೂ, ಪೂಜೆಯಿಂದಲೂ, ಆ ಪರಮಾತ್ಮನನ್ನು ಹತ್ತುಸಾವಿರವರ್ಷಗಳವರೆಗೆ ಆರಾಧಿಸುತಿದ್ದರು!” ಎಂದನು. ಇದನ್ನು ಕೇಳಿ ವಿದುರನು, ತಿರುಗಿ ಮೈತ್ರೇಯನನ್ನು ಕುರಿತು “ಓ ಮಹಾತ್ಮಾ? ಪ್ರಚೇತಸರಿಗೂ ರುದ್ರನಿಗೂ ಸಮಾಗಮವಾದುದು ಹೇಗೆ?” ರುದ್ರನು ಅವರಲ್ಲಿ ಪ್ರಸನ್ನನಾಗಿ ಅವರಿಗೆ ಉಪದೇಶಿಸಿದ ಸಾರಾರ್ಥಗಳಾವುವು? ಸಂಸಾರಿಗಳಿಗೆ ಆ ಪರಮಶಿವನೊಡನೆ ಸಮಾಗಮವೇ ದುರ್ಲಭವು. ಪುರಾತನಮಹರ್ಷಿಗಳೂಕೂಡ ಬೇರೆ ವಿಷಯಗಳಲ್ಲಿ ಮನಸ್ಸಿಡದೆ ಬಹುಕಾಲದವರೆಗೆ ಆ ರುದ್ರನನ್ನು ಧ್ಯಾನಿಸುತಿದ್ದರೇಹೊರತು, ಅವನೊಡನೆ ಯಾರೂ ಹೀಗೆ ಸಮಾಗಮವನ್ನು ಹೊಂದಿದಹಾಗೆ ಕಾಣಲಿಲ್ಲ. ಕೆಲವು ಮೂ

---

ಸ್ಸನ್ನು ತೆಗೆದುಕೊಂಡುಹೋಗಿ ಬಂಡಾನೊಂದು ನದೀತೀರದಲ್ಲಿ ನೊದೆಹುಲ್ಲಿನ ನಡುವೆ ಇಟ್ಟುಬಂದಳು. ಈ ಶುಕರೂಪದಿಂದಿದ್ದಾಗಲೂ ಅಗ್ನಿಯು ಸಪ್ತರ್ಷಿಪತಿಯೆಂಬ ಭ್ರಾಂತಿಯಿಂದಲೇ ಅವಳನ್ನು ಕಾಮಿಸಿದುದಾಗಿ ಪೂರ್ವಕಥೆಯು.

ಢಾತ್ಮರು ಅವನ ಆಕಾರವನ್ನು ನೋಡಿ, ಅವನು ಘೋರಸ್ವರೂಪನೆಂ ದೂ, ಅಮಂಗಳಸ್ವಭಾವನೆಂದೂ ಭಾವಿಸುವುದುಂಟು. ಹಾಗೆಣಿಸಬಾ ರದು! ಅವನು ಪ್ರಾಣಿಗಳ ಸೃಷ್ಟ್ಯಾದಿಕ್ರಮವನ್ನು ಚೆನ್ನಾಗಿ ತಿಳಿದವನು. ಆತ್ಮಜ್ಞಾನಾನಂದದಲ್ಲಿಯೇ ತೃಪ್ತನಾಗಿರತಕ್ಕವನು. ಆದುದರಿಂದ ಅವನಿ ಗೆ ಲೋಕಸಂಚಾರದಿಂದ ಪಡೆಯಬೇಕಾದ ಪ್ರಯೋಜನವೊಂದೂ ಇರ ದು. ಹಾಗಿದ್ದರೂ ಸಂಸಾರಬಂಧಕ್ಕೆ ಸಿಕ್ಕಿದ ದೀನರಾದ ಪ್ರಜೆಗಳನ್ನನುಗ್ರ ಹಿಸುವುದಕ್ಕಾಗಿಯೇ,ಶಕ್ತಿರೂಪೆಯಾದ ತನ್ನ ಭಾರ್ಯೆಯೊಡಗೂಡಿ, ಘೋ ರರೂಪದಿಂದ ಲೋಕಗಳನ್ನೆಲ್ಲಾ ಸುತ್ತುತ್ತಿರುವನು. ಆ ಮಹಾತ್ಮನಿಂದು ಪದೇಶಿಸಲ್ಪಟ್ಟ ತತ್ವಾರ್ಥವನ್ನು ಕೇಳಿತಿಳಿಯಬೇಕೆಂಬ ಕುತೂಹಲವು ನನ ಗೆ ಬಹಳವಾಗಿರುವುದು. ಅದನ್ನು ವಿವರಿಸಬೇಕು."ಎಂದನು.ಅದಕ್ಕಾ ಮೈ ತ್ರೇಯನು ವಿದುರನನ್ನು ಕುರಿತು "ಎಲೈ ಕುರುಶ್ರೇಷ್ಠನೆ ! ಕೇಳು. ಆ ಪ್ರಚೇತಸರೆಂಬ ಹತ್ತುಮಂದಿ ಕುಮಾರರೂ, ಪ್ರಜಾಸೃಷ್ಟಿಯ ವಿಷಯ ದಲ್ಲಿ ತಂದೆಯ ಆಜ್ಞೆಯನ್ನು ಶಿರಸಾವಹಿಸಿ, ಆ ಕಾರ್ಯದಲ್ಲಿ ಶಕ್ತಿಯನ್ನು ಪಡೆಯುವುದಕ್ಕಾಗಿ ತಪಸ್ಸುಮಾಡಬೇಕೆಂಬ ಉದ್ದೇಶದಿಂದ ಉತ್ತರದಿಕ್ಕಿನ ಕಡೆಗೆ ಹೊರಟರು. ದಾರಿಯಲ್ಲಿ ಸಮುದ್ರಕ್ಕೆ ಸಮೀಪವಾದ, ಮತ್ತೊಂ ದು ಸಮುದ್ರದಂತೆ ವಿಶಾಲವಾದ ಒಂದಾನೊಂದು ಸರೋವರವನ್ನು ಕಂ ಡರು. ಜ್ಞಾನಿಗಳ ಮನಸ್ಸಿನಂತೆ ಸ್ವಚ್ಛವಾದ ತಿಳಿನೀರಿನಿಂದ ತುಂಬಿದ ಆ ಸರೋವರದಲ್ಲಿ, ಮೀನು ಮೊದಲಾದ ಜಲಜಂತುಗಳೆಲ್ಲವೂ ಆತ್ಮಾನಂದ ದಿಂದ ವಿಹರಿಸುತಿದ್ದುವು. ಕಪ್ಪು, ಬಿಳುಪು, ಕೆಂಪು, ಮೊದಲಾದ ಬೇರೆ ಬೇರೆ ಬಣ್ಣಗಳುಳ್ಳ ತಾವರೆ, ನೈದಿಲೆ, ಕುಮುದ, ಕಲ್ಹಾರ, ಮೊದಲಾದ ನೀರುಹೂಗಳೆಲ್ಲವೂ ವಿಶೇಷವಾಗಿ ಕಂಗೊಳಿಸುತಿದ್ದುವು. ಹಂಸ, ಕಾರಂಡ ವ, ಚಕ್ರವಾಕ, ಸಾರಸಗಳೇ ಮೊದಲಾದ ಜಲಪಕ್ಷಿಗಳು ಮಧುರಧ್ವನಿ ಯಿಂದ ಗಾನಮಾಡುತ್ತಿದ್ದುವು. ಅಲ್ಲಲ್ಲಿ ಕಿವಿಗಿಂಪಾಗಿ ಕೇಳಿಸುತಿದ್ದ ಭ್ರ ಮರ ಝುಂಕಾರಗಳನ್ನು ಕೇಳಿ, ಸಂತೋಷದಿಂದ ರೋಮಾಂಚಿತಗಳಾದಂ ತೆ ಆ ಸರೋವರದ ತೀರದಲ್ಲಿ ಬೆಳೆದ ಗಿಡಬಳ್ಳಿಗಳೆಲ್ಲವೂ, ಯಾವಾಗಲೂ ಪುಷ್ಪಸಮೃದ್ಧಿಯಿಂದ ಶೋಭಿಸುತಿದ್ದುವು. ಮತ್ತು ಆ ಕೊಳದಮೇಲೆ

ಬೀಸಿಬರುತ್ತಿದ್ದ ಸುಗಂಧಶೀತಲವಾದ ಮಂದಮಾರುತವು, ಆ ಕೊಳದ ಲ್ಲಿರುವ ಕಮಲದ ಧೂಳಿಯನ್ನು ನಾನಾದಿಕ್ಕುಗಳಿಗೂ ಹರಡುತಿದ್ದಿತು. ಆ ಹತ್ತುಮಂದಿ ರಾಜಕುಮಾರರೂ,ಈ ಸರೋವರತೀರಕ್ಕೆ ಬಂದೊಡನೆ,ಆಕಾ ಶದಲ್ಲಿ ಮದ್ದಳೆ,ಪಣವ ಮುಂತಾದ ವಾದ್ಯಗಳೊಡಗೂಡಿದ ಗಂಧರ್ವರಗಾ ನಧ್ವನಿಯು ಅವರ ಕಿವಿಗೆ ಬಿದ್ದಿತು.ಇವರೆಲ್ಲರೂ ಆಶ್ಚರ್ಯದಿಂದ ನೋಡು ತ್ತಿರುವಾಗಲೇ,ಅಲ್ಲಿ ಸುವರ್ಣದಂತೆದೇಹಛ್ಛಾಯೆಯುಳ್ಳವನಾಗಿಯೂ,ನೀ ಲಕಂಠನಾಗಿಯೂ,ತ್ರಿಣೇತ್ರನಾಗಿಯೂ ಇರುವ ರುದ್ರನು, ಅನೇಕ ದೇವ ಸಮೂಹದಿಂದ ಸ್ತುತಿಸಲ್ಪಡುತ್ತ, ತನ್ನ ಪರಿವಾರಗಳೊಡಗೂಡಿ,ಪ್ರಸನ್ನ ಮುಖನಾಗಿ ಆ ಸರೋವರದಿಂದ ಮೇಲೆದ್ದು ಬರುತ್ತಿದ್ದನು.ದೇವೋತ್ತಮ ನಾದ ಆ ಶಂಕರನನ್ನು ಕಂಡೊಡನೆ ಅವರೆಲ್ಲರೂ,ಬಹಳ ಕುತೂಹಲದಿಂದ ಮುಂದೆ ಬಂದು ಪ್ರಣಾಮಮಾಡಿದರು. ಮರೆಹೊಕ್ಕವರ ದುಃಖವನ್ನು ನೀಗಿಸತಕ್ಕವನಾಗಿಯೂ, ಧರ್ಮವತ್ಸಲನಾಗಿಯೂ ಇರುವ ಪೂಜ್ಯನಾ ದ ರುದ್ರನು, ಆ ರಾಜಕುಮಾರರು ಪ್ರೀತಿಯಿಂದ ಬಂದು ನಮಸ್ಕರಿಸಿ ದುದನ್ನು ಕಂಡು, ಅವರಲ್ಲಿ ಪ್ರಸನ್ನನಾಗಿ ಹೀಗೆಂದು ಹೇಳುವನು. ''ಎಲೈ ರಾಜಕುಮಾರರೆ! ನೀವು ಪ್ರಾಚೀನಬರ್ಹಿಯ ಮಕ್ಕಳಲ್ಲವೆ? ನೀವು ಬಂದ ಉದ್ದೇಶವನ್ನೂ ನಾನು ಬಲ್ಲೆನು! ನಿಮ್ಮನ್ನು ಅನುಗ್ರಹಿಸುವುದಕ್ಕಾಗಿಯೇ ನಾನೂ ಇಲ್ಲಿಗೆ ಬಂದು ನಿಮಗೆ ದರ್ಶನವನ್ನು ಕೊಟ್ಟೆನು. ನಿಮಗೆ ಕ್ಷೇಮ ವುಂಟಾಗಲಿ! ತ್ರಿಗುಣಾತ್ಮಕವಾದ ಪ್ರಕೃತಿಗಿಂತಲೂ, ಜೀವನಿಗಿಂತಲೂ ವಿಲಕ್ಷಣನೆನಿಸಿಕೊಂಡ ಆ ಪರಮಾತ್ಮನಲ್ಲಿ ಭಕ್ತಿಯುಳ್ಳ ನಿಮ್ಮಂತವರೇ ನನಗೆ ಬಹಳ ಪ್ರೀತಿಪಾತ್ರರು. ಅಂತಹ ಭಗವದ್ಭಕ್ತರೇ ಲೋಕದಲ್ಲಿ ಮೇಲೆನಿಸುವರು. ಏಕೆಂದರೆ, ಮನುಷ್ಯನು ತನ್ನ ವರ್ಣಾಶ್ರಮ ಧರ್ಮಗಳನ್ನು ತಪ್ಪದೆ ನಡೆಸುತ್ತ, ನೂರಾರುಜನ್ಮಗಳನ್ನು ಕಳೆದಮೇಲೆ ಚತುರ್ಮುಖನ ಲೋಕವನ್ನು ಹೊಂದುವನು. ಅದರಿಂದಾಚೆಗೆ ಇನ್ನೂ ಕೆಲವು ಪುಣ್ಯವಿಶೇಷಗಳಿಂದ ನನ್ನ ಲೋಕವನ್ನು ಸೇರುವನು. ಅದ ಕ್ಕೆಮೇಲೆ ನಿವೃತ್ತಿಧರ್ಮವನ್ನು ಹಿಡಿದು, ಭಗವಂತನಲ್ಲಿ ನಿಶ್ಚಲವಾದ ಭ ಕ್ತಿಯನ್ನಿಟ್ಟವರುಮಾತ್ರವೇ ಎಣೆಯಿಲ್ಲದ ಮಹಾಮಹಿಮೆಯುಳ್ಳ ಆ ವಿ

ಷ್ಣುಸ್ಥಾನವನ್ನು ಸೇರುವರು.ಬ್ರಹ್ಮಾದಿದೇವತೆಗಳೂ,ನಾನೂ,ನಮ್ಮನಮ್ಮ ಅಧಿಕಾರಕಾಲವು ಮುಗಿದಮೇಲೆ ಯಾವ ಪದವನ್ನು ಹೊಂದಬೇಕೋ, ಅದೇ ವಿಷ್ಣುಸ್ಥಾನವನ್ನು ಆ ಭಾಗವತೋತ್ತಮರು ತಮ್ಮ ಭಕ್ತಿಬಲದಿಂದಲೇ ಸೇರುವರು. ಆ ಭಗವಂತನು ಹೇಗೋ ಹಾಗೆಯೇ ಆತನ ಭಕ್ತರೂ ನನಗೆ ಪ್ರಿಯತಮರು. ಆದುದರಿಂದ ನೀವು ಆ ಪರಮಾತ್ಮನಲ್ಲಿ ಭಕ್ತಿಯನ್ನು ಸಾಧಿಸಬೇಕು.ಭಗವದ್ಭಕ್ತರಿಗಿಂತಲೂ ನನಗೆ ಪ್ರಿಯತಮನು ಬೇರೊಬ್ಬನಿಲ್ಲ! ಆದುದರಿಂದ ಎಲೈ ರಾಜಕುಮಾರರೆ! ಈಗ ನಾನು ನಿಮಗೆ ಅತ್ಯವಶ್ಯವಾಗಿ ಜಪಿಸಬೇಕಾದ ಪರಮಾತ್ಮತತ್ವವನ್ನುಪದೇಶಿಸುವೆನು ಕೇಳಿರಿ! ಪ್ರಕೃತಿಪುರುಷರಿಗಿಂತಲೂ ಬೇರೆಯಾದ ಪರಮಾತ್ಮಸ್ವರೂಪವನ್ನು ಹೊರಪಡಿಸತಕ್ಕುದಾಗಿಯೂ, ಪುಣ್ಯಕರವಾಗಿಯೂ, ಧರ್ಮಾದಿಪುರುಷಾರ್ಥಗಳೆಲ್ಲವನ್ನೂ ಕೈಗೂಡಿಸತಕ್ಕುದಾಗಿಯೂ, ಮೋಕ್ಷಕ್ಕೆ ಮುಖ್ಯಸಾಧಕವಾಗಿಯೂ ಇರುವ ಆ ತತ್ವವನ್ನು ನೀವು ಸಾವಧಾನವಾಗಿ ಕೇಳಬೇಕು.” ಎಂದನು.

## ರುದ್ರಗೀತಾ ಪ್ರಾರಂಭವು.

ದೀನದಯಾಳುವಾಗಿಯೂ, ಭಗವದ್ಭಕ್ತನಾಗಿಯೂ ಇರುವರುದ್ರನು ತನ್ನ ಮುಂದೆ ಕೈಜೋಡಿಸಿ ನಿಂತಿದ್ದ ಅಪ್ರಚೇತಸರಿಗೆತತ್ವೋಪದೇಶವನ್ನು ಮಾಡಲಾರಂಭಿಸಿ, ಮೊದಲು ಆ ಪರಮಾತ್ಮನನ್ನು ನಮಸ್ಕರಿಸುವನು.“ಆತ್ಮಜ್ಞಾನಿಗಳ ಯೋಗಕ್ಷೇಮ ಭಾರವನ್ನು ವಹಿಸಿ,ಅವರನ್ನು ರಕ್ಷಿಸತಕ್ಕ ಎಲೈ ಪರಮಪುರುಷನೇ!ನಿನ್ನ ಮೇಲ್ಮೆಯು ಬಹುಕಾಲದವರೆಗೆ ಆತ್ಮವಿದರ ಕ್ಷೇಮಕ್ಕಾಗಿಯೇ ಅನುಕೂಲಿಸುತ್ತಿರಲಿ!ನನಗೆ ಯಾವಾಗಲೂ ನಿನ್ನನ್ನು ಅನುಭವಿಸತಕ್ಕ ಆನಂದವೇ ಇರುತ್ತಿರಲಿ. ಓ ದೇವಾ ! ಸಿದ್ಧಸ್ವರೂಪನಾದ ನಿನ್ನನ್ನು ಅನುಭವಿಸುವುದರಿಂದುಂಟಾಗುವ ಸೌಖ್ಯವು ಬೇರೆ ಯಾವ ವಿಷಯಗಳನ್ನನುಭಸುವುದರಿಂದಲೂ ಉಂಟಾಗದು ! ಇತರಸುಖಗಳೆಲ್ಲವೂ ಅನಿತ್ಯಗಳು ! ನಿನ್ನನ್ನು ಅನುಭವಿಸುವುದರಿಂದುಂಟಾಗುವ ಆನಂದಕ್ಕೆ ಎಂದಿಗೂ ಚ್ಯುತಿಯಿಲ್ಲ. ಈ ಪ್ರಪಂಚವೆಲ್ಲವೂ ನಿನ್ನ ಸ್ವರೂಪವಾಗಿಯೇ ಇರುವುದು. ನೀನೇ ಎಲ್ಲಕ್ಕೂ ಅಂತರಾತ್ಮನು. ಇಂತಹ ನಿನಗೆ ನಮ

ಸ್ಕಾರವು. ಓ ಪದ್ಮನಾಭಾ ! ನೀನು ಭೂತಸೂಕ್ಷ್ಮಗಳಿಗೂ ಆಶ್ರಯನಾದವನು. ಸರ್ವಾಧಾರನಾದುದರಿಂದಲೂ, ಸರ್ವವ್ಯಾಪಿಯಾದುದರಿಂದಲೂ, ವಾಸುದೇವನೆಂದು ಹೆಸರುಗೊಂಡವನು. ಹಸಿವು. ಬಾಯಾರಿಕೆ ಮುಂತಾದ ಕಷ್ಟಗಳೊಂದೂ!ಇಲ್ಲದವನು. ವಿಕಾರವಿಲ್ಲದವನು. ಸ್ವಯಂಪ್ರಕಾಶವುಳ್ಳವನು. ಇಂತಹ ನಿನಗೆ ನಮಸ್ಕಾರವು ! ಪ್ರಳಯಕಾಲದಲ್ಲಿ ಮುಖದಿಂದಅಗ್ನಿಯನ್ನು ಹೊರಡಿಸಿ,ಸಮಸ್ತಲೋಕಗಳನ್ನೂಸಂಹರಿಸತಕ್ಕ ಸಂಕರ್ಷಣನೂ ನೀನೇ! ಸೂಕ್ಷ್ಮದಶೆಯಲ್ಲಿರುವ ಚೇತನಾಚೇತನಗಳನ್ನು ಶರೀರವಾಗಿ ಹೊಂದಿದವನೂ ನೀನೇ! ನೀನುಮಾತ್ರ ಎಂದಿಗೂ ನಾಶವಿಲ್ಲದೆ ಇತರ ಲೋಕಗಳೆಲ್ಲವನ್ನೂ ನಾಶಹೊಂದಿಸುವೆ ! ಲೋಕಕ್ಕೆ ವೇದವನ್ನುಪದೇಶಿಸಿ ಜ್ಞಾನವನ್ನುಂಟುಮಾಡಿದವನೂ ನೀನೇ! ಪ್ರದ್ಯುಮ್ನನೆಂಬ ವ್ಯೂಹಾವತಾರದಿಂದ ಲೋಕವನ್ನು ರಕ್ಷಿಸತಕ್ಕವನೂ ನೀನೇ ! ಯಾವಾಗಲೂ ಎಲ್ಲಾ ವಸ್ತುಗಳಲ್ಲಿಯೂ ಅಡಗಿದ್ದು ಆಯಾ ವಸ್ತುಗಳಿಗೆ ಸ್ಥಿತಿಗತಿಗಳನ್ನು ಕಲ್ಪಿಸತಕ್ಕವನೂ ನೀನೇ ! ಇಂತಹ ನಿನಗೆ ನಮಸ್ಕಾರವು. ಅನಿರುದ್ಧನೆಂಬ ವ್ಯೂಹಾವತಾರದಿಂದ ಮನಸ್ಸಿಗೂ, ಇಂದ್ರಿಯಗಳಿಗೂ ಪ್ರಭುವಾಗಿಯೂ,ಕರ್ಮಸಂಬಂಧವಿಲ್ಲದ ಶುದ್ಧಾತ್ಮನಾಗಿಯೂ, ಆಶ್ರಿತರಿಗೂ

ಕರ್ಮಸಂಬಂಧವನ್ನು ಬಿಡಿಸಬಲ್ಲವನಾಗಿಯೂ, ಶುದ್ಧಾತ್ಮರಾದ ಯೋಗಿಗಳ ಮನಸ್ಸಿನಲ್ಲಿ ನೆಲೆಗೊಂಡವನಾಗಿಯೂ, ಸಮಸ್ತಪ್ರಪಂಚದ ಒಳಗೂ, ಹೊರಗೂ ವ್ಯಾಪಿಸಿದವನಾಗಿಯೂ, ಪೂರ್ಣಕಾಮನಾಗಿಯೂ, ಕ್ಷಯವೃದ್ಧಿಗಳಿಲ್ಲದವನಾಗಿಯೂ ಇರುವ ನಿನಗೆ ನಮಸ್ಕಾರವು. ಸ್ವರ್ಗಮೋಕ್ಷಗಳನ್ನುಕೊಡತಕ್ಕವನಾಗಿಯೂ, ಅಗ್ನಿಸ್ವರೂಪನಾಗಿಯೂ ಯಜ್ಞಸ್ವರೂಪನಾಗಿಯೂ ಇರುವ ನಿನಗೆ ನಮಸ್ಕಾರವು. ಹವ್ಯಕವ್ಯಗಳೆಂಬ ದೇವತೆಗಳ ಮತ್ತು ಪಿತೃಗಳ ಆಹಾರಸ್ವರೂಪನಾಗಿಯೂ,ವೇದಗಳನ್ನು ರಕ್ಷಿಸತಕ್ಕವನಾಗಿಯೂ, ಯಜ್ಞಫಲಸ್ವರೂಪನಾಗಿಯೂ, ಪ್ರಾಣಿಗಳಿಗೆ ಸರ್ವವಿಧವಾದ ತೃಪ್ತಿಯನ್ನುಂಟುಮಾಡತಕ್ಕವನಾಗಿಯೂ, ಸಕಲರಸಸ್ವರೂಪನಾಗಿಯೂ ಇರುವ ನಿನಗೆ ನಮಸ್ಕಾರವು. ದೇವಾ ! ಚೇತನಾಚೇತನಗಳೆಲ್ಲವೂ ನಿನ್ನ ಶರೀರವು ! ಇಂದ್ರಿಯಶಕ್ತಿ, ತೇಜಸ್ಸು, ಧಾರಣಶಕ್ತಿ, ದೇಹಶ

ಕ್ತಿ, ಮುಂತಾದ ಸರ್ವವಿಧಶಕ್ತಿಗಳೂ ನೀನೇ! ಮೂರುಲೋಕವನ್ನೂ ರಕ್ಷಿಸತಕ್ಕವನೂ ನೀನೇ! ಇಂತಹ ನಿನಗೆ ನಮಸ್ಕಾರವು. ಶಬ್ದಗುಣವುಳ್ಳ ಆಕಾಶವೂ, ಇತರ ಮಹಾಭೂತಗಳೂ ನಿನ್ನ ಸ್ವರೂಪವಲ್ಲದೆ ಬೇರೆಯಲ್ಲ. ನೀನು ಎಲ್ಲಾಭೂತಗಳ ಒಳಗೂ,ಹೊರಗೂ ವ್ಯಾಪಿಸಿರತಕ್ಕವನು ಸಮಸ್ತ ಪುಣ್ಯಕರ್ಮಗಳೂನೀನೇ!ಆ ಪುಣ್ಯಕರ್ಮಗಳಿಂದ ಸಾಧಿಸಲ್ಪಡತಕ್ಕ ಸ್ವರ್ಗಾದಿಲೋಕಗಳೂ ನೀನೇ! ಆ ಪುಣ್ಯಕರ್ಮಗಳನ್ನು ನಡೆಸುವುದಕ್ಕೆ ಸ್ಥಾನವಾದ ಈ ಲೋಕವೂ ನೀನೇ! ಜ್ಞಾನಸ್ವರೂಪರಾದ ಜೀವಾತ್ಮಗಳೂ ನೀನೇ! ಇಂತಹ ನಿನಗೆ ನಮಸ್ಕಾರವು ಪ್ರವೃತ್ತಿ, ನಿವೃತ್ತಿಗಳೆಂಬ ಎರಡು ಬಗೆಯ ಕರ್ಮಗಳೂ ನೀನೇ! ಆ ಪ್ರವೃತ್ತಿಕರ್ಮಗಳಿಂದ ದೇವತೆಗಳ ಮತ್ತು ಪಿತೃಗಳ ಸ್ವರೂಪದಿಂದ ಆರಾಧಿಸಲ್ಪಡತಕ್ಕವನೂ ನೀನೇ! ಆ ಕರ್ಮಫಲವೂ ನೀನೇ! ದುಃಖಕಾರಣನಾದ ಮೃತ್ಯುವೂ ನೀನೇ! ಇಂತಹ ನಿನಗೆ ನಮಸ್ಕಾರವು. ಧರ್ಮಾದಿಪುರುಷಾರ್ಥಗಳಿಗೆ ಫಲವನ್ನು ತೋರಿಸತಕ್ಕವನಾಗಿಯೂ, ಸರ್ವಜ್ಞನಾಗಿಯೂ, ಮಂತ್ರರೂಪನಾಗಿಯೂ ಅನಂತವಾದ ಸ್ವರೂಪಗುಣಗಳುಳ್ಳವನಾಗಿಯೂ, ಧರ್ಮಸ್ವರೂಪನಾಗಿಯೂ, ಕರ್ಮಾಚರಣೆಗಳನ್ನು ನಿರೀಕ್ಷಿಸದೆ ಫಲವನ್ನು ಕೊಡುವುದರಿಂದ ಸಿದ್ಧಧರ್ಮನೆಂದು ಪ್ರಸಿದ್ಧನಾಗಿಯೂ, ಯಾವಾಗಲೂ ಯಾವವಿಧದಿಂದಲೂ ತಡೆಯಿಲ್ಲದ ಜ್ಞಾನವುಳ್ಳವನಾಗಿಯೂ ಇರುವ ನಿನಗೆ ನಮಸ್ಕಾರವು. ಓ ದೇವಾ! ನೀನು ಪುರಾಣಪುರುಷನು! ಸಾಂಖ್ಯಶಾಸ್ತ್ರವನ್ನು ಹೊರಪಡಿಸಿದ ಕಪಿಲನೂ, ಯೋಗಶಾಸ್ತ್ರವನ್ನುಪದೇಶಿಸಿದ ಹಿರಣ್ಯಗರ್ಭನೂ ನೀನೇ!ಸೃಷ್ಟಿಸ್ಥಿತಿಸಂಹಾರಗಳೆಂಬ ಮೂರುಶಕ್ತಿಗಳೂ ನಿನ್ನ ಕೈಯಲ್ಲಿ ಅಡಗಿರುವುವು. ಮಳೆಯನ್ನು ಸುರಿಸತಕ್ಕ ಸೂರ್ಯಾತ್ಮಕನಾದ ಪರ್ಜನ್ಯಸ್ವರೂಪನೂ ನೀನೇ!ಅಹಂಕಾರತತ್ವ ಮನಸ್ತತ್ವಗಳೆರಡೂ ನೀನೇ! ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ ಅನುಭವಿಸತಕ್ಕವಸ್ತುಗಳೆಲ್ಲವೂ ನೀನೇ! ಇಂತಹ ನಿನಗೆ ನಮಸ್ಕಾರವು. ಹೇನಾಥಾ! ಭಕ್ತೋತ್ತಮರಿಂದ ಆರಾಧಿಸಲ್ಪಡತಕ್ಕುದಾಗಿಯೂ, ಅವರಿಗೆ ವಿಶೇಷಪ್ರೀತಿಪಾತ್ರವಾಗಿಯೂ ಇರುವ ನಿನ್ನ ದಿವ್ಯಾಕೃತಿಯನ್ನು, ನಾವು ಸರ್ವೇಂದ್ರಿಯಗಳಿಂ

ದಲೂ ಅನುಭವಿಸಬೇಕೆಂದು ಕುತೂಹಲಪಡುತ್ತಿರುವೆವು. ನೀನು ನಮಗೆ ದರ್ಶನವನ್ನು ಕೊಡಬೇಕು. ಆಹಾ! ಆ ನಿನ್ನ ಮಹಾದ್ಭುತಸೌಂದರ್ಯವು ಎಂದಿಗೆ ನಮ್ಮ ದೃಷ್ಟಿಗೆ ಬೀಳುವುದೋ! ದೇವಾ! ಮಳೆಗಾಲದ ಕಾಳಮೇಘದಂತೆ ಶ್ಯಾಮಲವಾದ ದೇಹಕಾಂತಿ! ಸರ್ವವಿಧವಾದ ಸೌಂದರ್ಯ ಸಮೃದ್ಧಿ! ಅಂದವಾಗಿ ನೀಡಿದ ನಾಲ್ಕು ಭುಜಗಳು! ಸುಕುಮಾರವಾಗಿಯೂ ಸುಂದರವಾಗಿಯೂ ಇರುವ ಮುಖದ ತೇಜಸ್ಸು! ಕಮಲದ ಮಧ್ಯದಳಗಳಂತಿರುವ ಕಣ್ಣುಗಳು! ಅಂದವಾದ ಹುಬ್ಬುಗಳು! ಎಸಳಾದ ಮೂಗು! ಸೂಕ್ಷ್ಮವಾದ ದಂತಪಂಕ್ತಿ! ನುಣುಪಾದ ಕೆನ್ನೆಗಳು! ಸುಂದರವಾದ ಬಾಯಿ! ಮುಖಾಭರಣದಂತಿರುವ ಸಮವಾದ ಕಿವಿಗಳು! ಪ್ರೇಮದಿಂದರಳಿದ ಕಡೆಗಣ್ಣುಗಳು! ಅಂದವಾದ ಮುಂಗುರುಳು! ಕಮಲಕೇಸರದಂತೆ ಹೊಂಬಣ್ಣವುಳ್ಳ ದುಕೂಲದ ಪಟ್ಟೆಮಡಿ! ಜ್ವಲಿಸುವ ಕರ್ಣಕುಂಡಲಗಳು! ತಲೆಯಿಂದ ಕಾಲಿನವರೆಗೆ ಕಾಂತಿಯಿಂದ ಹೊಳೆಯುತ್ತಿರುವ ಕಿರೀಟ, ಹಾರ, ಕೇಯೂರ, ನೂಪುರ, ಮೇಖಲಾದ್ಯಾಭರಣಗಳು! ನಾಲ್ಕು ಭುಜಗಳಲ್ಲಿಯೂ ರತ್ನಕಾಂತಿಯಿಂದ ದೇದೀಪ್ಯಮಾನವಾದ ಶಂಖ, ಚಕ್ರ, ಗದಾ, ಪದ್ಮಗಳು! ಸಿಹ್ಮದ ಕೊರಲನ್ನು ಹೋಲುತ್ತಿರುವ ಕೊರಲಿನಲ್ಲಿ ಕೇಸರದಂತೆ ಹರಡಿದ ಕೌಸ್ತುಭರತ್ನಕಾಂತಿ! ಸುವರ್ಣರೇಖೆಯಿಂದ ಕೂಡಿದ ಒರೆಗಲ್ಲಿನಂತೆ ಶ್ರೀಮಹಾಲಕ್ಷ್ಮಿಯ ದೇಹಕಾಂತಿಯಿಂದ ಶೋಭಿತವಾದ ಎದೆ! ಉಸಿರಾಟದಲ್ಲಿ ಕದಲುತ್ತಿರುವ ತ್ರಿವಳಿಗಳ ಸಂಕೋಚವಿಕಾಸಗಳಿಂದ ಸುಂದರವಾಗಿ, ಅರಳಿಯೆಲೆಯನ್ನು ಹೋಲುತ್ತಿರುವ ಹೊಟ್ಟೆ! ಪದ್ಮರೂಪವಾಗಿ ತನ್ನಿಂದ ಹೊರಟ ಜಗತ್ತೆಲ್ಲವನ್ನೂ, ತಿರುಗಿ ತನ್ನಲ್ಲಿಯೇ ಮರೆಸಿಟ್ಟುಕೊಳ್ಳುವುದಕ್ಕೆ ತಕ್ಕಂತೆ ಆಳವಾಗಿ, ನೀರಿನ ಸುಳಿಯಂತಿರುವ ಹೊಕ್ಕುಳು! ಶ್ಯಾಮವರ್ಣವುಳ್ಳ ನಿತಂಬದಮೇಲೆ ಕಟ್ಟಿದ ಪೀತಾಂಬರವೆಂಬ ಪಟ್ಟೆಮಡಿ! ಅದರಮೇಲೆ ಸುತ್ತಿ ಕಟ್ಟಿದ ಬಂಗಾರದ ಡಾಬು! ಒಂದಕ್ಕೊಂದು ಸಮವಾಗಿಯೂ, ಅಂದವಾಗಿಯೂ ಇರುವ ಕಾಲು, ಕಣ್ಣು, ತೊಡೆ, ಮುಂತಾದ ದ್ವಂದ್ವಾವಯವಗಳು! ಬಹಳ ಎತ್ತರವಿಲ್ಲದೆ ತಗ್ಗಿದ ಮೊಳಕಾಲುಗಳ ಸೊಗಸು! ಇಂತಹ ಸೌಂದರ್ಯವಿಶಿಷ್ಟವಾದ ನಿನ್ನ ದಿವ್ಯಾಕೃತಿಯನ್ನು ನೋಡ

ಬೇಕೆಂದು ನಾವು ಕುತೂಹಲಪಡುತ್ತಿರುವೆವು. ಶರತ್ಕಾಲದ ಕಮಲದಳಗಳಂತಿರುವ ಬೆರಳುಗಳಿಂದಲೂ, ಕೇಸರಗಳಂತಿರುವ ನಖಕಾಂತಿಯಿಂದಲೂ ಶೋಭಿತಗಳಾಗಿ, ಮರೆಹೊಕ್ಕವರ ಮನಃಕಲ್ಮಷಗಳನ್ನೂ, ಭಯವನ್ನೂ ನೀಗಿಸತಕ್ಕ ನಿನ್ನ ಪಾದಾರವಿಂದಗಳ ದರ್ಶನವನ್ನು ನಮಗೆ ಕರುಣಿಸಬೇಕು. ದೇವಾ! ನೀನೇ ಅಜ್ಞಾನಿಗಳಿಗೆ ಆಚಾರ್ಯನಮೂಲಕವಾಗಿ ಜ್ಞಾನೋದಯವನ್ನುಂಟುಮಾಡತಕ್ಕವನಾದುದರಿಂದ, ಆಚಾರ್ಯರಿಗೂ ಪರಮಾಚಾರ್ಯನು. ಮೇಲೆ ಹೇಳಿದ ಆ ನಿನ್ನ ರೂಪವು ಚಿತ್ತಶುದ್ಧಿಯನ್ನಪೇಕ್ಷಿಸತಕ್ಕ ನಮಗೆ ಕೇವಲಧ್ಯಾನಯೋಗ್ಯವಾಗಿರುವುದು. ಆ ವಿಧವಾದ ಧ್ಯಾನಯೋಗಕ್ಕೆ ಅಂಗವಾಗಿ ತಮ್ಮತಮ್ಮ ವರ್ಣಾಶ್ರಮಧರ್ಮಗಳನ್ನು ನಡೆಸತಕ್ಕವರಿಗೆ ಆ ನಿನ್ನ ರೂಪಧ್ಯಾನವೇ ಮೋಕ್ಷಸಾಧಕವಾದ ಭಕ್ತಿಯೋಗವಾಗಿ ಪರಿಣಮಿಸುವುದು. ಅಂತಹ ಭಕ್ತಿಯುಳ್ಳವರಿಗೆಮಾತ್ರವೇ ನೀನು ಸುಲಭನೇಹೊರತು, ಇತರರಿಗೆ ನಿನ್ನ ರೂಪವು ಪ್ರತ್ಯಕ್ಷವಾಗಲಾರದು. ಅಂತಹ ಭಕ್ತಿನಿಷ್ಠರಿಗೆ ಮುಖ್ಯಪ್ರಾಪ್ಯನಾದ ನೀನು, ಚೇತನರಿಗೆ ಕೈವಲ್ಯರೂಪವಾದ ಶುದ್ಧಾತ್ಮ ಸ್ವರೂಪವನ್ನನುಭವಿಸುವುದರಿಂದುಂಟಾಗುವ ಆನಂದಕ್ಕಿಂತ ಹೆಚ್ಚು ಪ್ರೀತಿಪಾತ್ರನಾದವನು! ಬೇರೆ ಉಪಾಯದಿಂದ ದುರ್ಲಭನಾದ ನಿನ್ನನ್ನು, ಮಹಾತ್ಮರಿಗೂ ಸಾಧಿಸಲಸಾಧ್ಯವಾದ ಭಕ್ತಿಬಲದಿಂದ ಯಾರು ಆರಾಧಿಸುವರೋ, ಅವರು ನಿನ್ನ ಪಾದಮೂಲವನ್ನು ಬಿಟ್ಟು ಬೇರೆ ಸ್ವರ್ಗಾದಿಸುಖಗಳನ್ನೂ ಅಪೇಕ್ಷಿಸಲಾರರು. ವೀರ್ಯೋತ್ಸಾಹ ಸೂಚಕವಾದ ತನ್ನ ಹುಬ್ಬಿನಾಟಗಳಿಂದಲೇ ಸಮಸ್ತಲೋಕಗಳನ್ನೂ ನಾಶಗೊಳಿಸತಕ್ಕ ಯಮನೂ ಕೂಡ, ನಿನ್ನ ಪಾದಾಶ್ರಿತರ ವಿಷಯದಲ್ಲಿ ತನ್ನ ಕೈಸಾಗದೆಂದು ಗರ್ವಹೀನನಾಗುವನು. ದೇವಾ! ಸ್ವರ್ಗಸುಖವಾಗಲಿ, ಕೊನೆಗೆ ಮೋಕ್ಷಸುಖವಾಗಲಿ, ನಿನ್ನ ಭಕ್ತರೊಡನೆ ಕ್ಷಣಮಾತ್ರಸಹವಾಸದಿಂದುಂಟಾಗುವ ಸೌಖ್ಯಕ್ಕೆ ಸಾಟಿಯಾಗಲಾರದು. ಇನ್ನು ಸಂಸಾರಿಗಳಿಗೆ ಆಸೆಹುಟ್ಟಿಸತಕ್ಕ ಪಶುಪುತ್ರಾದಿ ಸೌಖ್ಯಗಳು ಕೇವಲ ನಿಸ್ಸಾರಗಳೆಂಬುದನ್ನು ಕೇಳಬೇಕೆ ? ಆದುದರಿಂದ ಎಲೈ ಪರಮಪುರುಷನೆ! ನಿನ್ನ ಗುಣಕೀರ್ತನಗಳಿಂದಲೂ, ನಿನ್ನ ಪಾದತೀರ್ಥದಿಂದಲೂ, ಆತ್ಮಶುದ್ಧಿಯನ್ನೂ, ಶರೀರಶುದ್ಧಿಯನ್ನೂ ಹೊಂದಿ, ಸರ್ವ

ಭೂತದಯಾಪರರಾಗಿ,ಸಾತ್ವಿಕಸ್ವಭಾವವುಳ್ಳ ನಿನ್ನ ಭಕ್ತರ ಸಹವಾಸವು ನ ಮಗೆ ಲಭಿಸುವಂತೆ ಅನುಗ್ರಹಿಸು. ಇದೇ ಈಗ ನಾವು ನಿನ್ನಲ್ಲಿ ಪ್ರಾರ್ಥಿಸಿ ಕೇಳಿಕೊಳ್ಳತಕ್ಕ ಅನುಗ್ರಹವು! ಈ ಸತ್ಸಹವಾಸವೂ ನಿನ್ನ ಅನುಗ್ರಹವಿಲ್ಲ ದೆ ಲಭಿಸಲಾರದು.ಯಾವಮನುಷ್ಯನ ಮನಸ್ಸು,ಭಕ್ತಿಯೋಗದಿಂದ ಶುದ್ಧ ವಾಗಿ,ಸತ್ವಗುಣವನ್ನು ಹೊಂದುವುದೋ,ಆ ಮನಸ್ಸಿಗೆ ಶಬ್ದಾದಿವಿಷಯಗಳ ಲ್ಲಿ ಎಂದಿಗೂ ಆಸಕ್ತಿ ಹುಟ್ಟದು. ಆ ಮನಸ್ಸು ತಪೋರೂಪವಾದ ಗುಹೆ ಯಲ್ಲಿ ಎಂದಿಗೂ ಪ್ರವೇಶಿಸದು. ಅಂತಹ ಶುದ್ಧಮನಸ್ಸುಳ್ಳ ಯೋಗಿಯು, ನಿನ್ನ ಪರಸ್ವರೂಪವನ್ನು ಅನಾಯಾಸವಾಗಿಯೇ ತಿಳಿಯುವನು.ದೇವಾ!ನಿನ್ನ ಯಾವರೂಪದಲ್ಲಿ,ಚಿದಚಿದಾತ್ಮಕವಾದಸಮಸ್ತಪ್ರಪಂಚವೂವ್ಯಕ್ತವಾಗು ತ್ತಿರುವುದೋ,ಸಮಸ್ತಪ್ರಪಂಚದಲ್ಲಿಯೂ ಯಾವುದುಪ್ರಕಾಶಿಸುವುದೋ ಆ ನಿನ್ನರೂಪವೇಪರಬ್ರಹ್ಮವೆಂದುಕರೆಯಲ್ಪಡುವುದು. ತೇಜಸ್ಸಿನಂತೆಯೂ ಆಕಾಶದಂತೆಯೂ ಅದು ಎಲ್ಲಾಪ್ರಪಂಚದ ಒಳಗೂ ಹೊರಗೂ ವಿಸ್ತರಿಸಿ ಕೊಂಡಿದ್ದರೂ,ತಾನು ಸೇರಿದವಸ್ತುಗಳಲ್ಲಿರುವ ದೋಷವನ್ನು ಹೊಂದದು. ಇಂತಹ ರೂಪವುಳ್ಳನೀನೇ,ಅನೇಕವಿಧವಾದನಿನ್ನಮಾಯಾಶಕ್ತಿಯಿಂದಪ್ರ ಪಂಚದ ಸೃಷ್ಟಿಸ್ಥಿತಿಸಂಹಾರಗಳನ್ನು ನಡೆಸುತ್ತಿರುವೆ.ಆ ನಿನ್ನಮಾಯೆಯಿಂ ದಲೇ ಸಮಸ್ತಜೀವಾತ್ಮಗಳೂ ದುಃಖಪ್ರಚುರವಾದಸಂಸಾರದಲ್ಲಿ ಬಿದ್ದು ನರಳುವುವು. ಬೇರೆಬೇರೆ ಶರೀರಗಳಂತೆ ಪರಿಣಮಿಸಿರುವ ಆ ನಿನ್ನ ಮಾಯೆ ಯ ಸಂಬಂಧದಿಂದಲೇ ಜೀವಾತ್ಮರು, ತಮ್ಮನ್ನು ಈಶ್ವರನಿಗಿಂತಲೂ ಬೇ ರೆಯಾಗಿಯೂ, ದೇಹವನ್ನೇ ಆತ್ಮವಾಗಿಯೂ ಭ್ರಮಿಸುವರು. ಇದು ಕೇ ವಲ ಭ್ರಾಂತಿಯಾದರೂ ನಿನ್ನ ಮಾಯೆಯ ಪ್ರಭಾವದಿಂದ ಅವರಿಗೆ ಅದು ನಿಜವೆಂದೇ ತೋರುವುದು. ಹೀಗೆ ನೀನು ಜೀವಾತ್ಮರಲ್ಲಿ ಅನೇಕ ವಿಕಾರಗ ಳನ್ನು ಹುಟ್ಟಿಸುತಿದ್ದರೂ ನೀನುಮಾತ್ರ ವಿಕಾರವಿಲ್ಲದೆ,ಒಂದೇ ರೂಪದಿಂದ ಸ್ವತಂತ್ರನಾಗಿರುವೆ. ಅಂತಹ ನಿನ್ನನ್ನು ನಾವು ಮರೆಹುಗುವೆವು. ಆತ್ಮ ಜ್ಞಾನಿಗಳಾದ ಯಾವ ಯೋಗಿಗಳು, ಬೇರೆ ಫಲಾಪೇಕ್ಷೆಯಿಲ್ಲದೆ, ಅಪ್ರಾ ಕೃತದಿವ್ಯಮಂಗಳವಿಗ್ರಹವುಳ್ಳ ನಿನ್ನ ರೂಪವನ್ನು ತಮ್ಮತಮ್ಮ ವ ರ್ಣಾಶ್ರಮಧರ್ಮಗಳ ಮೂಲಕವಾಗಿ ಶ್ರದ್ಧೆಯಿಂದ ಆರಾಧಿಸುವರೋ

ಅವರೇ ಕರ್ಮಮಾರ್ಗವನ್ನು ತಿಳಿಸತಕ್ಕ ವೇದದಲ್ಲಿಯೂ, ಆತ್ಮಸ್ವರೂಪವನ್ನು ತಿಳಿಸತಕ್ಕ ಸಾಂಖ್ಯದಲ್ಲಿಯೂ ಪಾರಂಗತರೆನಿಸುವರು. ಇಂತಹ ಗುಣಸ್ವಭಾವಗಳುಳ್ಳ ನೀನೊಬ್ಬನೇ ಜಗತ್ಕಾರಣನಾದ ಆದಿಪುರುಷನು. ಸೃಷ್ಟಿಗೆ ಮೊದಲು ಚಿತ್ತು,ಅಚಿತ್ತು ಮೊದಲಾದ ಶಕ್ತಿಗಳೆಲ್ಲವನ್ನೂ ತನ್ನಲ್ಲಿಯೇ ಅಡಗಿಸಿಟ್ಟುಕೊಂಡು, ಏಕಾಕಿಯಾಗಿದ್ದವನೂ ನೀನೇ! ಆಗ ನಿನಗೆ ಶರೀರವೆನಿಸಿ, ಸತ್ವರಜಸ್ತಮೋಗುಣಗಳಿಂದ ಕೂಡಿದ ಮಾಯೆಯೆಂಬ ಪ್ರಕೃತಿಯಲ್ಲಿ, ಆ ಗುಣಗಳನ್ನು ಕದಲಿಸಿ, ಸೃಷ್ಟಿಕಾರ್ಯಕ್ಕಾಗಿ ಪ್ರೇರಿಸಿದವನೂ ನೀನೇ: ಗುಣವ್ಯತ್ಯಾಸದಿಂದಲೇ ಪ್ರಕೃತಿಯಲ್ಲಿ ಮೊದಲು ಮಹತ್ತತ್ವವೂ, ಅದರಿಂದ ಅಹಂಕಾರತತ್ವವೂ,ಅದರಿಂದ ಮೇಲೆಮೇಲೆ ಕ್ರಮವಾಗಿ, ಆಕಾಶ, ವಾಯು, ಅಗ್ನಿ, ನೀರು, ಪೃಥಿವಿ, ಎಂಬ ಪಂಚಮಹಾಭೂತಗಳೂ, ಭೂತಗಳ ಪಂಚೀಕರಣವೆಂಬ ಜೋಡಣೆಯಿಂದ, ಜಗದ್ರೂಪವಾದ ಅಂಡವೂ, ಅದರಿಂದ ಬ್ರಹ್ಮಾದಿದೇವತೆಗಳೂ, ಅವರಿಂದ ಈ ಚರಾಚರಾತ್ಮಕವಾದ ಪ್ರಪಂಚವೂ ಏರ್ಪಟ್ಟಿರುವುದು.ದೇವತಿರ್ಯಙ್ಮನುಷ್ಯಸ್ಥಾವರಗಳೆಂಬ ನಾಲ್ಕುಬಗೆಯಶರೀರಗಳನ್ನೂನೀನು ನಿನ್ನ ಶಕ್ತಿರೂಪವಾದಪ್ರಕೃತಿಯಿಂದ ಸೃಷ್ಟಿಸಿ,ನಿನ್ನ ಅಂಶವಾದ ಜೀವನಮೂಲಕವಾಗಿನೀನೂ ಅವುಗಳಲ್ಲಿ ಪ್ರವೇಶಿಸಿರುವೆ! ಆದುದರಿಂದಲೇ ನೀನು "ಪುರುಷ"ನೆಂದು ಕರೆಯಲ್ಪಡುವೆ. ಜೀವನು ದೇವಾದಿಶರೀರಗಳಲ್ಲಿ ತನ್ನ ಕರ್ಮಾಧೀನವಾಗಿ ಪ್ರವೇಶಿಸಿ,ಜೇನುಹುಳುಗಳು ಅಲ್ಲಲ್ಲಿ ಪುಷ್ಪಗಳಿಂದ ಜೇನನ್ನು ಸಂಗ್ರಹಿಸಿ ತರುವಂತೆ,ಇಂದ್ರಿಯಗಳು ಅಲ್ಲಿಲ್ಲಿಂದ ತರುವ ಶಬ್ದಾದಿವಿಷಯಗಳನ್ನು ತಾನೇಅನುಭವಿಸುವನು. ಹಾಗಿದ್ದರೂ ಆ ಜೀವನಿಗೆ ಅಂತರಾತ್ಮನಾಗಿ ಆ ಕಾರ್ಯದಲ್ಲಿ ಪ್ರೇರಿಸತಕ್ಕವನೂ ನೀನಲ್ಲದೆ ಬೇರೆಯಲ್ಲ. ಮತ್ತು ಓ ದೇವಾ! ನೀನೇ ಕಾಲಶರೀರಕನಾಗಿ, ಭಯಂಕರವಾದ ಆಕಾರದಿಂದಲೂ,ವೇಗದಿಂದಲೂ ಕೂಡಿ,ಗಾಳಿಯು ಮೇಘಗಳನ್ನು ತೂರುವಂತೆ, ಒಂದು ಪ್ರಾಣಿಯಮೂಲಕವಾಗಿ ಮತ್ತೊಂದು ಪ್ರಾಣಿಯನ್ನು ಕೊಲ್ಲಿಸುತ್ತಿರುವೆ.ಮತ್ತುಲೋಕದಲ್ಲಿ ಜನರು ಅತ್ಯಾಸೆಯುಳ್ಳವರಾಗಿ ಯಾವುದಾದರೂ ಒಂದು ಕಾರ್ಯದಲ್ಲಿ ಪ್ರವರ್ತಿಸಿ "ಇದನ್ನು ಹೀಗೆಯೇ ಮಾಡಬೇಕೆಂಬ" ಆತುರದಿಂದ ಶಬ್ದಾದಿವಿಷ

ಯಗಳಲ್ಲಿ ತೊಳಲುವರು. ಇಂತಹ ಸ್ಥಿತಿಯಲ್ಲಿ ನೀನು,ಕಾಲಸ್ವರೂಪನಾಗಿಎ ಚ್ಚರತಪ್ಪದೆ ಆ ಜನರಮೇಲೆ ಬಿದ್ದು, ಹಸಿದ ಹಾವು ನಾಲಗೆಯನ್ನು ನೀಡು ತ್ತ ಒಂದು ಇಲಿಯನ್ನು ನುಂಗುವಂತೆ,ಅವರ ಉದ್ದೇಶಗಳೆಲ್ಲವನ್ನೂ ಕ್ಷಣಮಾ ತ್ರದಲ್ಲಿ ಮುರಿಯುವೆ.ಓ ದೇವಾ! ನಿನ್ನನ್ನು ಅನಾದರಿಸುವುದರಿಂದಲೇ ಜೀ ವಾತ್ಮರು ಜ್ಞಾನಹೀನರಾಗಿ ಸಂಸಾರದಲ್ಲಿ ಬಿದ್ದು ದುಃಖಿಸುವರು.ಅಂತವರಿ ಗೆ ದೈವಾಧೀನವಾಗಿ ಸದ್ಬುದ್ಧಿಯು ಹುಟ್ಟಿ ನಿನ್ನಪಾದಸ್ಮರಣವುಂಟಾದ ಮೇಲೆ,ಅವರು ವಿವೇಕಿಗಳಾದಪಕ್ಷದಲ್ಲಿ ಎಂದಿಗೂ ಮರೆಯಲಾರರು.ಈ ಕಾ ರಣದಿಂದಲೇ ಹದಿನಾಲ್ಕು ಮನ್ವಂತರಗಳನ್ನು ಒಂದು ದಿನವಾಗಿ ಹೊಂದಿ ದ ನಮ್ಮಗುರುವಾದ ಬ್ರಹ್ಮದೇವನೂಕೂಡ, ಬೇರೆ ಚಿಂತೆಯಿಲ್ಲದೆ ನಿನ್ನ ಪಾದಾರವಿಂದಗಳನ್ನು ಎಡೆಬಿಡದೆ ಆರಾಧಿಸುತ್ತಿರುವನು.ಓ ಪರಮಾತ್ಮಾ! ಈ ಪ್ರಪಂಚವೆಲ್ಲವೂ ರುದ್ರಸ್ವರೂಪಿಯಾದ ನಿನಗೆ ಭಯಪಟ್ಟುನಡೆಯುತ್ತಿ ರುವುದು. ಜ್ಞಾನಿಗಳಾದ ನಮ್ಮಂತವರಿಗೆ ನೀನು ಸರ್ವವಿಧವಾದ ಭಯವ ನ್ನೂ ನಿವಾರಿಸತಕ್ಕ ಸದ್ಗತಿಯಾಗಿರುವೆ. ಆದುದರಿಂದ ನಿನ್ನನ್ನು ನಾವು ಮರೆಹುಗುವೆವು"ಎಂದನು. ವಿದುರಾ! ಹೀಗೆ ಪರಮಶಿವನು ಪರಮಾತ್ಮ ನನ್ನು ಸ್ತುತಿಸುತ್ತ ಆರಾಜಕುಮಾರರನ್ನು ನೋಡಿ ಹೇಳುವನು. 'ಎಲೈ ರಾ ಜಪುತ್ರರೆ!ನೀವು ಭಗವಂತನಲ್ಲಿಯೇ ಮನಸ್ಸಿಟ್ಟು, ನಿಮ್ಮನಿಮ್ಮ ವರ್ಣಾಶ್ರ ಮಧರ್ಮಗಳನ್ನು ತಪ್ಪದೆ ನಡೆಸುತ್ತ,ಭಕ್ತಿಯಿಂದ.ಈ ಸ್ತೋತ್ರವನ್ನೇ ಜಪಿ ಸಿರಿ!ಇದರಿಂದ ನಿಮಗೆ ಕ್ಷೇಮವುಂಟು. ನೀವು ಈ ಸ್ತೋತ್ರವನ್ನು ಜಪಿ ಸುತ್ತ, ಸರ್ವಭೂತಗಳಲ್ಲಿಯೂ ಅಂತರಾತ್ಮನಾದುದರಿಂದ ನಿಮ್ಮ ಹೃದಯ ದಲ್ಲಿಯೇ ವಾಸಮಾಡುತ್ತಿರುವ ಆ ಭಗವಂತನನ್ನು ಎಡೆಬಿಡದೆ ಧ್ಯಾನಿಸು ತ್ತಿರಬೇಕು. ಅಡಿಗಡಿಗೆ ಅವನನ್ನೇ ಪೂಜಿಸುತ್ತಿರಬೇಕು. ಈ ಸ್ತೋತ್ರಕ್ಕೆ ಯೋಗಾದೇಶವೆಂದು ಹೆಸರು. ನೀವೆಲ್ಲರೂ ಇದನ್ನು ಆಗಾಗ ಪುನಶ್ಚರಣ ಮಾಡುತ್ತ ಮನಸ್ಸಿನಲ್ಲಿ ದೃಢವಾಗಿ ನಿಲ್ಲಿಸಿಡಬೇಕು. ಅಕ್ಕರೆಯಿಂದಲೂ, ಎಚ್ಚರದಿಂದಲೂ ಇದನ್ನು ಅಭ್ಯಸಿಸಬೇಕು. ಸೃಷ್ಟಿಕರ್ತರಾದ ಮರೀಚಿ ಮೊದಲಾದವರಿಗೂ ಪ್ರಭುವೆನಿಸಿದ ಬ್ರಹ್ಮದೇವನು, ಪೂರ್ವದಲ್ಲಿ ಭೃಗು ಮೊದಲಾದ ತನ್ನ ಮಕ್ಕಳನ್ನು ಪ್ರಜಾಸೃಷ್ಟಿಕಾರ್ಯದಲ್ಲಿ ನಿಯಮಿಸುವಾ

ಗ, ಈ ಮಂತ್ರವನ್ನೇ ಉಪದೇಶಿಸಿರುವನು. ಸೃಷ್ಟಿಸಾಮರ್ಥ್ಯವನ್ನು ಪಡೆಯುವುದಕ್ಕಾಗಿಯೇ ನಾವು, ಅವನಿಂದ ಈ ಮಂತ್ರೋಪದೇಶವನ್ನು ಪಡೆದಿರುವೆವು. ಈ ಮಂತ್ರಬಲದಿಂದಲೇ ನಾವು ನಮ್ಮ ಮನಃಕಲ್ಮಷಗಳೆಲ್ಲವನ್ನೂ ನೀಗಿ,ಬ್ರಹ್ಮದೇವನ ಪ್ರೇರಣೆಯಿಂದ ಪ್ರಜಾಸೃಷ್ಟಿಯನ್ನು ನಡೆಸಿದೆವು. ಶ್ರೀವಾಸುದೇವನಲ್ಲಿ ಮನಸ್ಸನ್ನು ನೆಲೆಗೊಳಿಸಿ, ಪ್ರತಿದಿನವೂ ನಿಯಮದಿಂದ ಈ ಸ್ತೋತ್ರವನ್ನು ಜಪಿಸತಕ್ಕವನು,ಶೀಘ್ರದಲ್ಲಿಯೇ ತನ್ನ ಕೋರಿಕೆಗಳೆಲ್ಲವನ್ನೂ ಪಡೆಯುವನು. ಎಲೈ ರಾಜಕುಮಾರರೆ ! ಎಲ್ಲಾ ಶ್ರೇಯಸ್ಸುಗಳಿಗಿಂತಲೂ ಭಗವದ್ಭಕ್ತಿರೂಪವಾದ ಜ್ಞಾನವೇ ಉತ್ತಮವೆನಿಸಿರುವುದು. ಈ ಜ್ಞಾನವುಳ್ಳವರು ಬೇರೆ ಯಾವ ಉಪಾಯಗಳಿಂದಲೂ ದಾಟಲಸಾಧ್ಯವಾದ ದುಃಖಸಮುದ್ರವನ್ನು ಅನಾಯಾಸವಾಗಿಯೇ ದಾಟಬಲ್ಲರು. ಲೋಕದಲ್ಲಿ ಯಾವನು ನನ್ನಿಂದ ಗಾನಮಾಡಲ್ಪಟ್ಟ ಈ ಪರಮಾತ್ಮಸ್ತುತಿಯನ್ನು ಶ್ರದ್ಧೆಯಿಂದ ಪಠಿಸುವನೋ, ಅವನಿಗೆ ಭಗವದ್ಭಕ್ತಿಯು ತಾನಾಗಿಯೇ ಹುಟ್ಟುವುದು. ಸಮಸ್ತಪುರುಷಾರ್ಥಗಳನ್ನೂ ಕೊಡತಕ್ಕ ಆ ಪರಮಪುರುಷನು, ಈ ಸ್ತೋತ್ರದಿಂದ ಸುಲಭವಾಗಿ ಪ್ರಸನ್ನನಾಗುವನು. ಈ ಸ್ತೋತ್ರದಿಂದ ತನ್ನನ್ನು ಕೀರ್ತನೆಮಾಡತಕ್ಕವರಿಗೆ, ಬೇಕುಬೇಕಾದ ಕೋರಿಕೆಗಳೆಲ್ಲವನ್ನೂ ಕೈಗೂಡಿಸುವನು. ಯಾವ ಪುರುಷನು ಬೆಳಿಗ್ಗೆ ಎದ್ದಕೂಡಲೆ, ಶ್ರದ್ಧೆಯಿಂದ ಕೈಮುಗಿದು, ಈ ಸ್ತೋತ್ರವನ್ನು ಬಾಯಿಂದ ಪಠಿಸುವನೋ, ಇಲ್ಲವೇ ಕಿವಿಯಿಂದ ಕೇಳುವನೋ! ವನು ತನ್ನ ಸಮಸ್ತಕರ್ಮಗಳಿಂದಲೂ ಮುಕ್ತನಾಗಿ ಮೋಕ್ಷವನ್ನೂ ಹೊಂದುವನು. ಆದುದರಿಂದ ಎಲೈ ರಾಜಕುಮಾರರೆ!ನನ್ನಿಂದ ಗಾನಮಾಡಲ್ಪಟ್ಟ ಈ ಪರಮಾತ್ಮಸ್ತುತಿಯನ್ನು ಜಪಿಸುತ್ತ, ನೀವು ದೃಢವಾದ ತಪಸ್ಸಿನಲ್ಲಿ ನಿರತರಾಗಿದ್ದಪಕ್ಷದಲ್ಲಿ, ಕೊನೆಗೆ ನಿಮ್ಮ ಕೋರಿಕೆಯು ಕೈಗೂಡುವುದರಲ್ಲಿ ಏನೇನೂ ಸಂದೇಹವಿಲ್ಲ" ಎಂದನು. ಇಲ್ಲಿಗೆ ಇಪ್ಪತ್ತುಮೂರನೆಯ ಅಧ್ಯಾಯವು.

---

ನಾರದನು ಪ್ರಾಚೀನಬರ್ಹಿಗೆ ಕಥಾರೂಪವಾಗಿ ಸಂಸಾರಸ್ವರೂಪವನ್ನುಪದೇಶಿಸಿದುದು.

ಪುರಂಜನೋಪಾಖ್ಯಾನವು.

ವಿದುರಾ ಕೇಳು! ರುದ್ರನು ಈ ವಿಧವಾಗಿ ಪ್ರಚೇತಸರೆಂಬ ಆ ರಾಜಕುಮಾರರಿಗೆ ಯೋಗಾದೇಶವೆಂಬ ಪರಮಾತ್ಮಸ್ತುತಿಯನ್ನುಪದೇಶಿಸಿ, ಅವರಿಂದ ಪೂಜಿತನಾಗಿ, ಅವರೆಲ್ಲರೂ ನೋಡುತಿದ್ದಹಾಗೆಯೇ ಅಂತರ್ಧಾನಹೊಂದಿದನು. ಆಮೇಲೆ ರಾಜಕುಮಾರರೆಲ್ಲರೂ ಆ ಪರಮಾತ್ಮಸ್ತುತಿಯನ್ನೇ ಜಪಿಸುತ್ತ, ಹತ್ತುಸಾವಿರವರುಷಗಳವರೆಗೆ ಜಲದಲ್ಲಿ ನಿಂತು ದೊಡ್ಡ ತಪಸ್ಸನ್ನು ನಡೆಸುತಿದ್ದರು. ಈ ಕಾಲದಲ್ಲಿ ಅತ್ತಲಾಗಿ ಇವರ ತಂದೆಯಾದ ಪ್ರಾಚೀನಬರ್ಹಿಯು, ಕೇವಲ ಕರ್ಮಗಳಲ್ಲಿಯೇ ಆದರವುಳ್ಳವನಾಗಿ ಯಜ್ಞಯಾಗಾದಿಗಳನ್ನು ಶ್ರಮಪಟ್ಟು ನಡೆಸುತಿದ್ದನು.ಹೀಗಿರುವಲ್ಲಿ ಆತ್ಮಸ್ವರೂಪವನ್ನು ಚೆನ್ನಾಗಿ ತಿಳಿದ ನಾರದಮಹರ್ಷಿಯು,ಆ ರಾಜನಲ್ಲಿ ಕನಿಕರಗೊಂಡು, ಅವನಿಗೆ,ಜ್ಞಾನೋಪದೇಶವನ್ನು ಮಾಡಬೇಕೆಂಬ ಉದ್ದೇಶದಿಂದ ಅವನಲ್ಲಿಗೆ ಬಂದು ಹೀಗೆಂದು ಹೇಳುವನು. “ಓ ರಾಜೇಂದ್ರಾ ! ನೀನು ವಿಶೇಷವಾಗಿ ಯಜ್ಞಯಾಗಾದಿಗಳನ್ನು ನಡೆಸುತ್ತಿರುವೆಯಲ್ಲವೆ? ಯಾವ ಉದ್ದೇಶದಿಂದ ಇಷ್ಟೊಂದು ಕರ್ಮಗಳನ್ನು ನಡೆಸುತ್ತಿರುವೆಯೋ ಕಾಣೆನು ! ಲೋಕದಲ್ಲಿ, ದುಃಖನಿವೃತ್ತಿ, ಇಲ್ಲವೇ ಸುಖಪ್ರಾಪ್ತಿ, ಇವೆರಡರಲ್ಲಿ ಯಾವುದೋ ಒಂದನ್ನಪೇಕ್ಷಿಸಿ ಮನುಷ್ಯನು ಕಾರ್ಯಗಳನ್ನು ನಡೆಸಬೇಕು. ಈಗ ನೀನು ಕೇವಲಕರ್ಮಾಚರಣೆಯಲ್ಲಿ ವಹಿಸುತ್ತಿರುವ ಶ್ರಮದಿಂದ, ಅವೆರಡರಲ್ಲಿ ಯಾವ ಉದ್ದೇಶವೂ ನಿನಗೆ ಕೈಗೂಡುವಹಾಗೆ ತೋರಲಿಲ್ಲ!” ಎಂದನು. ಈ ಮಾತನ್ನು ಕೇಳಿದೊಡನೆ ರಾಜನು,ಹಿಂದುಮುಂದುತೋರದೆ ಚಿಂತಾಕುಲನಾಗಿ “ಓ ಮಹಾತ್ಮಾ!ನಿಜವು! ನನ್ನ ಮನಸ್ಸು ಕೇವಲಕರ್ಮಗಳಲ್ಲಿಯೇ ಪ್ರವರ್ತಿಸುತ್ತಿರುವುದು, ಅದಕ್ಕಿಂತಲೂ ಉತ್ತಮವಾದ ಶ್ರೇಯಃಕಾರಣವಾವುದೆಂಬುದನ್ನು ನಾನು ಕಾಣೆನು ಆದುದರಿಂದ, ಈಗ ನನಗೆ ಮನಶ್ಶುದ್ಧಿಯನ್ನುಂಟುಮಾಡತಕ್ಕುದಾಗಿಯೂ, ಉತ್ತಮಶ್ರೇಯಸ್ಸಿಗೆ ಕಾರಣವಾಗಿಯೂ ಇರುವ ಜ್ಞಾನ

ವನ್ನುಪದೇಶಿಸಿ, ನೀನೇ ನನ್ನನ್ನುದ್ಧರಿಸಬೇಕು. ಪ್ರವೃತ್ತಿಧರ್ಮಗಳಲ್ಲಿಯೇ ಮನಸ್ಸನ್ನೆಳೆಯತಕ್ಕ ಸಂಸಾರದಲ್ಲಿ ಸಿಕ್ಕಿ,ಮನೆ ಮಂದಿಮಕ್ಕಳೆಲ್ಲವೂ ತನ್ನದೆಂಬ ಮಮಕಾರದಿಂದ ಮೂಢಮನಸ್ಸುಳ್ಳ ನಾವು,ಶ್ರೇಯಸ್ಸುಗಳಲ್ಲಿಯಾವುದುತ್ತಮವೆಂಬುದನ್ನು ಹೇಗೆ ಬಲ್ಲೆವು?" ಎಂದನು. ಅದಕ್ಕಾ ನಾರದನು "ಎಲೈ ರಾಜೇಂದ್ರನೆ! ನೀನು ಪ್ರಜಾಪಾಲಕನಲ್ಲವೆ? ಪ್ರಾಣಿಗಳೆಲ್ಲವನ್ನೂ ದಯೆಯಿಂದ ಪೋಷಿಸಬೇಕಾದುದಲ್ಲವೇ ನಿನ್ನ ಕೃತ್ಯವು! ಹೀಗಿರುವಾಗಲೂ ನೀನು ಯಾಗಗಳೆಂಬ ನೆವದಿಂದ ಇದುವರೆಗೆ ಕೊಂದಿರುವ ಪಶುಗಳ ಸಂಖ್ಯೆಯನ್ನು ಎಣಿಸಿ ನೋಡು! ಸಾವಿರಾರು ಜೀವಗಳನ್ನು ಕೊಂದಿರುವುದರಿಂದ, ನೀನು ದಯಾಶೂನ್ಯನೆಂಬುದು ಚೆನ್ನಾಗಿ ಹೊರಪಡುವುದು. ಆ ಜೀವಗಳೆಲ್ಲವೂ ನೀನು ಮಾಡಿದ ಹಿಂಸೆಯನ್ನು ನೆನೆಸಿಕೊಂಡಾಗಲೆಲ್ಲಾ "ಈ ಪಾಪಿಯು ಯಾವಾಗ ಸಾಯುವನೋ" ಎಂದು ನಿನ್ನ ಸಾವನ್ನೇ ಇದಿರುನೋಡುತ್ತಿರುವುವು. ನೀನು ಸತ್ತೊಡನೆ ಅವೂ ನಿನ್ನ ಮೇಲೆ, ಹಿಂದಿನ ಕೋಪವನ್ನಿಟ್ಟು,ಉಕ್ಕಿನಂತೆ ಕಠಿನವಾದತಮ್ಮ ಕೊಂಬುಗಳಿಂದ ನಿನ್ನನು ತಿವಿದು ಹಿಂಸಿಸುವುದಕ್ಕಾಗಿ ಕಾದಿರುವುವು. ಈ ವಿಷಯದಲ್ಲಿ ನಿನಗೆ ಪುರಂಜನೋಪಾಖ್ಯಾನವೆಂಬ ಒಂದಾನೊಂದು ಕಥೆಯನ್ನು ನಿದರ್ಶನವಾಗಿ ಹೇಳುವೆನು ಕೇಳು! * ಪೂರ್ವದಲ್ಲಿ ಅನೇಕಸದ್ಗುಣಗಳಿಂದ ಬಹಳ ಕೀರ್ತಿಮಂತನಾದ ಪುರಂಜನವೆಂಬ ರಾಜನೊಬ್ಬನಿ

---

* ಲೋಕದಲ್ಲಿ ತತ್ವಜ್ಞಾನವಿಲ್ಲದೆ, ಉತ್ತಮಪುರುಷಾರ್ಥವಾವುದೆಂಬುದನ್ನೂ ತಿಳಿಯದೆ, ವಿಷಯಸುಖದಲ್ಲಿ ಮುಳುಗಿ, ಕರ್ಮಪ್ರವಣರಾದವರಿಗೆ ತತ್ವೋಪದೇಶವನ್ನುಮಾಡಿದರೆ, ಅವರ ಮನಸ್ಸಿಗೆ ಹಿಡಿಯಲಾರದೆಂಬ ಭಾವದಿಂದ ನಾರದನು ಕರ್ಮಾಸಕ್ತನಾದ ಪ್ರಾಚೀನಬರ್ಹಿರಾಜನಿಗೆ, ಈ ಪುರಂಜನೋಪಾಖ್ಯಾನವೆಂಬ ನೆವದಿಂದ ಅನ್ಯಾಪದೇಶವಾಗಿ ಆತ್ಮಪರಮಾತ್ಮಸಂಬಂಧವನ್ನೂ,ಅವರ ಸ್ವರೂಪವೈಲಕ್ಷಣ್ಯವನ್ನೂ ತಿಳಿಸುವನು. ಮನುಷ್ಯನಿಗೆ, ಹುಟ್ಟು, ಸಾವು, ಎಚ್ಚರ, ಕನಸು, ನಿದ್ರೆ, ಮುಂತಾದ ಒಂದೊಂದವಸ್ಥೆಗಳಲ್ಲಿಯೂ ಕೇವಲ ದುಃಖಪ್ರಚುರವಾದ ಸಂಸಾರದೋಷವನ್ನೂ ಇದರಿಂದ ತಿಳಿಸುವನು. ಇಲ್ಲಿ ಪುರಂಜನನೇ ಜೀವನು. ಅವನ ಪಟ್ಟಣವೇ ಶರೀರವು.ಅವನನ್ನು ಮೋಹಗೊಳಿಸಿದ ಸ್ತ್ರೀಯೇ ಬುದ್ಧಿ. ಅವಿಜ್ಞಾತನೆಂಬ ಅವನ ಮಿತ್ರನೇ ಜೀವ

ದ್ಧನು. ಅವನಿಗೆ ಪ್ರಸಿದ್ಧಚರಿತ್ರನಾದ ಅವಿಜ್ಞಾತನೆಂಬ ಮಿತ್ರನಿದ್ದನು. (ಅಂತರ್ಯಾಮಿಯಾದ ಪರಮಾತ್ಮನು ಜೀವಾತ್ಮನಿಗೆ ಹೇಗೋಹಾಗೆ) ಅವನು ಆ ರಾಜನಿಗೆ ಸರ್ವವಿಧದಲ್ಲಿಯೂ ಹಿತೈಷಿಯಾದ ಗೆಳೆಯನಾ

---

ನಿಗೆ ಹಿತೈಷಿಯಾದ ಪರಮಾತ್ಮನು. ಇದರಂತೆಯೇ ಅಲ್ಲಲ್ಲಿ ಪಟ್ಟಣದ ಸನ್ನಿವೇಶಗಳಿಗೂ, ಶರೀರೇಂದ್ರಿಯಪ್ರಾಣಾದಿಗಳಿಗೂ ಸರಿಹೋಲಿಸಿಕೊಳ್ಳಬೇಕು. ಮತ್ತು ಇಲ್ಲಿ ಪುರಂಜನನು ವಿಶಾಲವಾದ ಕೀರ್ತಿಯುಳ್ಳವನೆಂದರೆ "ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋವಿಜಿಘಿತ್ಸೋಽಪಿಪಾಸಸ್ಸತ್ಯಕಾಮಸ್ಸತ್ಯಸಂಕಲ್ಪೋ ನಿರಾಮಯಃ" "ಅಛೇದ್ಯೋಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯಏವಚ! ನಿತ್ಯಸ್ಸರ್ವಗತಃಸ್ಥಾಣು ರಚಲೋಽಯಂಸನಾತನಃ" ಎಂಬಂತೆ, ಜೀವನು ತನ್ನ ನಿಜಸ್ಥಿತಿಯಲ್ಲಿ ಕೇವಲ ಶುದ್ಧಸ್ವರೂಪವಾಗಿ, ದೋಷರಹಿತನಾಗಿ, ಅನೇಕಕಲ್ಯಾಣಗುಣಗಳಿಂದ ಪ್ರಸಿದ್ಧನಾದವನೆಂದು ಭಾವವು. ಪುರಂಜನನು ತನಗೆ ಹಿತೈಷಿಯಾದ ಮಿತ್ರನನ್ನು ಮರೆತು ಭೋಗಸ್ಥಾನವನ್ನು ಹುಡುಕುತಿದ್ದನೆಂದರೆ, ಜೀವನು ತನಗೆ ಉದ್ಧಾರಕನಾದ ಪರಮಾತ್ಮನನ್ನು ಮರೆತು, ಜನ್ಮಾಂತರಪ್ರಾಪ್ತಿಗೆ ಬೇಕಾದ ಕರ್ಮಗಳಲ್ಲಿ ಬಿದ್ದು, ಎಷ್ಟೆಷ್ಟೋ ಶರೀರಗಳಲ್ಲಿ ಪ್ರವೇಶಿಸಿಬಂದರೂ, ಎಲ್ಲಿಯೂ ನೆಮ್ಮದಿಯಿಲ್ಲದೆ ದುಃಖಿಸುತ್ತಿದ್ದುದಾಗಿಯೂ, ಕೊನೆಗೆ ಕರ್ಮಫಲದಿಂದ ಕೂಡಿದಮಟ್ಟಿಗೆ ಭೋಗಾನುಕೂಲವಾದ ಮನುಷ್ಯಶರೀರವನ್ನು ಪ್ರವೇಶಿಸಿದುದಾಗಿಯೂ ಭಾವವು. ಇದರಲ್ಲಿ ಶರೀರವೇ ಪಟ್ಟಣವು, ದೇಹದಲ್ಲಿರುವ ನವರಂಧ್ರಗಳೇ ಅದರ ನವದ್ವಾರಗಳು, ಮೈಮೇಲಿನ ಸಪ್ತತ್ವಕ್ಕುಗಳೆಂಬ ಏಳುಪರೆಗಳೂ ಏಳು ಸುತ್ತಿನ ಕೋಟೆಗಳು, ಭುಜಗಳೆರಡೂ ಅಟ್ಟಲೆಗಳು. ರಕ್ತನಾಡಿಗಳೇ ಅಗುಳು, ರೋಮಗಳೇ ಉಪವನವು. ರೋಮಕೂಪಗಳೇ ಗವಾಕ್ಷಗಳು. ಶರೀರವು ಸರ್ಪಾಕಾರವಾದ ನಾಡಿಗಳಿಂದ ತುಂಬಿರುವುದರಿಂದ, ಸರ್ಪರಾಜಧಾನಿಯಾದ ಭೋಗವತೀಪುರಕ್ಕೆ ಹೋಲಿಸಲ್ಪಟ್ಟಿರುವುದು. ಮತ್ತು ಈ ಶರೀರವೆಂಬ ಪಟ್ಟಣಕ್ಕೆ ಸತ್ವ. ರಜಸ್ಸು, ತಮಸ್ಸುಗಳೆಂಬ ಮೂರುಗುಣಗಳೇ ಬೆಳ್ಳಿ ಬಂಗಾರ ಕಬ್ಬಿಣದ ಮೂರುಶಿಖರಗಳು. ಮೂಲಾಧಾರಾದಿಚಕ್ರಗಳೇ ಬಳಮನೆಗಳು. ಹೃದಯವೇ ಸಭಾಮಂದಿರವು. ರಾಜನು ರಾಜಮಾರ್ಗದಿಂದ ಹೊರಟು ವಿಶ್ರಮಸ್ಥಾನವನ್ನು ಸೇರುವಂತೆ, ಜೀವನೂ ಸುಷುಮ್ನಾನಾಡಿಯಮಾರ್ಗವಾಗಿ ಮೋಕ್ಷವನ್ನು ಹೊಂದತಕ್ಕವನಾದುದರಿಂದ ಸುಷುಮ್ನಾನಾಡಿಯೇ ರಾಜಮಾರ್ಗವು. ಸುಷುಪ್ತಿಯಲ್ಲಿ ಜೀವನಿಗೆ ವಿಶ್ರಮಸ್ಥಾನವಾದ ಪುರೀತತ್ತೇ ವಿಶ್ರಾಂತಿಸ್ಥಾನವು. ಅಂಗೈ ಅಂಗಾಲುಗಳೇ ಪತಾಕೆಗಳು. ಹೀಗೆ ಅಲ್ಲಲ್ಲಿನ ಸನ್ನಿವೇಶಗಳನ್ನು ಹೋಲಿಸಿಕೊಳ್ಳಬೇಕು.

ಗಿದ್ದನು. ಬೇರೊಬ್ಬರಿಗೆ ತಿಳಿಯದಂತೆಯೇ ಇವನು ರಾಜನಿಗೆ ಬೇಕಾದ ಹಿತಕಾರ್ಯಗಳನ್ನು ನಡೆಸುತಿದ್ದುದರಿಂದ ಇವನು, ಅವಿಜ್ಞಾತನೆಂದು ಹೆಸರುಗೊಂಡಿದ್ದನು. ಆ ಪುರಂಜನನು ಶಬ್ದಾದಿವಿಷಯಸುಖಗಳನ್ನು ಅನುಭವಿಸುವುದರಲ್ಲಿ ಆಸೆಯುಳ್ಳವನಾಗಿ, ಅದಕ್ಕೆ ತಕ್ಕ ಒಂದು ಸ್ಥಳವನ್ನು ಹುಡುಕುವಪ್ರಯತ್ನದಲ್ಲಿ, ಭೂಮಿಯೆಲ್ಲವನ್ನೂ ಸುತ್ತಿ, ಅನುಕೂಲವಾದ ಸ್ಥಳವು ಎಲ್ಲಿಯೂ ಸಿಕ್ಕದುದರಿಂದ ದುಃಖಿಸುತಿದ್ದನು. ಭೂಮಿಯಲ್ಲಿರುವ ಎಲ್ಲಾ ಪಟ್ಟಣಗಳನ್ನೂ ಸುತ್ತಿ ನೋಡಿದರೂ, ಅವನಿಗೆ ಯಾವುದೂ ಮನಸ್ಸಿಗೆ ಒಪ್ಪಲಿಲ್ಲ. ಆಮೇಲೆ ಒಂದಾನೊಂದು ಕಾಲದಲ್ಲಿ, ಹಿಮವತ್ಪರ್ವತದ ದಕ್ಷಿಣಪ್ರಾಂತದಲ್ಲಿ ಒಂಭತ್ತು ಬಾಗಿಲುಗಳುಳ್ಳ, ಸರ್ವಲಕ್ಷಣಸಂಪನ್ನವಾದ ಒಂದು ಪಟ್ಟಣವನ್ನು ಕಂಡನು. ಆ ಪಟ್ಟಣವು, ಕೋಟೆಗಳು, ಉಪವನಗಳು, ಮೇಲುಮನೆಗಳು, ಅಗುಳುಗಳು, ಗವಾಕ್ಷಗಳು,ಗೋಪುರಗಳು, ಬೆಳ್ಳಿ ಬಂಗಾರ,ಕಬ್ಬಿಣಗಳಿಂದ ಮಾಡಿದ ಮೂರು ಶಿಖರಗಳು, ಉಪ್ಪರಿಗೆಯ ಮನೆಗಳು, ಇಂದ್ರನೀಲ,ಸ್ಫಟಿಕ, ವೈಡೂರ್ಯ, ಮುತ್ತು,ಮರಕತ, ಪದ್ಮರಾಗ ಮುಂತಾದ ರತ್ನಗಳಿಂದ ಕೆತ್ತಲ್ಪಟ್ಟ ಒಳಮನೆಗಳು, ಇವೇ ಮೊದಲಾದ ಸಕಲಸಮೃದ್ಧಿಯಿಂದ ತುಂಬಿ, ಪಾತಾಳದಲ್ಲಿರುವ ಸರ್ಪರಾಜಧಾನಿಯಾದ ಭೋಗವತೀಪಟ್ಟಣದಂತೆ ಶೋಭಿಸುತಿತ್ತು. ಮತ್ತು ಅದರ ನಡುವೆ ಸಭಾಮಂಟಪವೂ, ಅಲ್ಲಲ್ಲಿ ನಾಲ್ಕು ಬೀದಿಗಳು ಸೇರುವ ಚೌಕಗಳೂ, ಅಲ್ಲಲ್ಲಿ ಕ್ರೀಡಾಸ್ಥಾನಕ್ಕೆ ತಂದು ಸೇರಿಸುವ ರಾಜಮಾರ್ಗಗಳೂ, ಅಲ್ಲಲ್ಲಿ ಅಂಗಡಿಗಳೂ, ಅಲ್ಲಲ್ಲಿ ವಿಶ್ರಮಸ್ಥಾನಗಳೂ, ಅಲ್ಲಲ್ಲಿ ಹವಳದ ಜಗುಲಿಗಳೂ, ಅಲ್ಲಲ್ಲಿ ಧ್ವಜಪತಾಕೆಗಳೂ ಶೋಭಿಸುತಿದುವು. * ಆ ಪಟ್ಟಣದಹೊರಗೆ,ಅಂದವಾದ ಗಿಡ(ಬಳ್ಳಿ)

---

* ಇಲ್ಲಿ ಪಟ್ಟಣದ ಹೊರಗಿನ ಉದ್ಯಾನವೆಂದರೆ, ಜೀವನಿಗೆ ಇಂದ್ರಿಯಗಳನ್ನು ತೃಪ್ತಿಪಡಿಸತಕ್ಕ ಹೊರಗಿನ ಶಬ್ದಾದಿವಿಷಯಗಳೆಂದರ್ಥವು. ಇದಕ್ಕಾಗಿಯೇ ಕ್ರಮವಾಗಿ ಆ ಉದ್ಯಾನವರ್ಣನೆಯಲ್ಲಿ, ಶಬ್ದ,ರೂಪ, ರಸ, ಗಂಧ, ಸ್ಪರ್ಶಗಳೆಂಬ ವಿಷಯಸುಖಗಳು ಪ್ರಶಂಸೆಮಾಡಲ್ಪಟ್ಟಿವೆ. ಮತ್ತು ತೋಟದ ಮೃಗಗಳೆಂದರೆ ಬಂಧುವರ್ಗದವರೆಂದೂ, ದಾರಿಗರೆಂದರೆ ವಿರಕ್ತರೆಂದೂ ಗ್ರಾಹ್ಯವು. ರಾಜನು ಇಲ್ಲಿ ಪರಿ

ಗಳಿಂದ ತುಂಬಿ, ಪಕ್ಷಿಗಳ ಮಧುರಧ್ವನಿಗಳಿಂದಲೂ, ಭ್ರಮರಝೇಂಕಾರ ಗಳಿಂದಲೂ ಕೂಡಿದ ಅನೇಕಸರೋವರಗಳುಳ್ಳ ಒಂದಾನೊಂದು ಉದ್ಯಾನವನವಿದ್ದಿತು. ಆ ಉದ್ಯಾನದಲ್ಲಿ ಶೀತಳವಾದ ಅನೇಕನದಿಗಳು ಜಲಸಮೃದ್ಧವಾಗಿ ಪ್ರವಹಿಸುತಿದ್ದುವು. ಆ ನದಿಯಮೇಲಿಂದ ಬೀಸಿ ಬರುವ ತಂಗಾಳಿಯು, ಶೀತಲವಾದ ಜಲಬಿಂದುಗಳೊಡನೆಯೂ, ಪುಷ್ಪವಾಸನೆಗಳೊಡನೆಯೂಕೂಡಿ,ಮನಸ್ಸಿಗೆ ಆಹ್ಲಾದವನ್ನುಂಟುಮಾಡುತಿತ್ತು. ಮತ್ತು ಅಲ್ಲಿ ಯಾವ ಕಡೆಯಲ್ಲಿ ನೋಡಿದರೂ ಚಿಗುರಿದ ವೃಕ್ಷಗಳೂ, ಅರಳಿದ ತಾವರೆಗಗೂ ಕಂಗೊಳಿಸುತಿದ್ದುವು. ಅಲ್ಲಿ ಹಲವುಬಗೆಯ ಕಾಡುಮೃಗಗಳು ಗುಂಪುಗುಂಪಾಗಿ ಸಂಚರಿಸುತಿದ್ದರೂ, ಮತ್ತೊಬ್ಬರಿಗೆ ಹಿಂಸೆಯನ್ನು ಮಾಡದೆ, ಋಷಿಗಳಂತೆ ಶಾಂತವಾಗಿದ್ದುವು. ಮಾರ್ಗಸ್ಥರನ್ನು ಕೂಗಿ ಕರೆಯುವಂತೆ ಅಲ್ಲಲ್ಲಿ ಕೋಗಿಲೆಗಳು ಕಿವಿಗಿಂಪಾಗಿ ಕೂಗುತ್ತಿದ್ದುವು. ಇಂತಹ ಉದ್ಯಾನವನವನ್ನು ಸುತ್ತಿ ನೋಡುತ್ತಿರುವಾಗ, ಅಲ್ಲಿ ಆ ರಾಜನ ಕಣ್ಣಿಗೆ ಒಂದಾನೊಂದು ಸ್ತ್ರೀವ್ಯಕ್ತಿಯು ಗೋಚರಿಸಿದಳು. ಹತ್ತುಮಂದಿ ಭೃತ್ಯರು ಅವಳನ್ನು ಸುತ್ತಿಮುತ್ತಿ ಉಪಚರಿಸುತಿದ್ದರು. ಆ ಒಬ್ಬೊಬ್ಬ ಭೃತ್ಯನಿಗೂನೂರುಮಂದಿ ಸಣ್ಣಾಳುಗಳು ಹೇಳಿದ ಕೆಲಸವನ್ನು ಮಾಡುವುದಕ್ಕೆ ಸಿದ್ಧರಾಗಿದ್ದರು. ಮತ್ತು ಐದುಹೆಡೆಯುಳ್ಳ ಒಂದಾನೊಂದು ಮಹಾಸರ್ಪವು ಅವಳಿಗೆ ಕಾವಲಾಗಿ ಮುಂದೆ ಬರುತಿತ್ತು. ಅವಳ ದೇಹದಲ್ಲಿ ಹೊಸಯೌವನವು ಉಕ್ಕುತಿತ್ತು.!ಅವಳಿಗೆ ಕಾಮರೂಪವನ್ನು ಹೊಂದತಕ್ಕ ಶಕ್ತಿಯಿದ್ದಿತು. ಆ ಸುಂದರೀಮಣಿಯು ತನಗೆ ತಕ್ಕ ಪತಿಯನ್ನು ಹುಡುಕುತ್ತ ಬರುತಿದ್ದಳು.

---

ಪಾರಸಹಿತವಾದ ಸ್ತ್ರೀವ್ಯಕ್ತಿಯನ್ನು ಕಂಡನೆಂದರೆ, ಹತ್ತು ಇಂದ್ರಿಯಗಳಿಂದಲೂ ನೂರಾರುಬಗೆಯ ಇಂದ್ರಿಯವ್ಯಾಪಾರಗಳಿಂದಲೂ ಕೂಡಿ, ಪಂಚವೃತ್ತಿಗಳುಳ್ಳ ಪ್ರಾಣದಿಂದ ರಕ್ಷಿತವಾದ ಬುದ್ಧಿಯು, ಅವನಿಗಿದಿರಾಯಿತೆಂದು ಭಾವವು. ಬುದ್ಧಿಯು ಪ್ರಾಣಾಯತ್ತವಾದ ಪ್ರವೃತ್ತಿಯುಳ್ಳುದಾದುದರಿಂದಲೂ, ಆ ಬುದ್ಧಿಯನ್ನನುಸರಿಸಿ ಇಂದ್ರಿಯವೃತ್ತಿಗಳೆಲ್ಲವೂ ಹೋಗುವುದರಿಂದಲೂ, ಪ್ರಾಣವನ್ನು ಮುಂದೆ ಹೋಗುವ ಸರ್ಪಕ್ಕೂ, ಇಂದ್ರಿಯವೃತ್ತಿಗಳನ್ನು ಹಿಂಬಾಲಿಸಿ ಬರುವ ಅನುಚರರಿಗೂ ಹೋಲಿಸಿದೆ.

ಆಕೆಯ ದಿವ್ಯಸೌಂದರ್ಯವನ್ನು ಕೇಳಬೇಕೆ?ಎಸಳಾದ ಮೂಗು!ಅಂದವಾದ ಹಲ್ಲುಗಳು!ಎಳವಯಸ್ಸು! ನುಣುಪಾದ ಕೆನ್ನೆಗಳು! ಮನೋಹರವಾದ ಮುಖಕಾಂತಿ! ಕಿವಿಗಳಲ್ಲಿ ರತ್ನಕುಂಡಲಗಳ ಕಾಂತಿ ! ನಡುವಿನಲ್ಲಿ ಬಂಗಾರದ ಬಣ್ಣವುಳ್ಳ ಪಟ್ಟೆಮಡಿ ! ಶ್ಯಾಮಲವಾದ ದೇಹಕಾಂತಿ ! ನಡುವಿನಲ್ಲಿ ಸುವರ್ಣಮಯವಾದ ಡಾಬು! ಕಾಲುಗಳಲ್ಲಿ ಘುಲ್ಘುಲನೆ ಧ್ವನಿಮಾಡುತ್ತಿರುವ ಕಾಲಂದುಗೆಗಳು ! ಇಂತಹ ದಿವ್ಯಸೌಂದರ್ಯವುಳ್ಳ ಆಕೆಯು ದೇವತಾಸ್ತ್ರೀಯಂತೆಯೇ ಶೋಭಿಸುತಿದ್ದಳು. ಸಮನಾಗಿಯೂ, ದುಂಡಾಗಿಯೂ, ಒತ್ತಾಗಿಯೂ ಇದ್ದ ಆಕೆಯ ಸ್ತನದ್ವಯವು, ಅವಳ ಯೌವನಾವಿರ್ಭಾವವನ್ನು ಮೇಲೆತ್ತಿ ತೋರಿಸುವಂತಿದ್ದಿತು. ಆಗಾಗ ಗಾಳಿಯಿಂದ ಹಾರುತ್ತಿರುವ ಆ ಸ್ತನದ ಮೇಲಿನ ಸೆರಗನ್ನು, ನಾಚಿಕೆಯಿಂದ ಮುಂದಕ್ಕೆಳೆದು ಹೊದ್ದಿಸುತ್ತ, ಮದದಾನೆಯಂತೆ ಮಂದಗಾಮಿನಿಯಾಗಿ ಸಂಚರಿಸುತ್ತಿದ್ದ ಆ ನಾರೀಮಣಿಯು, ಪ್ರೀತಿಸೂಚಕವಾದ ಹುಬ್ಬಿನಾಟಗಳೊಡನೆ ಈ ರಾಜನನ್ನು ತನ್ನ ಕಡೆಗಣ್ಣಿನಿಂದ ನೋಡಿದಳು.ಆ ತರುಣಿಯು ಲಜ್ಜೆಯನ್ನು ಸೂಚಿಸತಕ್ಕ ಮಂದಹಾಸದೊಡನೆ ತನ್ನ ಕಡೆಗೆ ದೃಷ್ಟಿಯಿಟ್ಟು ನೋಡುವುದನ್ನು ಕಂಡು, ಪುರಂಜನನು, ಅವಳನ್ನು ಪ್ರಶ್ನಮಾಡುವನು, “ಎಲೆ ಪದ್ಮಾಕ್ಷಿ! ನೀನೆಲ್ಲಿಯವಳು? ಯಾವ ಕುಲದವಳು? ಯಾರ ಮಗಳು? ಎಲ್ಲಿಂದ ಬರುತ್ತಿರುವೆ? ಈ ಪಟ್ಟಣದ ಸಮೀಪದಲ್ಲಿ ನೀನು ಸಂಚರಿಸುತ್ತಿರುವ ಉದ್ದೇಶವೇನು? ನಿನ್ನ ವೃತ್ತಾಂತವನ್ನು ನನಗೆ ತಿಳಿಸಬೇಕು. ನಿನ್ನನ್ನು ಹಿಂಬಾಲಿಸಿ ಬರುತ್ತಿರುವ ಈ ಹನ್ನೊಂದುಮಂದಿ ಭೃತ್ಯರು ಎಲ್ಲಿಯವರು? ಓ ಸುಭ್ರೂ! ನಿನಗೆ ಕಾವಲಾಗಿ ಬರುತ್ತಿರುವ ಆ ಸರ್ಪವಾವುದು ? ಎಲೆ ಸುಂದರೀ! ಯಾವನ ಪಾದಪದ್ಮಗಳನ್ನು ನೋಡುವುದರಿಂದ ಸರ್ವಾಭೀಷ್ಟಗಳೂ ಕೈಗೂಡಿಬರುವುವೋ, ಅಂತಹ ಪರಮಪುರುಷನನ್ನು ನಾಥನನ್ನಾಗಿ ಪಡೆಯುವುದಕ್ಕೆ ಯತ್ನಿಸುವ ಮಹರ್ಷಿಯಂತೆ, ನೀನು ಏಕಾಕಿನಿಯಾಗಿ ನಿರ್ಜನವಾದ ಈ ವನದಲ್ಲಿ ಸಂಚರಿಸುತ್ತಿರುವುದೇಕೆ? ಒಂದುವೇಳೆ ನೀನು ಆ ವರಾಹಮೂರ್ತಿಯನ್ನು ಹುಡುಕುವುದಕ್ಕಾಗಿ ಬಂದ ಭೂದೇವಿಯಾಗಿರಬಹುದೆ?ಅಥವಾ ರುದ್ರನನ್ನು ಹುಡುಕು

ವುದಕ್ಕೆ ಬಂದ ಪಾರ್ವತಿಯೋ ! ಅಥವಾ ವಿಷ್ಣುಮೂರ್ತಿಯನ್ನು ಹುಡು ಕುವುದಕ್ಕಾಗಿ ಬಂದ ಲಕ್ಷ್ಮೀದೇವಿಯೇ ನೀನಾಗಿರಬಹುದೆ? ನೀನು ಲಕ್ಷ್ಮಿ ಯಾಗಿದ್ದಪಕ್ಷದಲ್ಲಿ ನಿನ್ನ ಕೈಯಲ್ಲಿ ಕಮಲವಿರಬೇಕಲ್ಲವೆ ? ಆ ಕಮಲವ ನ್ನು ಎಲ್ಲಿ ಬಿಟ್ಟುಬಂದೆ ? ಓ ಸುಂದರಾಂಗೀ ! ಆದರೆ ದೇವ ಸ್ತ್ರೀಯರು ಯಾರೂ ನೆಲವನ್ನು ಸ್ಪರ್ಶಿಸಲಾರರು ? ನೀನು ನೆಲದ ಮೇಲೆಯೇ ನಿಂತಿರುವುದರಿಂದ, ದೇವತಾಸ್ತ್ರೀಯರಲ್ಲಿ ಸೇರಿದವಳಲ್ಲ ವೆಂದೇ ಎಣಿಸಬೇಕಾಗಿದೆ. ಮನುಷ್ಯಸ್ತ್ರೀಯಾಗಿಯೇ ಇರಬೇಕು. ಶ್ರೀಮನ್ನಾರಾಯಣನೊಡನೆ ವೈಕುಂಠದಲ್ಲಿ ನೆಲೆಗೊಂಡ ಆ ಮಹಾಲಕ್ಷ್ಮಿ ಯಂತೆ,*ವೀರಶ್ರೇಷ್ಠನಾದ ನನ್ನೊಡನೆ ಸೇರಿ ಈ ಪಟ್ಟಣವನ್ನಲಂಕರಿಸು ವುದಕ್ಕೋಸ್ಕರವೇ ನೀನು ಬಂದಂತೆ ತೋರುವುದು! ಎಲೆ!ನಾರೀಮಣಿ!ನಿನ್ನ ಕಡೆಗಣ್ಣಿನ ನೋಟದಿಂದ ಮೊದಲೇ ನನ್ನ ಮನಸ್ಸು ಕದಲಿ ಹೋಗಿರು ವುದು. ಹೀಗೆ ಮೊದಲೇ ಧೈರ್ಯಗೆಟ್ಟ ನನ್ನನ್ನು ಈ ನಿನ್ನ ಮುಗುಳ್ನಗೆ ಯಿಂದಲೂ, ಈ ನಿನ್ನ ಪ್ರೇಮಸೂಚಕವಾದ ಲಜ್ಜೆಯಿಂದಲೂ, ಕಾಮ ವಿಕಾರವನ್ನು ಸೂಚಿಸತಕ್ಕ ನಿನ್ನ ಹುಬ್ಬಿನಾಟಗಳಿಂದಲೂ ಪ್ರೇರಿತನಾ ದ ಮನ್ಮಥನು, ಇನ್ನೂ ಬಹಳವಾಗಿ ಬಾಧಿಸುತ್ತಿರುವನು. ಆದುದರಿಂದ ನೀನು ನನ್ನಲ್ಲಿ ಅನುಗ್ರಹಿಸಬೇಕು. ಓ ಸಾರಸಾಕ್ಷಿ ! ಅಂದವಾದ ಹು ಬ್ಬುಗಳಿಂದಲೂ, ಮನೋಹರವಾದ ಕರಿಯಾಲೆಗಳಿಂದಲೂ,ನೀಲಕುಂತಲ ಗಳಿಂದಲೂ, ಮೃದುವಾಕ್ಯದಿಂದಲೂ,ಮಂದಹಾಸದಿಂದಲೂ ಶೋಭಿಸು ತ್ತ, ಲಜ್ಜೆಯಿಂದ ಹಿಂತಿರುಗುತ್ತಿರುವ ನಿನ್ನ ಮುಖಬಿಂಬವನ್ನು ನನ್ನ ಕಡೆ ಗೆ ತಿರುಗಿಸು ! ಎಲೈ ಮಂಗಳಾಂಗಿ ! ನನ್ನಲ್ಲಿ ಕೃಪೆಮಾಡು" ಎಂದನು. ಹೀಗೆ ಇಂದ್ರಿಯಗಳಿಗೆ ವಶನಾಗಿ ದೈನ್ಯದಿಂದ ಯಾಚಿಸುತ್ತಿರುವ ಪುರಂಜನ ನನ್ನು ನೋಡಿ ಆ ತರುಣಿಯು,ಅವನನ್ನು ಮತ್ತಷ್ಟು ಮರುಳುಗೊಳಿಸುವಂತೆ, ತಾನೂ ಪ್ರೀತಿಯನ್ನು ತೋರಿಸುತ್ತ, ಹೀಗೆಂದು ಪ್ರತ್ಯುತ್ತರವನ್ನು ಕೊ

* ಇದರಿಂದ ಜೀವನು, ತನ್ನೊಡನೆ ಶರೀರವನ್ನು ಪ್ರವೇಶಿಸಿ, ಸುಖಾನುಭವಕ್ಕೆ ಸಹಕರಿಸಬೇಕೆಂದು ಬುದ್ಧಿಯನ್ನು ಪ್ರೇರಿಸಿದುದಾಗಿ ಭಾವವು.

ಡುವಳು. * “ಓ ರಾಜೇಂದ್ರಾ! ನನ್ನನ್ನಾಗಲಿ, ನಿನ್ನನ್ನಾಗಲಿ, ಯಾವನು ಸೃಷ್ಟಿಸಿದನೋ, ನಮಗೆ ಈ ಹೆಸರನ್ನೂ, ಈ ಕುಲವನ್ನೂ ಯಾವನು ಕಲ್ಪಿಸಿದನೋ, ಅದೊಂದನ್ನೂ ನಾವು ಕಾಣೆವು. ಇದೋ ! ಈಗ ಈ ಪಟ್ಟಣದಲ್ಲಿರುವ ನಿನ್ನನ್ನು ನಾನೂ, ನನ್ನನ್ನು ನೀನೂ ನೋಡುತ್ತಿರುವೆವೇ!ಹೊರತು, ಈ ಪುರವನ್ನು ನಿರ್ಮಿಸಿದವನಾವನೋ, ಅದನ್ನೂ ನಾವು ಕಾಣೆವು. ನಮ್ಮಿಬ್ಬರನ್ನೂ,ನಮ್ಮಿಬ್ಬರ ವಾಸಸ್ಥಾನಕ್ಕಾಗಿ ಈ ಪಟ್ಟಣವನ್ನೂ ನಿರ್ಮಿಸಿದಬೇರೆಯಾವ ಪುರುಷನುಂಟೋ,ಅವನ ಸ್ವರೂಪವೇ ನಮಗೆ ತಿಳಿಯಲಾರದು. ರಾಜೇಂದ್ರಾ!ಈಹನ್ನೊಂದುಮಂದಿ ಮಹಾಭಟರೂ,ಈಸ್ತ್ರೀಯರೂ, ನನ್ನ ಸ್ನೇಹಿತರು!ಮತ್ತು ನನಗೆ ಉಪಚಾರಮಾಡತಕ್ಕವರು,ಐದು ಹೆಡೆಯುಳ್ಳ ಈ ಸರ್ಪರಾಜನು ನಾನು ಮಲಗುವ ಕಾಲದಲ್ಲಿ ಈ ಪುರವನ್ನು ಪಾಲಿಸುತ್ತ ಎಚ್ಚರಗೊಂಡಿರುವನು.ರಾಜಾ! ನೀನು ದೈವವಶದಿಂದ ಈ ಪಟ್ಟಣಕ್ಕೆ ಬಂದಿರುವೆ! ನಿನಗೆ ಶುಭವಾಗಲಿ!ನೀನು ಇದರಲ್ಲಿ ಬೇಕುಬೇಕಾದ ವಿಷಯಸುಖಗಳನ್ನನುಭವಿಸಬಹುದು. ನಾನೂ, ಈ ನನ್ನ ಮಿತ್ರರೊಡನೆ ನಿನಗೆ ಗ್ರಾಮ್ಯಸುಖಗಳನ್ನು ಒದಗಿಸಿಕೊಡುವೆನು. ನೀನು ಆ ಸುಖಗಳನ್ನನುಭವಿಸುತ್ತ,ನವದ್ವಾರವುಳ್ಳ ಈ ಪುರದಲ್ಲಿ†ನೂರುಸಂವತ್ಸರಗಳವರೆಗೆ ವಾಸಮಾಡುತ್ತಿರಬಹುದು! ರಾಜೇಂದ್ರಾ! ನಿನ್ನಂತವನನ್ನು ಬಿಟ್ಟು ನಾನು ಬೇರೆ ಯಾರೊಡನೆ ರಮಿಸಲಿ!‡ವಿಷಯಸುಖವನ್ನೂ ತಿಳಿಯದೆ,ಮರಣಕ್ಕೂ ಭಯಪಡದೆ,ಕಾಲಾಂತರದಲ್ಲಿ ಪಡೆಯಬಹುದಾದ ಸ್ವರ್ಗಾದಿಸುಖಗಳಲ್ಲಿಯೂ ಆಸೆಯಿಲ್ಲದೆ,ಪಶುಪ್ರಾಯರಾಗಿರುವ ವಿರಕ್ತರು,ನನ್ನನ್ನು ಲಕ್ಷ್ಯ

---

* ಇದರಿಂಗ ಕಾಮಾಸಕ್ತರಿಗೆ ಪರಮಾತ್ಮಸ್ವರೂಪಜ್ಞಾನವು ತಪ್ಪಿಹೋಗುವುದೆಂದು ಭಾವವು.

† ಇದರಿಂದ ಮನುಷ್ಯಶರೀರಕ್ಕೆ ಆಯುಃಪರಿಮಾಣವು ನೂರುವರ್ಷಗಳೆಂದು ಸೂಚಿತವಾಗುವುದು.

‡ ಇದರಿಂದ ಕಾಮ್ಯಕರ್ಮಗಳಲ್ಲಿ ಬಿದ್ದವರೇ ಬುದ್ಧಿಮೋಹಕ್ಕೆ ವಶರಾಗುವರೇಹೊರತು, ವಿರಕ್ತರು ಅದಕ್ಕೆ ವಶರಾಗುವವರಲ್ಲವೆಂದು ಭಾವವು.

ಮಾಡರು ? ಅಂತವರಲ್ಲಿ ನನಗೆತಾನೆ ಹೇಗೆ ಅನುರಾಗವುಂಟಾಗುವುದು ? ಅವರಿಂದ ನನಗೂ, ನನ್ನಿಂದ ಅವರಿಗೂ ಆಗಬೇಕಾದುದೇನೂ ಇಲ್ಲ ! ಧರ್ಮವೆಂದರೆ ಫಲಾಪೇಕ್ಷೆಯಿಂದನಡೆಸತಕ್ಕ ಪ್ರವೃತ್ತಿಧರ್ಮವೇ ಧರ್ಮವು! ಈ ಪ್ರವೃತ್ತಿಮಾರ್ಗದಲ್ಲಿ ಧರ್ಮಾರ್ಥ ಕಾಮಗಳೆಂಬ ಪುರುಷಾರ್ಥಗಳೂ, ಸಂತಾನಸುಖವೂ, ಮೋಕ್ಷವೂ, ಕೀರ್ತಿಯೂ, ನಿರುಪದ್ರವಗಳಾದ ಪುಣ್ಯಲೋಕಗಳೂ ಲಭಿಸುವುವು. ನಿವೃತ್ತಿಮಾರ್ಗದಲ್ಲಿ ಬಿದ್ದವರು ಈ ಸುಖವೊಂದನ್ನೂ ಕಾಣರು ! ಪಿತೃದೇವತೆಗಳಿಗೂ, ದೇವತೆಗಳಿಗೂ, ಋಷಿಗಳಿಗೂ,ಮನುಷ್ಯರಿಗೂ ಇತರಭೂತಗಳಿಗೂ ಗೃಹಸ್ಥಧರ್ಮವೇಕ್ಷೇಮಕರವೆಂದು ಹಿರಿಯರು ಹೇಳುವರು. ಎಲೈವೀರಾಗ್ರಣೀ! ಲೋಕಪ್ರಸಿದ್ಧನಾಗಿಯೂ, ಉದಾರನಾಗಿಯೂ, ನೇತ್ರಾನಂದಕರನಾಗಿಯೂ ಇರುವ ನಿನ್ನಂತಹ ಪತಿಯು ತಾನಾಗಿ ಬಂದಾಗ,ನನ್ನಂತವಳು ಯಾವಳುತಾನೇ ವರಿಸದೆ ಬಿಡುವಳು?ಹೇ ಮಹಾಬಾಹೂ!ಸರ್ಪದೇಹದಂತಿರುವ ಈ ನಿನ್ನ ತೋಳುಗಳಲ್ಲಿ ಯಾವಸ್ತ್ರೀಯ ಮನಸ್ಸು ತಾನೇ ಆಸಕ್ತವಾಗದು ? ದಯಾಳುವಾದ ನೀನು ನಿನ್ನ ಪ್ರಸನ್ನ ದೃಷ್ಟಿಯಿಂದ ನನ್ನಂತಹ ದುಃಖಿತರ ಕಷ್ಟವನ್ನು ನೀಗಿಸಬೇಕೆಂಬ ಉದ್ದೇಶದಿಂದಲೇ ಸಂಚರಿಸುವಂತಿದೆ!" ಎಂದಳು. ಈ ಸಂಭಾಷಣಗಳು ನಡೆದಮೇಲೆ,ಆ ಸ್ತ್ರೀಪುರುಷರಿಬ್ಬರೂ,ಒಬ್ಬರಿಗೊಬ್ಬರುಅನುಕೂಲವಾದ ಒಪ್ಪಂದವನ್ನು ಮಾಡಿಕೊಂಡು, ಆ ಪಟ್ಟಣದಲ್ಲಿ ಸೇರಿ ನೂರುವರ್ಷಗಳವರೆಗೆ ಸಂತೋಷದಿಂದ ವಿಹರಿಸುತಿದ್ದರು. * ಪುರಂಜನನು ಹೊಗಳುಭಟರ ಮುಖಸ್ತುತಿಗೆ ಹಿಗ್ಗುತ್ತ, ಸ್ತ್ರೀಯರೊಡಗೂಡಿ ಅಲ್ಲಲ್ಲಿ ವಿಹರಿಸುತಿದ್ದನು. † ಜ್ಯೇಷ್ಠಮಾಸದಲ್ಲಿ ಆಗಾಗ ಜಲಕ್ರೀಡೆಗಾಗಿ ನಿರ್ಮ

---

* ಇಲ್ಲಿ ಜೀವಪರವಾಗಿ ಹೊಗಳುಭಟರೆಂದರೆ ಮನಸ್ಸನ್ನಾಕರ್ಷಿಸತಕ್ಕ ಶಬ್ದಾದಿವಿಷಯಗಳು. ಸ್ತ್ರೀಯರೆಂದರೆ ಇಂದ್ರಿಯವೃತ್ತಿಗಳು. ಇದರಿಂದ ಜೀವನು ಜಾಗ್ರದವಸ್ಥೆಯಲ್ಲಿ ಇಂದ್ರಿಯವಶನಾಗಿ ವಿಷಯಸುಖವನ್ನನುಭವಿಸುವನೆಂದು ಭಾವವು.

† ಜ್ಯೇಷ್ಠದಲ್ಲಿ ನದೀಪ್ರವೇಶಮಾಡುವನೆಂಬುದರಿಂದ, ಜೀವನಿಗೆ ಸುಷುಪ್ತಿದಶೆದಲ್ಲಿ ಪುರೀತತ್ತೆಂಬ ನಾಡಿಯೇ ವಿಶ್ರಮಸ್ಥಾನವೆಂದು ಭಾವವು. ಸುಷುಪ್ತಿಯಲ್ಲಿ ಜೀವ

ಲವಾದ ನದಿಯಲ್ಲಿಳಿದು ಶ್ರಮಪರಿಹಾರಮಾಡಿಕೊಳ್ಳುತಿದ್ದನು.ಓ ಪ್ರಾಚೀನಬರ್ಹಿ! ಇನ್ನು ಆ ಪಟ್ಟಣದ ಸನ್ನಿವೇಶಗಳನ್ನು ತಿಳಿಸುವೆನು ಕೇಳು! *ಅಲ್ಲಿಂದ ರಾಜನು ಆಗಾಗ ಇತರದೇಶಗಳಿಗೆ ಹೋಗಿಬರುವುದಕ್ಕಾಗಿ ಆ ಪಟ್ಟಣಕ್ಕೆ ಮೇಲುಗಡೆಯಲ್ಲಿ ಏಳುಬಾಗಿಲುಗಳೂ,ಕೆಳಗಡೆಯಲ್ಲಿ ಎರಡು ಬಾಗಿಲುಗಳೂ ಏರ್ಪಟ್ಟಿದ್ದುವು. ಮೇಲಿನ ಏಳುದ್ವಾರಗಳಲ್ಲಿ ಐದು ಪೂರ್ವಾಭಿಮುಖವಾಗಿಯೂ,ಒಂದು ದಕ್ಷಿಣಾಭಿಮುಖವಾಗಿಯೂ, ಮತ್ತೊಂದು ಉತ್ತರಾಭಿಮುಖವಾಗಿಯೂ ಇರುವುವು. ಮತ್ತೆರೆಡು ದ್ವಾರಗಳು ಪಶ್ಚಿಮಾಭಿಮುಖವಾಗಿರುವುವು. ಅವುಗಳ ಹೆಸರನ್ನು ಹೇಳುವೆನು ಕೇಳು ! ಪೂರ್ವದ್ವಾರಗಳಲ್ಲಿ ಖದ್ಯೋತೆಯೆಂದೂ, ಆವಿರ್ಮುಖಿಯೆಂದೂ ಎರಡುಬಾಗಿಲುಗಳು ಒಂದು ಸಾಲಿನಲ್ಲಿರುವುವು. ರಾಜನು ದ್ಯುಮಂತನೆಂಬ ತನ್ನ ಸಹಾಯಕನೊಡಗೂಡಿ, ಆ ಎರಡು ಬಾಗಿಲುಗಳಿಂದ ಹೊರಟು, ವಿಭ್ರಾಜಿತವೆಂಬ ದೇಶಕ್ಕೆ ಹೋಗಿ ಬರುವನು. ನಲಿನಿ, ಮತ್ತು ನಾಳಿನಿಯೆಂಬ ಮತ್ತೆರಡು ಪೂರ್ವದ್ವಾರಗಳು ಮತ್ತೊಂದು ಸಾಲಿನಲ್ಲಿ ಏರ್ಪಟ್ಟಿರುವುವು. ಪುರಾಧಿಪತಿಯು ಅವಧೂತನೆಂಬ ಮಿತ್ರನೊಡನೆ,ಆ ದ್ವಾರಗಳಿಂದ ಹೊರಟು,ಸೌರಭವೆಂಬ ಪುರಕ್ಕೆ ಹೋಗಿಬರುವನು.ಅದೇ ಪೂರ್ವಕ್ಕಿರುವ ಐದನೆಯ ದ್ವಾರಕ್ಕೆ ಮು

---

ನಿಗೆ ಬ್ರಹ್ಮವು ವಿಶ್ರಮಸ್ಥಾನವಾದುದರಿಂದ, ಮೂಲದಲ್ಲಿ ಬೇಸಗೆಯ ಪರ್ಯಾಯವಾಗಿ ಪ್ರಯೋಗಿಸಿರುವ ಶುಚಿಶಬ್ದದಿಂದ, ಬ್ರಹ್ಮವೆಂದರ್ಥವೂ ತೋರುವುದು. ನಾಡಿ, ಪುರೀತತ್ತು, ಬ್ರಹ್ಮ, ಇವು ಮೂರೂ ಜೀವನಿಗೆ ಸುಷುಪ್ತಿಯಲ್ಲಿ ವಿಶ್ರಮಸ್ಥಾನಗಳು. ಉಪ್ಪರಿಗೆಯಮೇಲೆ ಮಂಚವನ್ನಿಟ್ಟು, ಅದರಮೇಲೆ ಹಾಸಿಗೆಯನ್ನು ಹಾಸಿ, ಅದರಮೇಲೆ ಮಲಗುವಂತೆ, ಜೀವನು ಬ್ರಹ್ಮದ್ವಾರಾ ಪುರೀತತ್ತಿನಲ್ಲಿ ವಿಶ್ರಮಿಸುವನೆಂದು ಗ್ರಾಹ್ಯವು.

* ಇಲ್ಲಿ ಪುರದ್ವಾರಗಳೆಂದರೆ ದೇಹದೊಳಗಿನ ನವರಂಧ್ರಗಳೆಂದು ಗ್ರಾಹ್ಯವು ರಾಜನು ಒಂದೊಂದು ದ್ವಾರದಿಂದಲೂ ಒಬ್ಬೊಬ್ಬಸಹಾಯಕನೊಡನೆ ಹೋಗಿಬರುವನೆಂದರೆ,ಜೀವನು, ಕಣ್ಣು, ಕಿವಿ, ಮೊದಲಾದ ಇಂದ್ರಿಯಗಳಮೂಲಕವಾಗಿ ಆಯಾಸ್ಥಾನದಲ್ಲಿರುವ ಇಂದ್ರಿಯಶಕ್ತಿಯಸಹಾಯದಿಂದ ಶಬ್ದಾದಿವಿಷಯಗಳನ್ನು ಅನುಭವಿಸುವನೆಂದು ಭಾವವು. ಇದರ ವಿವರಗಳೆಲ್ಲವೂ ಮುಂದೆ ಇಪ್ಪತ್ತೆಂಟನೆಯ ಅಧ್ಯಾಯದಲ್ಲಿ ನಾರದನ ಮುಖದಿಂದಲೇ ಸ್ಪಷ್ಟವಾಗುವುವು.

ಖ್ಯೆಯೆಂದು ಹೆಸರು. ರಾಜನು ರಸಜ್ಞವಿಪಣರೆಂಬ ಮಿತ್ರರೊಡನೆ ಆ ದ್ವಾ
ರದಿಂದ ಹೊರಟು, ಬಹೂದನವೆಂದೂ, ವ್ಯವಹಾರವೆಂದೂ ಕರೆಯಲ್ಪಡು
ವ ಎರಡು ದೇಶಗಳಿಗೆ ಹೋಗಿಬರುವನು.ದಕ್ಷಿಣದ್ವಾರಕ್ಕೆ ಪಿತೃಹುವೆಂದು
ಹೆಸರು. ರಾಜನು ಶ್ರುತಿಧರ್ಮನೆಂಬ ಮಿತ್ರನೊಡಗೂಡಿ ಆ ದ್ವಾರದಿಂದ
ದಕ್ಷಿಣಪಾಂಚಾಲವೆಂಬ ದೇಶಕ್ಕೆ ಹೋಗಿ ಬರುವನು. ಅದೇ ಶ್ರುತಿಧರ್ಮ
ನೆಂಬ ಮಿತ್ರನೊಡಗೂಡಿ ದೇವಹುವೆಂಬ ಉತ್ತರದ್ವಾರದಿಂದ ಉತ್ತರ
ಪಾಂಚಾಲದೇಶಕ್ಕೆ ಹೋಗಿಬರುವನು. ಪಶ್ಚಿಮದ್ವಾರಕ್ಕೆ ಆಸುರಿಯೆಂದು
ಹೆಸರು. ರಾಜನು ದುರ್ಮದನೆಂಬ ಮಿತ್ರನೊಡನೆ ಆ ದ್ವಾರದಿಂದ ಹೊರ
ಟು,ಗ್ರಾಮ್ಯಕವೆಂಬ ದೇಶಕ್ಕೆಹೋಗಿಬರುವನು ನಿರ್ಋತಿಯೆಂಬಮತ್ತೊಂದು
ಪಶ್ಚಿಮದಬಾಗಿಲುಂಟು.ರಾಜನುಲುಬ್ಧಕನೆಂಬಮಿತ್ರನೊಡನೆ ಅದರಿಂದಹೊ
ರಟು, ವೈಶಸವೆಂಬ ದೇಶಕ್ಕೆ ಹೋಗುವನು. ಈ ಪಟ್ಟಣಕ್ಕೆ,ಈ ಒಂಬತ್ತು
ಬಾಗಿಲುಗಳುಹೊರತು,ಕೈಯೆಂದೂ, ಕಾಲೆಂದೂ ಕರೆಯಲ್ಪಡುವ ಮತ್ತೆ
ರಡು ದ್ವಾರಗಳುಂಟು. ಈ ದ್ವಾರಗಳ ಸನ್ನಿವೇಶವು ಬಹಳ ವಿಚಿತ್ರವಾದು
ದು. ಕೆಲವು ಕ್ರಿಮಿಗಳು ತಮ್ಮವಾಸಕ್ಕಾಗಿ ಗೂಡನ್ನು ಕಟ್ಟುವಾಗ,ಅದರ
ಬಾಯನ್ನೂ ಮುಚ್ಚಿಬಿಟ್ಟು,ಅದರೊಳಗೆ ಸಿಕ್ಕಿ ನರಳುವುದುಂಟು. ಅದರಂತೆ
ಇವುಗಳ ರಂಧ್ರವು ಮುಚ್ಚಿಹೋಗಿರುವುದರಿಂದ, ಈ ದ್ವಾರಗಳೆರಡಕ್ಕೂ
ಅಂಧವೆಂದು ಹೆಸರು.ಪುರಾಧಿಪತಿಯು ಅವುಗಳಲ್ಲಿ ಒಂದು ದ್ವಾರದಿಂದನಡೆ
ಯುವನು.ಮತ್ತೊಂದು ದ್ವಾರದಿಂದ ಕೆಲಸಮಾಡುವನು.ರಾಜನು ಆಗಾಗ
ವಿಷೂಚೀನನೆಂಬ ಮಿತ್ರನೊಡಗೂಡಿ ಅಂತಃಪುರಕ್ಕೆ ಹೋಗಿ,ಹೆಂಡಿರು, ಮ
ಕ್ಕಳು ಮುಂತಾದವರ ಸಂಬಂಧದಿಂದ, ಮೋಹ, ತಿಳಿವು,ಹರ್ಷ, ಮುಂತಾ
ದ ಮನೋವಿಕಾರಗಳನ್ನು ಹೊಂದುವನು. ಇದೇರೀತಿಯಲ್ಲಿ ಪುರಂಜನನು
ವಿವೇಕವಿಲ್ಲದೆ, ಕಾಮೋಪಭೋಗದಲ್ಲಿ ಬಿದ್ದು, ಅದಕ್ಕೆ ಬೇಕಾದ ಕಾರ್ಯ
ಗಳನ್ನೇ ನಡೆಸುತ್ತ ಬಂದನು. ಹೀಗೆ ದೈವದಿಂದ ವಂಚಿತನಾದ ಆ ರಾಜನು
* ತನ್ನ ಪತ್ನಿಯು ಹೋದ ದಾರಿಯಲ್ಲಿಯೇ ಹೋಗುತ್ತ,ಅವಳ ಇಷ್ಟವನ್ನೇ

* ಇದರಿಂದ ಜೀವನು ಬುದ್ಧಿಯು ಪ್ರೇರಿಸಿದಹಾಗೆ ಕೆಲಸಮಾಡುತಿದ್ದನೆಂದು
ಭಾವವು.

ಅನುಸರಿಸುತಿದ್ದನು.ಅವಳು ಮದ್ಯವನ್ನು ಕುಡಿಯಬೇಕೆಂದು ಕೋರಿದಾಗ ತಾನೂ ಮದ್ಯಪಾನಮಾಡಿ ಮತ್ತನಾಗುವನು. ಅವಳು ತಿನ್ನುವಾಗ ತಾನೂ ತಿನ್ನುವನು. ಅವಳು ಮೆಲ್ಲುವಾಗ ತಾನೂ ಮೆಲ್ಲುವನು.ಅವಳುಹೋದ ಕಡೆಗೆ ತಾನೂ ಹೋಗವನು! ಹಾಡುವಾಗ ಹಾಡುವನು! ಅಳುವಾಗ ಅಳುವನು! ನಗುವಾಗ ನಗುವನು! ಮಾತಾಡುವಾಗ ಮಾತಾಡುವನು ! ದುಃಖಿಸುವಾಗ ದುಃಖಿಸುವನು! ಓಡುವಾಗ ಓಡುವನು! ನಿಂತಾಗ ನಿಲ್ಲುವನು!ಮಲಗುವಾಗ ಮಲಗುವನು! ಕುಳಿತಾಗ ಕುಳ್ಳಿರುವನು! ಅವಳು ಸಂತೋಷಿಸುವಾಗ ಸಂತೋಷಿಸುವನು ! ಅವಳು ಸ್ಪರ್ಶಿಸುವಾಗ ಸ್ಪರ್ಶಿಸುವನು ! ಹೀಗೆ ಪುರಂಜನನು ಬುದ್ಧಿಯೆಂಬ ತನ್ನ ಪತ್ನಿಯಲ್ಲಿ ಮೋಹದಿಂದ ಮರುಳಾಗಿ,ಅವಳು ಇಟ್ಟ ಗೆರೆಯನ್ನು ಮೀರದೆ, ಎಳೆದಹಾಗೆ ಹೋಗುತ್ತ,ವಿವೇಕಜ್ಞಾನವಿಲ್ಲದೆ, ಅವಳ ಮಾಯೆಯಿಂದ ವಂಚಿತನಾಗಿ, ಅವಳ ಕೈಯಾಟದ ಬೊಂಬೆಯಂತೆ ಆಡುತಿದ್ದನು. ಇದು ಇಪ್ಪತ್ತುನಾಲ್ಕನೆಯ ಅಧ್ಯಾಯವು.

---

ಪುರಂಜನನು ಬೇಟೆಗೆ ಹೋದುದು.

* ರಾಜೇಂದ್ರಾ!ಕೇಳು! ಆಪುರಂಜನನು ಒಮ್ಮೆ ಮಹಾಧನುಸ್ಸನ್ನು ಹಿಡಿದು, ಐದುಕುದುರೆಗಳನ್ನು ಕಟ್ಟಿದ ಮಹಾವೇಗವತ್ತಾದ ರಥವನ್ನೇರಿ

---

* ಹಿಂದೆ ಇದುವರೆಗೆ ಹೇಳಿದ ವಿಷಯಗಳಿಂದ ಜಾಗ್ರದವಸ್ಥೆ, ಸುಷುಪ್ತಿ, ಇವೆರಡನ್ನೂ ಸೂಚಿಸಿದುದಾಯಿತು. ಇನ್ನು ಮುಂದೆ ರಥರೂಪದಿಂದ ಸ್ವಪ್ನಶರೀರವು ಸೂಚಿಸಲ್ಪಡುವುದು. ಇಂದ್ರಿಯಗಳು ಬುದ್ಧಿಗೆ ವಶವಾಗಿ ಕೆಲಸಮಾಡುವುದೇ ಜಾಗ್ರದವಸ್ಥೆ. ಇಲ್ಲಿಂದ ಮುಂದೆ ಬುದ್ಧಿವಿಯೋಗವು ತಿಳಿಸಲ್ಪಡುವುದರಿಂದ ಇದು ಸ್ವಪ್ನಾವಸ್ಥೆಯೆಂದು ಗ್ರಾಹ್ಯವು. ಇಲ್ಲಿ ಶರೀರವೆಂಬ ರಥಕ್ಕೆ ಪಂಚೇಂದ್ರಿಯಗಳೇ ಐದು ಕುದುರೆಗಳು. ಅಹಂಕಾರ ಮಮಕಾರಗಳೇ ಎರಡು ದಂಡಿಗಳು. ಪುಣ್ಯಪಾಪಗಳೆರಡೂ ಎರಡು ಚಕ್ರಗಳು. ಪ್ರಧಾನವೆಂಬುದೇ ಅಚ್ಚು. ಸತ್ವರಜಸ್ತಮೋಗುಣಗಳು ಮೂರೂ ಧ್ವಜದಂಡಗಳು. ಪಂಚಪ್ರಾಣಗಳೂ ಐದು ಕಟ್ಟುಗಳು. ಮನಸ್ಸೇ ಹಗ್ಗವು. ಬುದ್ಧಿಯೇ ಸಾರಥಿ. ಹೃದಯವೇ ರಥಿಕನು ಕುಳ್ಳಿರತಕ್ಕ ಜಗತಿ. ಶೋಕಮೋಹಗಳೆರಡೂ ನೊಗದಕಟ್ಟುಗಳು. ಶಬ್ದಾದಿವಿಷಯಗಳೇ ಪಂಚಾಯುಧಗಳು. ಸಪ್ತಧಾತುಗಳೇ ರಥದ ಹೊದ್ದಿಕೆಗಳು ಐದು ಕರ್ಮೇಂದ್ರಿಯಗಳೂ ಐದುಬಗೆಯ

ಬೇಟೆಗಾಗಿ ಅಡವಿಗೆ ಹೋದನು ಆ ರಥಕ್ಕೆ ಎರಡು ದಂಡಿಗಳು ! ಎರಡು ಚಕ್ರಗಳು ! ದೃಢವಾದ ಒಂದು ಅಚ್ಚು !ಮೂರು ಧ್ವಜದಂಡಗಳು! ಐದು ಕಟ್ಟುಗಳು! ಒಂದು ಹಗ್ಗ (ಲಗಾಮು)! ಒಬ್ಬ ಸಾರಥಿ ! ಒಂದು ದೊಡ್ಡ ಜಗತಿ! ಎರಡು ಮೂಕಿಗಳು! ಐದು ಆಯುಧಗಳು ! ತೊಗಲು ಮುಂತಾದುವುಗಳಿಂದ ಮಾಡಲ್ಪಟ್ಟ ಏಳು ಬಗೆಯ ಹೊದ್ದಿಕೆಗಳು ! ಈ ವಿಧವಾದ ನಾನಾಬಗೆಯ ಪರಿಕರಗಳಿಂದೊಪ್ಪುತಿದ್ದ ಆ ರಥವು, ಸುವರ್ಣಾಲಂಕಾರಗಳಿಂದ ಶೋಭಿತವಾಗಿ, ಐದುವಿಧವಾದ ವಿಚಿತ್ರಗತಿಗಳಿಂದ ಸಂಚರಿಸತಕ್ಕುದಾಗಿದ್ದಿತು. ಪುರಂಜನನು ಆ ರಥವನ್ನೇರಿ ಸುವರ್ಣಕವಚವನ್ನು ಧರಿಸಿ, ಅಕ್ಷಯಬಾಣವುಳ್ಳ ಮೂರು ಬತ್ತಳಿಕೆಗಳನ್ನು ಬೆನ್ನಿಗೆ ಕಟ್ಟಿಕೊಂಡು ಹನ್ನೊಂದುಮಂದಿ ಸೇನಾನಾಯಕರೊಡಗೂಡಿ ಪಂಚಪ್ರಸ್ಥವೆಂಬ ಅರಣ್ಯಕ್ಕೆ ಹೋದನು. ಅಲ್ಲಿ ಧನುರ್ಬಾಣಗಳನ್ನು ಹಿಡಿದು, ಬಹಳ ಹೆಮ್ಮೆಯಿಂದ * ಅನೇಕಮೃಗಗಳನ್ನು ಬೇಡಿಯಾಡುತ್ತ ಬಂ

---

ರಥಗತಿಗಳು. ರಜೋಗುಣವ್ಯಾಪಾರವೇ ಸುವರ್ಣಕವಚವು. ಅಜ್ಞಾನವಾಸನೆ, ಕರ್ಮವಾಸನೆ, ಪ್ರಕೃತಿಸಂಬಂಧವಾಸನೆಯೆಂಬ ಮೂರುಬಗೆಯ ವಾಸನೆಗಳೂ ಮೂರು ಬತ್ತಳಿಕೆಗಳು ಇಂದ್ರಿಯವ್ಯಾಪಾರಗಳೇ ಹನ್ನೊಂದುಮಂದಿ ಸೇನಾಧಿಪತಿಗಳು. ರಾಜನು ಇಂತಹ ರಥವನ್ನೇರಿ, ಮಹಾಧನುರ್ಧಾರಿಯಾಗಿ ಹೊರಟನೆಂದರೆ, ಜೀವನು ಕರ್ತೃತ್ವಭೋಕ್ತೃತ್ವವೇ ಮೊದಲಾದುವುಗಳಲ್ಲಿ ದೊಡ್ಡ ಅಭಿನಿವೇಶವುಳ್ಳವನಾಗಿ, ಶರೀರಯಾತ್ರೆಯನ್ನು ಮಾಡುವನೆಂದು ಭಾವವು. ಪಂಚಪ್ರಸ್ಥವೆಂಬ ವನಕ್ಕೆ ಹೋದನೆಂದರೆ. ಐದು ಶಬ್ದಾದಿವಿಷಯಗಳಿಂದ, ತುಂಬಿದ ಭೋಗಸ್ಥಾನದಲ್ಲಿ ಸೇರಿದನೆಂದು ಭಾವವು

* ಇಲ್ಲಿ ರಾಜನು ಮತ್ತನಾಗಿ ತನ್ನ ಪ್ರಿಯೆಯನ್ನೂ ಮರೆತು, ರಾಕ್ಷಸವೃತ್ತಿಯಿಂದ ಮೃಗಗಳನ್ನು ಕೊಲ್ಲುತಿದ್ದನೆಂದರೆ, ಜೀವನು ಸಾತ್ವಿಕಬುದ್ಧಿಯನ್ನು ಬಿಟ್ಟು ತಾಮಸವೃತ್ತಿಯನ್ನು ಹಿಡಿದು, ಸ್ವಪ್ನದೇಹದಿಂದ ಮೈಮರೆತು, ಭೋಗಗಳನ್ನು ಕೈವಶಮಾಡಿಕೊಳ್ಳುತಿದ್ದನೆಂದು ಭಾವವು. ಮತ್ತು ಇಲ್ಲಿ ಜೀವನಿಗೆ ದೈವಕಲ್ಪಿತವಾದ ಭೋಗಾನುಭವವು ವಿಹಿತವಾಗಿದ್ದರೂ, ಅದನ್ನು ಶಾಸ್ತ್ರವಿರುದ್ಧವಲ್ಲದೆ ಮಿತವಾಗಿ ಸೇವಿಸಬೇಕೆಂದೂ ಸೂಚಿತವು.

ಢನು. ಕ್ಷಣಮಾತ್ರವೂ ತನ್ನನ್ನಗಲಿರಲಾರದ ತನ್ನ ಹೆಂಡತಿಯನ್ನೂ ಬಿಟ್ಟು ಈ ಮಹೋತ್ಸಾಹದಿಂದ ಕಾಡಿನಲ್ಲಿಯೇ ಅಲೆಯುತಿದ್ದನು. ಈ ಕಾರ್ಯದಲ್ಲಿ ಅವನು ಸ್ವಲ್ಪಮಾತ್ರವೂ ದಯೆಯಿಲ್ಲದೆ ಕ್ರೂರಸ್ವಭಾವವುಳ್ಳವನಾಗಿ, ತಾಮಸವೃತ್ತಿಯನ್ನು ಹಿಡಿದು, ತನ್ನ ತೀಕ್ಷ್ಣಬಾಣಗಳಿಂದ ಕಾಡಿನಲ್ಲಿ ಕಣ್ಣಿಗೆ ಸಿಕ್ಕಿದ ಮೃಗಗಳೆಲ್ಲವನ್ನೂ ಕೊಲ್ಲುತ್ತಬಂದನು. ಆದರೆ "ರಾಜನು ಬೇಟೆಯಾಡುವುದರಿಂದ ದೋಷವೇನು ?" ಎಂದು ನೀನು ಕೇಳಬಹುದು. ಶ್ರಾದ್ಧಾದಿಕಾರ್ಯಗಳಿಗಾಗಿ ಮೃಗಮಾಂಸವನ್ನು ಅವಶ್ಯವಾಗಿ ಸಂಪಾದಿಸಬೇಕೆಂಬ ವಿಧಿಯು ತೋರಿದಾಗ, ರಾಜನು ಕಾಡಿನಲ್ಲಿ ಪ್ರವೇಶಿಸಿ, ಆ ಕಾರ್ಯಕ್ಕೆ ಬೇಕಾದ ಪವಿತ್ರಗಳಾದ ಕೆಲವು ಮೃಗಗಳನ್ನು ಮಾತ್ರಕೊಲ್ಲಬಹುದೇಹೊರತು,ಸಿಕ್ಕಿದ ಮೃಗಗಳೆಲ್ಲವನ್ನೂ ಯಥೇಚ್ಛವಾಗಿ ಕೊಲ್ಲುವುದು ತಪ್ಪು! ಇದೇ ಶಾಸ್ತ್ರವಿಧಿಯು ! ಈಗ ಪುರಂಜನನುನಡೆಸುತಿದ್ದ ಕಾರ್ಯವು,ಶಾಸ್ತ್ರನಿಷಿದ್ಧವೇಹೊರತು ಶಾಸ್ತ್ರಸಮ್ಮತವಲ್ಲ. ಈಶಾಸ್ತ್ರವನ್ನು ಪರಿಶೀಲಿಸಿ,ತನಗೆ ನಿಯತವಾದ ಕಾರ್ಯವನ್ನು ತಿಳಿದು, ಸಮಯಾನುಸಾರವಾಗಿ ಪ್ರಾಣಿವಧವನ್ನು ಮಾಡತಕ್ಕ ರಾಜನು, ಪಾಪಕ್ಕೆ ಗುರಿಯಾಗಲಾರನು. ಇದನ್ನು ತಿಳಿಯದೆ ಯಾವ ರಾಜನು ಬೇಟೆಯಾಡಿ ಮೃಗಗಳನ್ನು ಕೊಲ್ಲುವುದೇ ತನ್ನ ಕಾರ್ಯವೆಂದು ಯಥೇಚ್ಛವಾಗಿ ಪ್ರವರ್ತಿಸುವನೋ, ಅವನು ಕರ್ಮಗಳಿಗೆ ವಶನಾಗಿ ಸಂಸಾರದಲ್ಲಿ ಬಿದ್ದು,ಜ್ಞಾನಹೀನನಾಗಿ ಅಧೋಗತಿಯನ್ನೂ ಹೊಂದುವನು. ಇದೊಂದನ್ನೂ ಯೋಚಿಸದೆ ಪುರಂಜನನು ಬೇಟೆಯಾಡುವಾಗ ವಿಚಿತ್ರವಾದ ಗರಿಗಳುಳ್ಳ ತನ್ನ ಬಾಣಗಳಿಂದ ಎಷ್ಟೋ ಮೃಗಗಳನ್ನು ಕತ್ತರಿಸಿಕೊಲ್ಲುತಿದ್ದನು. ಆ ಪುರಂಜನನು ಕಾಡಿನಲ್ಲಿ ತನ್ನ ಕೈಗೆ ಸಿಕ್ಕಿದಹಾಗೆಲ್ಲಾ ಮೊಲಗಳನ್ನೂ, ಹಂದಿಗಳನ್ನೂ, ಕಾಡೆಮ್ಮೆಗಳನ್ನೂ, ಕಡವೆ, ಜಿಂಕೆ, ಮುಳ್ಳುಹಂದಿ ಮುಂತಾದ ಮೃಗಗಳನ್ನೂ ಕೊಲ್ಲುತ್ತ ಬರಲು, ಈ ಭಯಂಕರವಾದ ಕೊಲೆಯು ದಯಾಳುಗಳಾದ ಸಜ್ಜನರ ಮನಸ್ಸಿಗೆ ಬಹಳ ದುಸ್ಸಹವಾಗಿ ಕಾಣಿಸಿತು. ಶಾಸ್ತ್ರವಿಹಿತಗಳೆಂದೂ, ಶಾಸ್ತ್ರನಿಷಿದ್ಧಗಳೆಂದೂ ಯೋಚಿಸದೆ, ಕೈಗೆ ಸಿಕ್ಕಿದ ಮೃಗಗಳೆಲ್ಲವನ್ನೂ ಕೊಲ್ಲುತ್ತಬಂದಮೇಲೆ, ಆ ರಾಜ

ನಿಗೆ ಕೊನೆಕೊನೆಗೆ ದೇಹದಲ್ಲಿ ಬಳಲಿಕೆಯುಂಟಾಯಿತು. ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ, ಕಾಡಿನಿಂದ ಹಿಂತಿರುಗಿ ಪಟ್ಟಣಕ್ಕೆ ಬಂದು, ಸ್ನಾನ ಮಾಡಿ ಉಚಿತಾಹಾರವನ್ನು ತೆಗೆದುಕೊಂಡು,ಶ್ರಮಪರಿಹಾರವನ್ನು ಮಾಡಿಕೊಳ್ಳುತಿದ್ದನು. ಆಮೇಲೆ ಪುಷ್ಪಧೂಪಚಂದನಾದಿಗಳಿಂದ ದೇಹವನ್ನಲಂಕರಿಸಿಕೊಂಡನು. * ಹೀಗೆ ಸಂತೋಷದಿಂದ ಕುಳಿತಿರುವಾಗ,ಅವನ ಮನಸ್ಸಿಗೆಕಾಮಾತುರವು ಹುಟ್ಟಿತು.ಪತ್ನಿಯನ್ನು ನೆನೆಸಿಕೊಂಡು ಅಂತಃಪುರಕ್ಕೆ ಹೋದನು. ಅಲ್ಲಿ ಎಂದಿನಂತೆ ತನ್ನ ಪತ್ನಿಯನ್ನು ಕಾಣದೆ ಮನಸ್ಸಿನಲ್ಲಿ ವ್ಯಾಕುಲಪಡುತ್ತ ಅಲ್ಲಿದ್ದ ಇತರಸ್ತ್ರೀಯರನ್ನು ನೋಡಿ, "ಎಲೈ ಸುಂದರಿಯರೆ! ನಿಮ್ಮ ರಾಣಿಯೊಡನೆ ನಿಮ್ಮೆಲ್ಲರಿಗೂ ಎಂದಿನಂತೆ ಕುಶಲವಷ್ಟೆ? ಈ ಸ್ಥಾನವಾದರೋ ಮೊದಲಿನಂತೆ ಕಾಂತಿವಿಶಿಷ್ಟವಾಗಿಲ್ಲ.ಹೀಗಿರುವುದಕ್ಕೆ ಕಾರಣವೇನು?ಕುದುರೆ, ಚಕ್ರ,ಮುಂತಾದ ಅಂಗಗಳೊಂದೂ ಇಲ್ಲದ ರಥವು ಹೇಗೋಹಾಗೆ, ತಾಯಾಗಲಿ, ಪತಿವ್ರತೆಯಾದ ಪತ್ನಿಯಾಗಲಿ ಇಲ್ಲದ ಮನೆಯು ಶೋಭಿಸಲಾರದು. ಅಂತಹ ಮನೆಯನ್ನು ಪ್ರವೇಶಿಸಿ, ದೀನನಂತೆ ಕುಳ್ಳಿರುವುದಕ್ಕೆ ಯಾವನಿಗೆ ತಾನೇ ಮನಸ್ಸು ಬರುವುದು ?

---

* ರಾಜಸಬುದ್ಧಿಕಾರ್ಯವಾದ ಜಾಗ್ರದವಸ್ಥೆಯನ್ನೂ, ತಾಮಸಬುದ್ಧಿಕಾರ್ಯವಾದ ಸ್ವಪ್ನಾವಸ್ಥೆಯನ್ನೂ ಅನುಭವಿಸಿದಮೇಲೆ, ಜೀವನು ತನಗೆ ಸಾತ್ವಿಕಬುದ್ಧಿಯು ಮರೆಸಿಹೋಗಿರುವುದನ್ನುಕುರಿತು ಪಶ್ಚಾತ್ತಾಪಗೊಂಡು, ಬುದ್ಧಿಮೂಲಕಗಳಾದ ಇಂದ್ರಿಯವೃತ್ತಿಗಳನ್ನು ನೋಡಿ, ಅವುಗಳಲ್ಲಿ, ಯಾವುದರಿಂದ ಸಾತ್ವಿಕಬುದ್ಧಿಯು ಜನಿಸುವುದೋ ಎಂದು ವಿಚಾರಮಾಡುತಿದ್ದುದಾಗಿ ಇದರ ಭಾವವು. ಕಾಮಪರವಶನಾದ ರಾಜನು, ತನ್ನ ಮನೆಯಲ್ಲಿದ್ದ ಭಾರ್ಯೆಯನ್ನೇ ತಾನು ಕಾಣದಂತೆ,ಜೀವನು ತನ್ನ ಹೃದಯದಲ್ಲಿದ್ದ ಬುದ್ಧಿಯನ್ನೇ ತಾನು ಕಾಣದೆ ವ್ಯಾಕುಲನಾಗಿದ್ದನೆಂದೂ, ಪತಿಯಿಂದ ತಿರ ಭಾರ್ಯೆಯಂತೆ, ತನ್ನ ಅನಾದರದಿಂದಲೇ ಬುದ್ಧಿಯು ತನ್ನಲ್ಲಿ ವಿಮುಖವೆಂದೂ ನಿಶ್ಚಯಿಸಿ, ತಾನು ಮೊದಲಿದ್ದ ಅಹಂಕಾರಮಮಕಾರಗಳನ್ನು ಬಿಟ್ಟು, ಕೂಡಿದಮಟ್ಟಿಗೆ ಬುದ್ಧಿಯನ್ನೂ ಪ್ರಸನ್ನಮಾಡಿಕೊಂಡು, ಇನ್ನು ಮುಂದೆ ತಾನು ಆಸಾತ್ವಿಕಬುದ್ಧಿಯೊಡನೆ ಕಲೆತೇ ಕಾರ್ಯಸಾಧನೆಯನ್ನು ಮಾಡುವುದಕ್ಕೆ ನಿಶ್ಚಯಿಸಿದಂತೆಯೂ ಇಲ್ಲಿನ ಭಾವವು.

ಎಲೈ ಸ್ತ್ರೀಯರೆ! ಆ ನನ್ನ ಪ್ರಿಯಪತ್ನಿಯೆಲ್ಲಿರುವಳು? ನಾನು ಎಂತಹ ವ್ಯಸನಸಮುದ್ರದಲ್ಲಿ ಮುಳುಗಿದ್ದರೂ, ಅವಳು ಆಕ್ಷಣವೇ ನನ್ನನ್ನು ಪ್ರೋತ್ಸಾಹಪಡಿಸಿ, ಆ ದುಃಖಸಾಗರದಿಂದ ದಾಟಿಸುವುದರಲ್ಲಿ ಬಹಳ ಚತುರೆಯಾಗಿದ್ದಳು. ಈಗ ಅವಳನ್ನು ಕಾಣದಿರುವುದಕ್ಕೆ ಕಾರಣವೇನು?" ಎಂದನು ಅದಕ್ಕಾ ಸ್ತ್ರೀಯರು "ಓ ರಾಜೇಂದ್ರಾ ! ನಿನ್ನ ಪ್ರಿಯೆಯ ಉದ್ದೇಶವೇನೋ ನಾವು ಕಾಣೆವು. ಅವಳ ವ್ಯಸನಕಾರಣವೂ ನಮಗೆ ತಿಳಿಯದು. ಅದೋ ! ಅವಳು ಅತ್ತಲಾಗಿ ಬರೀನೆಲದಮೇಲೆ ಮಲಗಿರುವಳು ನೋಡು." ಎಂದರು. ಒಡನೆಯೇ ಪುರಂಜನನು, ಅವಳು ಮಲಗಿದ್ದ ಸ್ಥಳಕ್ಕೆ ಹೋಗಿ, ಆಕೆಯ ಸ್ಥಿತಿಯನ್ನು ನೋಡಿ ಮನಸ್ಸು ಕದಲಿ, ದುಃಖದಿಂದ ಕೊರಗುತಿದ್ದನು. ಬಹಳ ಕನಿಕರದಿಂದ ಅವಳನ್ನು ಮಾತನಾಡಿಸಿ ಮೃದುವಾಕ್ಯದಿಂದ ಸಮಾಧಾನಪಡಿಸುತಿದ್ದನು. ಎಷ್ಟೆಷ್ಟು ವಿಚಾರಿಸಿದರೂ ಅವಳ ಕೋಪಕ್ಕೆ ಕಾರಣವೇನೆಂದು ತಿಳಿಯಲಾರದೆ ಹೋದನು. ಕೋಪಸಮಾಧಾನಮಾಡುವುದರಲ್ಲಿ ಚತುರನಾದ ಆ ರಾಜನು, ಅನೇಕವಿಧದಿಂದ ಅವಳಿಗೆ ಸಮಾಧಾನವನ್ನು ಹೇಳುತ್ತ, ಅವಳ ಕಾಲನ್ನು ಹಿಡಿದು, ಕೊನೆಗೆ ಆಕೆಯನ್ನೆತ್ತಿ ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು "ಪ್ರಿಯೆ ! ಇದೇನಿದು ! ಭೃತ್ಯರು ಅಪರಾಧವನ್ನು ನಡೆಸಿದಾಗ, ಆ ತಪ್ಪಿಗೆ ತಕ್ಕಂತೆ ತಮ್ಮ ಪ್ರಭುಗಳಿಂದ ದಂಡಿಸಲ್ಪಡದಿದ್ದರೆ ಅಂತಹ ಭೃತ್ಯರನ್ನು ಭಾಗ್ಯಹೀನರೆಂದೇ ಹೇಳಬೇಕು. ಭೃತ್ಯರು ಅವರವರ ಅಪರಾಧಕ್ಕೆ ತಕ್ಕಂತೆ ಪ್ರಭುಗಳಿಂದ ಶಿಕ್ಷೆಯನ್ನು ಹೊಂದಬೇಕಾದುದೇ ಯುಕ್ತವು. ಅವರು ಆ ಶಿಕ್ಷೆಯನ್ನು ಅನುಗ್ರಹವೆಂದೇ ತಿಳಿಯಬೇಕು. ಈ ಸೂಕ್ಷ್ಮವನ್ನು ತಿಳಿಯದೆ, ತಪ್ಪುಮಾಡಿಯೂ ರಾಜದಂಡದಿಂದ ತಪ್ಪಿಸಿಕೊಳ್ಳತಕ್ಕ ಭೃತ್ಯನು ಬುದ್ಧಿಹೀನನೆಂಬುದರಲ್ಲಿ ಸಂದೇಹವಿಲ್ಲ. ಒಂದುವೇಳೆ ತನ್ನ ಯಜಮಾನನು ದಂಡಿಸದಿದ್ದರೂ, ಅಪರಾಧಿಯಾದವನು ಬಲಾತ್ಕರಿಸಿ ಅವನಿಂದ ಶಿಕ್ಷೆಯನ್ನು ಪಡೆಯಬೇಕಾದುದೇ ಯುಕ್ತವು. ಆದುದರಿಂದ ಎಲೆ ಮಂಗಳಾಂಗಿ ! ನೀನು ಮಹಾರಾಜ್ಞಿಯೆನಿಸಿಕೊಂಡಿರುವೆ ! ನಾನು ಭೃತ್ಯನು! ನನ್ನಿಂದ ತಪ್ಪುನಡೆದಿದ್ದರೂ ಇರಬಹುದು. ನೀನು ದಯೆಯಿಂದ ಆ ತಪ್ಪನ್ನು ಕ್ಷಮಿಸಿದರೂ, ನಾನು ನಮ್ಮ

ತಿಸಲಾರೆನು. ನೀನು ನನ್ನನ್ನು ಯಥೇಚ್ಛವಾಗಿ ದಂಡಿಸಬಹುದು. ಎಲೆ ದೇವಿ! ಸೂಕ್ಷ್ಮವಾದ ಹಲ್ಲುಗಳಿಂದಲೂ, ಅಂದವಾದ ಹುಬ್ಬಿನಿಂದಲೂ, ಅನುರಾಗಸೂಚಕವಾದ ಲಜ್ಜೆಯಿಂದಲೂ, ಸುಂದರವಾದ ಮಂದಹಾಸ ದಿಂದಲೂ,ಅರಳಿದ ಕಣ್ಣುಗಳಿಂದಲೂ ಶೋಭಿತವಾಗಿ, ಕಪ್ಪಾದಮುಂಗು ರುಳುಗಳಿಂದ ಸೊಗಸುಬೀರುವ ನಿನ್ನ ಮುಖವನ್ನು ನನ್ನ ಕಡೆಗೆ ತಿರುಗಿಸು! ನಾನು ನಿನ್ನವನೆಂದು ಕಾಣೆಯಾ?ಮುದ್ದುಬೀರತಕ್ಕ ಮಧುರವಾಕ್ಯದಿಂದ ನನ್ನೊಡನೆ ಮಾತನಾಡು!ಒಂದುವೇಳೆ ಬೇರೆ ಯಾರಾದರೂ ನಿನ್ನಲ್ಲಿ ತಪ್ಪಿ ನಡೆದಿದ್ದರೆ, ಅದನ್ನಾದರೂ ನನಗೆ ತಿಳಿಸು ! ವೀರಾಗ್ರಣಿಯೆನಿಸಿದ ನನ್ನ ಪತ್ನಿಯಾಗಿದ್ದು ನೀನು ಹೆದರುವುದೆಂದರೇನು ? ನಿನಗೆ ಅಪರಾಧಮಾಡಿದ ಪುರುಷನು ಬ್ರಾಹ್ಮಣನಲ್ಲದೆ, ಭಗವದ್ಭಕ್ತನಲ್ಲದೆ ಇದ್ದಪಕ್ಷದಲ್ಲಿ,ಅವನನ್ನು ತಪ್ಪದೆ ದಂಡಿಸುವೆನು. ನನ್ನನ್ನು ಕೋಪಗೊಳಿಸಿದಮೇಲೆ ಈ ಮೂರು ಲೋಕಗಳ ಹೊರಗಾಗಲಿ, ಒಳಗಾಗಲಿ ಯಾವನೂ ನಿರ್ಭಯವಾಗಿರಲಾ ರನು. ಎಲೆ ಸುಂದರಿ!ಇದುವರೆಗೆ ಯಾವಾಗಲೂ ನಿನ್ನ ಮುಖದಲ್ಲಿ ಹೀಗೆ ತಿಲಕವಿಲ್ಲದಿದ್ದುದನ್ನು ನಾನು ಕಂಡವನಲ್ಲ. ಈಗ ನಿನ್ನ ಮುದ್ದುಮುಖವು ಕೇವಲಮಲಿನವಾಗಿ ಸ್ವಲ್ಪವೂ ಹರ್ಷವಿಲ್ಲದೆ ಕೋಪಾವೇಶದಿಂದ ಭಯಂ ಕರವಾಗಿರುವುದು. ಮೊದಲಿದ್ದ ಪ್ರೇಮವಾಗಲಿ,ಪ್ರಕಾಶವಾಗಲಿ, ಈಗ ನಿ ನ್ನ ಮುಖದಲ್ಲಿ ಕಾಣುವುದಿಲ್ಲ. ಈ ನಿನ್ನ ಸ್ತನಗಳೆರಡೂ ಕಣ್ಣೀರಿನಿಂದ ತೊಯ್ದು ಕಾಂತಿಹೀನವಾಗಿರುವುವು. ತೊಂಡೆಯ ಹಣ್ಣಿನಂತಿದ್ದ ನಿನ್ನ ತುಟಿಯು, ಈಗ ಮೊದಲಿದ್ದ ಕಾಂತಿಯನ್ನು ಬಿಟ್ಟು ಬಿಳುಪೇರಿರುವುದು. ಎಲೆ ದೇವಿ! ಇಷ್ಟೊಂದನರ್ಥಗಳಿಗೆ ಕಾರಣವೇನು?ನನ್ನ ತಪ್ಪನ್ನು ಮನ್ನಿಸಿ ಪ್ರಸನ್ನಳಾಗು!ಒಂದುವೇಳೆ ಅಜ್ಞಾನದಿಂದ ನಾನು ತಪ್ಪಿ ನಡೆದಿದ್ದರೂ, ನನ್ನ ಮನಸ್ಸು ನಿನ್ನ ವಶವೆಂಬುದನ್ನು ಕಾಣೆಯಾ ? ಇತರವ್ಯಸನದಿಂದ ನಿನ್ನ ಆಜ್ಞೆಯಿಲ್ಲದೆ ನಾನು ನಿನ್ನನ್ನು ಬಿಟ್ಟು ಹೋದುದಕ್ಕಾಗಿ ನೀನು ಕೋಪಿಸಿರಬಹುದು ! ಆ ನನ್ನ ತಪ್ಪನ್ನು ಮನ್ನಿಸು! ಲೋಕದಲ್ಲಿ ಚತುರೆ ಯಾದ ಯಾವ ಸ್ತ್ರೀಯುತಾನೇ ಕಾಮಾತುರದಿಂದ ತನಗೆ ವಶನಾಗಿರುವ ಪುರುಷನನ್ನು, ಸ್ವಲ್ಪ ತಪ್ಪಿಗಾಗಿ ತಿರಸ್ಕರಿಸಿ, ಕಾಲೋಚಿತವಾದ ಕಾರ್ಯ

ಹಲ್ಲಿ ನಿಯಮಿಸದೆ ಬಿಡುವಳು? ಆದುದರಿಂದ ನನ್ನ ತಪ್ಪನ್ನು ಮನ್ನಿಸಿ ದಯೆಯಿಂದ ರಕ್ಷಿಸು! ಇನ್ನುಮೇಲೆ ನಾನು ನಿನ್ನ ಇಷ್ಟಾನುಸಾರವಾಗಿಯೇ ನಡೆಯುತ್ತ, ನಿನ್ನ ಸೇವೆಯಲ್ಲಿರುವೆನು"ಎಂದನು. ಇಲ್ಲಿಗೆ ಇಪ್ಪತ್ತೈದನೆಯ ಅಧ್ಯಾಯವು.

---

ಪುರಂಜನನ ಪಟ್ಟಣವು ಶತ್ರುಗಳಿಂದ ಸೂರೆಹೋದುದು.

* ರಾಜೇಂದ್ರಾ! ಕೇಳು! ಆ ರಾಜಪತ್ನಿಯು ಹೀಗೆ ತನ್ನ ವಿಲಾಸಗಳಿಂದ ಪುರಂಜನನನ್ನು ಚೆನ್ನಾಗಿ ಮರುಳುಮಾಡಿ, ಅವನನ್ನು ತನ್ನ ವಶಮಾಡಿಕೊಂಡಮೇಲೆ, ಅವನಲ್ಲಿ ಸೌಮುಖ್ಯವನ್ನು ತೋರಿಸಿದಳು. ಆಕೆಯು ಮಂಗಳಸ್ನಾನಮಾಡಿ, ದುಕೂಲವನ್ನುಟ್ಟು, ಪುಷ್ಪಚಂದನಾದಿಗಳಿಂದಲಂಕೃತಳಾಗಿ, ಯಥೋಚಿತವಾದ ಆಹಾರವನ್ನೂ ಭುಜಿಸಿ ಬಂದಮೇಲೆ, ರಾಜನು ಮನೋಹರವಾದ ಮುಖಕಾಂತಿಯುಳ್ಳ ಆಕೆಯನ್ನು ನೋಡಿ, ತನಗೆ ತಾನೇ ಸಂತೋಷದಿಂದು ಕ್ಕುತಿದ್ದನು. ಇಬ್ಬರೂ ಸೇರಿದಮೇಲೆ ಒಬ್ಬರಿಗೊಬ್ಬರು ಕಂಠಾಲಿಂಗನವನ್ನು ಮಾಡಿಕೊಂಡು, ಏಕಾಂತವಾಗಿ ಪ್ರಿಯಸಂಭಾಷಣಗಳಿಂದ ಆನಂದಿಸುತಿದ್ದರು. ರಾಜನು ಆಕೆಯಲ್ಲಿರುವ ಮೋಹದಿಂದ,ಹಗಲುರಾತ್ರಿಯಾಗಿ ಕಳೆದು ಹೋಗುತ್ತಿರುವ ಕಾಲವೇಗವನ್ನೂ ತಿಳಿಯದೆ,ಅವಳೊಡನೆಯೇ ಸುಖಿಸುತಿದ್ದನು. ಆ ಪ್ರಿಯೆಯ ತೋಳನ್ನೇ ತಲೆದಿಂಬಾಗಿಮಾಡಿ,ಸುಖವಾದಹಾಸಿಗೆಯಲ್ಲಿ ಮದಾಂಧನಾಗಿ ಮಲಗುತಿದ್ದನು.

---

* ಇದುವರೆಗೆ ಹೇಳಿದ ಕಥೆಯಿಂದ "ಜಾಗರ, ಸ್ವಪ್ನ, ಸುಷುಪ್ತಿ,ಮುಂತಾದ ಅವಸ್ಥೆಗಳಲ್ಲಿ ತೊಳಲುತ್ತಿರುವ ಜೀವನಿಗೆ, ಸಾತ್ವಿಕಬುದ್ಧಿಯೆಂಬುದು ತನ್ನ ಹೃದಯದಲ್ಲಿಯೇ"ಇದ್ದರೂ ತನಗೆ ಅನುಕೂಲಿಸದೆ ದುರ್ಲಭವಾಗಿದ್ದು, ದೈವಿಕವಾಗಿ ಅವನಿಗೆ ಮನಸ್ಸಿನಲ್ಲಿ ತನ್ನ ಸ್ಥಿತಿಗಾಗಿ ಪರಿತಾಪವು ಹುಟ್ಟಿದಾಗ, ಯಾವುದೋ ಒಂದು ಇಂದ್ರಿಯವೃತ್ತಿಯ ಸಹಾಯದಿಂದ ಅವನು ತಿರುಗಿ ಸಾತ್ವಿಕಬುದ್ಧಿಯನ್ನು ತನಗೆ ಅಭಿಮುಖವಾಗಿ ಮಾಡಿಕೊಂಡು, ಅದನ್ನನುವರ್ತಿಸಿನಡೆಯುವಂತೆ ಸಂಕಲ್ಪಿಸಿಕೊಂಡುದಾಗಿ ಹೇಳಲ್ಪಟ್ಟಿತು. ಈ ಅಧ್ಯಾಯದಲ್ಲಿ ಮನುಷ್ಯನಿಗೆ ದೈವಾಧೀನವಾಗಿ ಆ ವಿವೇಕವು ಹುಟ್ಟಿದಮೇಲೆಯೂ, ತಿರುಗಿ ಆಬುದ್ಧಿಯು ಪ್ರಕೃತಿಬದ್ಧನಾದವನನ್ನು ಬಲಾತ್ಕರಿಸಿ ತನ್ನ ವಶಮಾಡಿಕೊಂಡು ಸಂಸಾರದಲ್ಲಿ ಕಟ್ಟಿಡಬಹುದೆಂಬ ವಿಷಯವು ಸೂಚಿಸಲ್ಪಡುವುದು.

ಅವಳೊಡನೆ ಅನುಭವಿಸತಕ್ಕ ಸುಖವೇ ಪರಮಪುರುಷಾರ್ಥವೆಂದು ತಿಳಿದು ಆತ್ಮಸ್ವರೂಪವನ್ನಾಗಲಿ, ಪರಮಾತ್ಮಸ್ವರೂಪವನ್ನಾಗಲಿ ತಿಳಿಯದೆ, ಅಜ್ಞಾನಾಂಧನಾಗಿದ್ದನು.ಹೀಗೆ ಪುರಂಜನನು, ಕಾಮದಿಂದ ಕಲಗಿದ ಮನಸ್ಸುಳ್ಳವನಾಗಿ, ತನ್ನ ಭಾರ್ಯೆಯೊಡನೆ ರಮಿಸುತ್ತಿರುವಾಗ, ಅವನ ಯೌವನದಶೆಯೆಲ್ಲವೂ ಒಂದು ಕ್ಷಣಾರ್ಧದಂತೆ ಕಳೆದುಹೋಯಿತು. ಆ ರಾಜನಿಗೆ ಅರ್ಧಾಯುಸ್ಸು ಕಳೆಯುವುದರೊಳಗಾಗಿ, ಎಂದರೆ ಐವತ್ತು ವರ್ಷಗಳು ಮುಗಿಯುವಷ್ಟರಲ್ಲಿ, ಅವನ ಭಾರ್ಯೆಯಲ್ಲಿ ನೂರ ಹನ್ನೊಂದುಮಂದಿ ಗಂಡುಮಕ್ಕಳೂ,ಮತ್ತು ತಾಯಿತಂದೆಗಳಿಗೆ ಕೀರ್ತಿಯನ್ನು ತರತಕ್ಕವರಾಗಿಯೂ,ಶೀಲೌದಾರ್ಯಾದಿಸದ್ಗುಣಸಂಪನ್ನೆಯರಾಗಿಯೂ ಇರುವನೂರು ಹತ್ತುಮಂದಿ ಹೆಣ್ಣುಮಕ್ಕಳೂ ಹುಟ್ಟಿದರು. ಪುರಂಜನನು ವಂಶೋದ್ಧಾರಕರಾದ ಆ ಗಂಡುಮಕ್ಕಳಿಗೆ,ತಕ್ಕ ಕನ್ನೆಯರನ್ನೂ,ಹೆಣ್ಣುಮಕ್ಕಳಿಗೆ ತಕ್ಕ ಪತಿಗಳನ್ನೂ ಹುಡುಕಿತಂದು, ಎಲ್ಲರಿಗೂ ವಿವಾಹವನ್ನುಮಾಡಿದನು.ಹೀಗೆ ವಿವಾಹಿತರಾದ ಗಂಡುಮಕ್ಕಳಲ್ಲಿ, ಒಬ್ಬೊಬ್ಬನಿಗೂ ನೂರುನೂರುಮಂದಿ ಮಕ್ಕಳು ಹುಟ್ಟಿದರು.* ಈ ಸಂತಾನಾಭಿವೃದ್ಧಿಯಿಂದ ಪುರಂಜನನವಂಶವು ಪಾಂಚಾಲದೇಶದಲ್ಲಿ ಬಹಳವಾಗಿ ವಿಸ್ತರಿಸಿತ್ತು. ಹೀಗೆ ಮಕ್ಕಳು, ಮುಮ್ಮಕ್ಕಳು ಮುಂತಾದ ಪರಿವಾರದವರೆಲ್ಲರೂ ಮನೆಯಲ್ಲಿ ತುಂಬಿ, ತಾನು ಗಳಿಸಿಟ್ಟಹಣದಿಂದ ಸುಖಜೀವಿಗಳಾಗಿ ಸಂತೋಷಿಸುತ್ತಿರುವಾಗ, ಪುರಂಜನನಿಗೆ ಅವರಲ್ಲಿ ಮೇಲೆಮೇಲೆ ಮಮತೆಯು ಹೆಚ್ಚುತ್ತ ಬಂದಿತು. ಈ ಸಂತೋಷದಿಂದ ಆತನು, † ತನ್ನ ಶರೀರವನ್ನೂ, ಪರಲೋಕವನ್ನೂ ಮರೆತು ಮದಾಂಧನಾಗಿದ್ದನು. ಮತ್ತು ಅವನು ಮೇಲೆಮೇಲೆ ವಿಷಯಸುಖಗಳ

* ಇಲ್ಲಿ ಪುರಂಜನನಿಗೆ ವಂಶಾಭಿವೃದ್ಧಿಯೆಂದರೆ ಜೀವನಿಗೆ ವಿಷಯಸಾಮಗ್ರಿಗಳು ಹೆಚ್ಚುತ್ತ ಬಂದುದಾಗಿ ಭಾವವು.

† ಇದರಿಂದ ಜೀವನು ಆತ್ಮಪರಮಾತ್ಮಸ್ವರೂಪವನ್ನು ಮರೆತು, ಅಹಂಕಾರ ಮಮಕಾರಗಳಿಂದ ಕೂಡಿದ್ದನೆಂದೂ, ಇಂದ್ರಿಯಸುಖಕ್ಕೆ ಬೇಕಾದ ವ್ಯಾಪಾರಗಳನ್ನೇ ನಡೆಸುತಿದ್ದನೆಂದೂ ಭಾವವು.

ನ್ನಪೇಕ್ಷಿಸುತ್ತ,ಅವುಗಳನ್ನು ಪಡೆಯುವುದಕ್ಕಾಗಿ,ಪ್ರಾಣಿವಧದಿಂದ ಭಯಂಕರಗಳಾದ ಯಾಗಗಳನ್ನಾರಂಭಿಸಿ,ನಿನ್ನಂತೆಯೇ ಆ ಯಾಗಗಳಿಂದದೇವತೆಗಳನ್ನೂ,ಪಿತೃದೇವತೆಗಳನ್ನೂ ಆರಾಧಿಸುತಿದ್ದನು. ಹೀಗೆ ಅಲ್ಪಫಲಗಳನ್ನು ಕೊಡತಕ್ಕ ಯಾಗಾದಿಕರ್ಮಗಳಲ್ಲಿಯೂ, ಕುಟುಂಬಪೋಷಣೆಯಲ್ಲಿಯೂ ಕಷ್ಟಪಡುತಿದ್ದ ಆ ರಾಜನಿಗೆ, ಸ್ತ್ರೀಯರಿಗೆ ಅಪ್ರಿಯವಾದ ಮುಪ್ಪು ತಲೆದೋರಿತು. ರಾಜೇಂದ್ರಾ! * ಚಂಡವೇಗನೆಂಬ ಗಂಧರ್ವರಾಜನೊಬ್ಬನುಂಟು. ಅವನಿಗೆ ಮುನ್ನೂರರುವತ್ತುಮಂದಿ ಗಂಧರ್ವಸೇವಕರಿರುವರು. ಇವರೆಲ್ಲರೂ ಮಹಾಬಲಾಢ್ಯರು ! ಇವರನ್ನು ಯಾರೂ ತಡೆದು ನಿಲ್ಲಿಸಲಾರರು. ಪ್ರಾಣಿಗಳು ಕಣ್ಣಿಟ್ಟು ಕಾದಿರುವಾಗಲೇ, ಇವರೆಲ್ಲರೂ ಅವರಿಗೆ ತಿಳಿಯದಂತೆ ಬಂದು, ಅವರ ಆಯುಸ್ಸೆಂಬ ಭಾಗ್ಯವನ್ನು ಕೊಳ್ಳೆಹೊಡೆಯತಕ್ಕವರು. ಅವರಂತೆಯೇ ಸ್ವಭಾವವುಳ್ಳ ಮುನ್ನೂರರುವತ್ತುಮಂದಿ ಗಂಧರ್ವಸ್ತ್ರೀಯರು ಈ ಗಂಧರ್ವರಾಜನಿಗೆ ಸೇವಕಿಯರಾಗಿರುವರು. ಅವರಲ್ಲಿ ಕೆಲವರ ಮೈಬಣ್ಣವು ಕಪ್ಪು ! ಕೆಲವರ ಮೈಬಣ್ಣವು ಬಿಳುಪು ! ಈ ದಂಪತಿಗಳೆಲ್ಲರೂ ಒಬ್ಬರಾದ ಮೇಲೊಬ್ಬರು, ಸಮಸ್ತ ಭೋಗಸಾಧನಗಳಿಂದ ತುಂಬಿದ ಪ್ರಾಣಿಗಳ ಮನೆಯನ್ನು ಲೂಟಿ ಮಾಡುತ್ತಿರುವರು. ಚಂಡವೇಗನ ಸೇವಕರಾದ ಆ ಗಂಧರ್ವರು, ಪುರಂಜನನ ವಾಸಸ್ಥಾನವಾದ ಪಟ್ಟಣವನ್ನು ಕೊಳ್ಳೆಹೊಡೆಯುವುದಕ್ಕೆ ಬಂದಾಗ, † ಅಲ್ಲಿ ಕಾವಲಿದ್ದ ಪ್ರಜಾಗರನೆಂಬ ಪಾಲಕನು,ಅವರನ್ನು ಬಹಳವಾಗಿ ನಿವಾರಿಸಿದನು.

---

* ಇಲ್ಲಿ ಗಂಧರ್ವರಾಜನು ಮಾಯೆಯಿಂದ ಬಂದು ಪುರವನ್ನು ಮುತ್ತಿದನೆಂದರೆ, ಕಾಲವು ಅವನ ಶರೀರವನ್ನು ಜೀರ್ಣಮಾಡುತ್ತ ಬಂದುದಾಗಿ ಭಾವವು. ಗಂಧರ್ವಸೇವಕರೆಂದರೆ ೩೬೦ ದಿನಗಳು. ಅವರ ಪತ್ನಿಯರೆಂದರೆ ಶುಕ್ಲಕೃಷ್ಣಪಕ್ಷದ ರಾತ್ರಿಗಳು.

† ಇಲ್ಲಿ ಪ್ರಜಾಗರನೆಂದರೆ ಜೀವಪರವಾಗಿ ಪ್ರಾಣವೆಂದರ್ಥವು. ದೇಹದಲ್ಲಿ ಪ್ರಾಣವೆಂಬುದು ಕೊನೆಯವರೆಗೆ ಎಳೆದಾಡುತ್ತಿರುವುದೆಂದೂ,ಅದು ೨೭ ಬಾಣಗಳಿಂದ ಇದಿಗಿಸುತಿತ್ತೆಂದರೆ, ಪಂಚಭೂತಾಂಶಗಳು, ಐದು ಶಬ್ದಾದಿವಿಷಯಗಳು, ಹತ್ತು ಜ್ಞಾನಕರ್ಮೇಂದ್ರಿಯಗಳು, ಅಪಾನಾದಿಗಳಾದ ನಾಲ್ಕು ವಾಯುಗಳು, ಮನಸ್ಸು, ಬುದ್ಧಿ, ಅಹಂಕಾರಗಳು ಮೂರು. ಈ ಸಾಧನಗಳೊಡನೆ ಹೋರಾಡುತಿದ್ದುದಾಗಿ ಭಾವವು.

ಆ ಪ್ರಜಾಗರನೊಬ್ಬನೇ ಇಪ್ಪತ್ತೇಳು ಬಾಣಗಳನ್ನು ಬಿಲ್ಲಿನಲ್ಲಿ ಸಂಧಾನ ಮಾಡಿ ಪ್ರಯೋಗಿಸುತ್ತ, ನೂರುವರ್ಷಗಳವರೆಗೆ, ಗಂಧರ್ವರೊಡನೆ ಹೋರಾಡುತ್ತಬಂದನು. ಹೀಗೆ ಬಹುಕಾಲದವರೆಗೆ ತಾನೊಬ್ಬನೇ ಬಹಳಮಂದಿ ಶತ್ರುಗಳೊಡನೆ ಹೋರಾಡುತ್ತಬಂದುದರಿಂದ, ಅವನಶಕ್ತಿಯೂಕುಂದುತ್ತ ಬಂದಿತು. ಇದರಿಂದ ಅವನಿಗೆ ತನ್ನ ಪುರರಾಷ್ಟ್ರಗಳೊಡನೆ ತನ್ನನ್ನು ಕಾಪಾಡಿಕೊಳ್ಳುವುದೇ ಅಸಾಧ್ಯವಾಯಿತು. ಅವನ ಮನಸ್ಸಿಗೆ ಬಹಳ ಭಯವೂ ಚಿಂತೆಯೂ ಹುಟ್ಟಿತು. ಪುರಂಜನನು ಆಗ ಆ ಪಟ್ಟಣದಲ್ಲಿಯೇ ಇರುತಿದ್ದರೂ ಅಲ್ಲಿ ತನ್ನ ಪರಿವಾರಗಳಿಂದತಂದೊದಗಿಸಲ್ಪಡುತಿದ್ದ ಸುಖಸಾಧನಗಳನ್ನನುಭವಿಸುವುದರಿಂದ ಮೈಮರೆತು, ಸ್ತ್ರೀಲೋಲನಾಗಿ, ತನ್ನ ಪಟ್ಟಣವು ಸೂರೆಹೋಗುವುದನ್ನೂ ಕಾಣದೆ ಎಚ್ಚರತಪ್ಪಿದ್ದನು. ಎಲೈ ಪ್ರಾಚೀನಬರ್ಹಿರಾಜೇಂದ್ರನೆ! * ಕಾಲಪುರುಷನಿಗೆ ಜರೆಯೆಂಬ ಮಗಳೊಬ್ಬಳಿರುವಳು. ಅವಳು ತನಗೆ ತಕ್ಕ ಪತಿಯನ್ನು ಪಡೆಯುವುದಕ್ಕಾಗಿ ತ್ರೈಲೋಕವನ್ನೂ ಸುತ್ತಿ ನೋಡಿದಳು. ಅವಳನ್ನು ವರಿಸುವುದಕ್ಕೆ ಯಾವ ಪುರುಷನೂ ಇಷ್ಟಪಡಲಿಲ್ಲ. ಅವಳು ಕೇವಲಕುರೂಪಿಣಿ! ಯಯಾತಿಪುತ್ರನಾದ ಪೂರುವೆಂಬವನೊಬ್ಬನುಮಾತ್ರ, ಮನಃಪೂರ್ವಕವಾಗಿ ಅವಳನ್ನು ವರಿಸಿದುದರಿಂದ, ಅವಳು ಸಂತುಷ್ಟಳಾಗಿ ಆ ರಾಜರ್ಷಿಗೆ ರಾಜ್ಯಲಕ್ಷ್ಮಿಯನ್ನನುಗ್ರಹಿಸಿದಳು. ಮತ್ತೊಮ್ಮೆ ಆ ಜರೆಯು ಭೂಲೋಕದಲ್ಲಿ ಸಂಚರಿಸುತ್ತಿರುವಾಗ, ಬ್ರಹ್ಮಲೋಕದಿಂದ ಭೂಮಿಗೆ ಬರುತಿದ್ದ ನನ್ನನ್ನು ನೋಡಿದಳು. ನಾನು ನೈಷ್ಠಿಕನೆಂಬುದನ್ನು ತಿಳಿದಿದ್ದರೂ, ಕಾಮಪೀಡಿತೆಯಾಗಿ ನನ್ನನ್ನು ಮೋಹಿಸಿ ಪ್ರಾರ್ಥಿಸಿದಳು. ಎಷ್ಟೆಷ್ಟು ಪ್ರಾರ್ಥಿಸಿದರೂ ನಾನು ಅವಳನ್ನು ವರಿಸದೆ ನಿವಾರಿಸಿದುದರಿಂದ, ಅವಳು ನನ್ನಲ್ಲಿ ಬಹಳ ಕೋಪಗೊಂಡು, “ಓ ಮುನೀಂದ್ರಾ! ನನ್ನ ಕೋರಿಕೆಯನ್ನು ನಿರಾಕರಿಸಿದುದರಿಂದ, ಇನ್ನುಮೇಲೆ ನೀನು,

---

* ಇಲ್ಲಿ ನಾರದನು ಜರೆಯನ್ನು ಒಂದು ಕನ್ಯೆಯನ್ನಾಗಿ ಹೇಳಿ, ಈ ಜರೆಯು ಬಂದೊಡನೆ, ಆಧಿ, ವ್ಯಾಧಿ, ಮುಂತಾದ ಕಷ್ಟಗಳೆಲ್ಲವೂ ತಲೆಹಾಕಿ, ಮರಣಭಯವೂ ಬಾಧಿಸುವುದೆಂಬುದನ್ನು, ಪುರಂಜನನಿಗೂ ಕಾಲಸೈನಿಕರಿಗೂ ನಡೆದ ಯುದ್ಧರೂಪವಾಗಿ ತೋರಿಸುವನು.

ಬಂದುಸ್ಥಳದಲ್ಲಿ ನೆಲೆಯಾಗಿ ನಿಲ್ಲದೆ ತಿರುಗುತ್ತಿರುವನಾಗು." ಎಂದು ಶಪಿಸಿದಳು. ಆಮೇಲೆ ಆ ಕನ್ನಿಕೆಯು, ನಾನು ಹೇಳಿದ ಕೆಲವು ಹಿತೋಕ್ತಿಗಳನ್ನು ಲಾಲಿಸಿ, ಆಧಿವ್ಯಾಧಿಗಳೆರಡಕ್ಕೂ ಪ್ರಭುವಾದ ಭಯನೆಂಬ ಪುರುಷನ ಬಳಿಗೆ ಹೋಗಿ ಪ್ರಾರ್ಥಿಸುವಳು. "ಓ ವೀರಾ! ನೀನು ಎಲ್ಲಾವ್ಯಾಧಿಗಳಿಗೂ ಪ್ರಭುವಾದುದರಿಂದ ನಾನಾಗಿ ಇಷ್ಟಪಟ್ಟು ನಿನ್ನನ್ನು ವರಿಸಬೇಕೆಂದು ಬಂದಿರುವೆನು.ಪ್ರಾಣಿಗಳ ವಿಷಯದಲ್ಲಿ ನಿನ್ನ ಸಂಕಲ್ಪವೊಂದೂ ವ್ಯರ್ಥವಾಗಲಾರದು.ಅಂತಹ ಮಹೋದಾರಸ್ವಭಾವವುಳ್ಳ ನೀನು,ನನ್ನ ಉದ್ದೇಶವನ್ನೀಡೇರಿಸಬೇಕು. ಲೋಕವ್ಯವಹಾರಕ್ಕೂ,ಶಾಸ್ತ್ರಕ್ಕೂ ವಿರೋಧವಿಲ್ಲದೆ,ದಾನಪ್ರತಿಗ್ರಹಗಳಿಗೆ ಯೋಗ್ಯವಾದವಸ್ತುವನ್ನು ಕೇಳಿದವರಿಗೆ ಕೊಡಬೇಕಾದುದೂ, ಕೊಟ್ಟರೆ ತೆಗೆದುಕೊಳ್ಳಬೇಕಾದುದೂ ಯುಕ್ತವು. ಅಂತಹ ವಸ್ತುವನ್ನು ಕೇಳಿದಾಗ ಕೊಡದಿರುವವನೂ, ಕೊಟ್ಟಾಗ ತೆಗೆದುಕೊಳ್ಳದಿರುವವನೂ, ಇವರಿಬ್ಬರೂ ವೃಥಾಭಿಮಾನದಿಂದ ಬೀಗಿದ ಮೂಢರೆಂದೇ ತಿಳಿಯಬೇಕು. ಇಂತವರ ಮೌಢ್ಯಕ್ಕಾಗಿ ವಿವೇಕಿಗಳು ದುಃಖಿಸದಿರಲಾರರು!ಆದುದರಿಂದ ನೀನು ನನ್ನನ್ನು ಸ್ವೀಕರಿಸು! ನಂಬಿ ಬಂದಿರುವ ನನ್ನನ್ನು ನಿರಾಕರಿಸುವುದು ನಿನಗೆ ಯುಕ್ತವಲ್ಲ. ನನ್ನಲ್ಲಿ ಕೃಪೆಮಾಡು! ಮನುಷ್ಯನಿಗೆ ದುಃಖಿತರಲ್ಲಿ ದಯೆಯನ್ನು ತೋರಿಸುವುದಕ್ಕಿಂತಲೂ ಮೇಲಾದ ಧರ್ಮವಿಲ್ಲ." ಎಂದಳು. ಜರೆಯು ಹೇಳಿದ ಈ ಮಾತನ್ನು ಕೇಳಿ ಭಯಪುರುಷನು, ಅವಳ ಸಹಾಯದಿಂದಲೇ ತಾನು ಪ್ರಾಣಿಗಳಿಗೆ ಮರಣವನ್ನು ಕಲ್ಪಿಸಬೇಕೆಂದು ಮನಸ್ಸಿನಲ್ಲಿ ಉದ್ದೇಶಿಸಿ, ಮಂದಹಾಸಪೂರ್ವಕವಾಗಿ ಹೀಗೆಂದು ಹೇಳುವನು. "ಎಲೆ ಭದ್ರೆ! ನಾನು ಇದುವರೆಗೆ ನನ್ನ ಮನಸ್ಸಿನಲ್ಲಿ ಅನೇಕವಿಧವಾಗಿ ವಿಚಾರಮಾಡಿ, ನಿನಗೆತಕ್ಕ ಪತಿಯಾರೆಂಬುದನ್ನು ನಿಷ್ಕರ್ಷಿಸಿರುವೆನು. ನನ್ನ ಮಾತಿನಂತೆ ನಡೆದರೆ ನಿನಗೂ ಕ್ಷೇಮವುಂಟು. ಲೋಕವೆಲ್ಲವೂ ನಿನ್ನನ್ನು ಕುರೂಪಿಣಿಯೆಂದೂ, ಕ್ರೂರೆಯೆಂದೂ ತಿಳಿದು ನಿರಾಕರಿಸುತ್ತಿರುವುದಲ್ಲವೆ? ಆದುದರಿಂದ ನೀನು ಕಣ್ಣಿಗೆ ಕಾಣದಂತೆ ಹೋದರೆ, ಯಾವ ಪ್ರಾಣಿಯನ್ನಾದರೂ ವರಿಸಬಹುದು.ನೀನಾಗಿ ಹೋಗಿ ಕೇಳಿದರೆ ಯಾರೂ ನಿನ್ನನ್ನು ಸ್ವೀಕರಿಸುವುದಕ್ಕೆ ಸಮ್ಮತಿಸಲಾರರು. ನನಗೆ,ಆಧಿ,ವ್ಯಾಧಿ, ವೊದ

ಳಾದ ಎಷ್ಟೋಮಂದಿ ಸೈನಿಕರಿರುವರು. ಅವರನ್ನೂ ಸಹಾಯಕ್ಕಿಟ್ಟು ಕೊಂಡರೆ, ನೀನು ಇಷ್ಟಬಂದಂತೆ ಯಾರನ್ನಾದರೂ ವರಿಸಬಹುದು. ಇದ ಲ್ಲದೆನನಗೆ ವೈಷ್ಣವಜ್ವರನೆಂಬಸಹೋದರನೊಬ್ಬನುಂಟು. ಅವನಂತೆನೀನೂ ನನಗೆ ಸಹೋದರಭಾವದಿಂದ ಸಹಾಯಕಳಾಗಿರು! ನಿಮ್ಮಿಬ್ಬರನ್ನೂ, ಆಧಿ ವ್ಯಾಧಿ ಮೊದಲಾದ ಇತರ ಸೈನಿಕರನ್ನೂ ಸಹಾಯಕ್ಕಿಟ್ಟುಕೊಂಡರೆ,ನಾನು ಲೋಕವೆಲ್ಲವನ್ನೂ ಏಕಾಧಿಪತ್ಯದಿಂದಾಳುತ್ತ ಯಾರಿಗೂ ತಿಳಿಯದೆ ಸಂಚ ರಿಸಬಹುದು." ಎಂದನು. ಇಲ್ಲಿಗೆ ಇಪ್ಪತ್ತಾರನೆಯ ಅಧ್ಯಾಯವು.

---

### ಪುರಂಜನನು ಶತ್ರುಗಳ ಕೈಗೆ ಸಿಕ್ಕಿ ರಾಜ್ಯಭ್ರಷ್ಟನಾದುದು.

ರಾಜೇಂದ್ರಾ!ಹೀಗೆ ಭಯಪುರುಷನು ಮರಣಕಾರಿಗಳಾದ ತನ್ನ ಸೈನಿ ಕರೊಡನೆಯೂ, ಜರಾಪ್ರಜ್ವರಗಳೆಂಬ ಒಡಹುಟ್ಟಿದವರೊಡನೆಯೂ ಸೇರಿ ಭೂಮಿಯೆಲ್ಲವನ್ನೂ ಸುತ್ತುತ್ತಿರುವನು. ಒಮ್ಮೆ ಇವರೆಲ್ಲರೂ ಒಟ್ಟಾಗಿ, ಮಹಾಸರ್ಪದಿಂದ ರಕ್ಷಿತವಾಗಿಯೂ, ಸಮಸ್ತ ಭೋಗಸಾಮಗ್ರಿಗಳಿಂದ ತುಂಬಿದುದಾಗಿಯೂ ಇರುವ ಪುರಂಜನನ ಪಟ್ಟಣವನ್ನು ಮುತ್ತಿದರು. ತನ್ನ ಪ್ರವೇಶಮಾತ್ರದಿಂದಲೇ ಮನುಷ್ಯರನ್ನು ನಿಸ್ಸಾರವಾಗಿ ಮಾಡತಕ್ಕ ಜರೆಯೆಂಬ ತರುಣಿಯು, ಆ ಪುರಂಜನನ ಪಟ್ಟಣವನ್ನು ಪ್ರವೇಶಿಸಿ, ಬಲಾ ತ್ಕಾರದಿಂದ ಅವನನ್ನು ಹಿಡಿದು ಭೋಗಿಸುವುದಕ್ಕೆ ತೊಡಗಿದಳು. ಆಧಿ ವ್ಯಾಧಿ ಮೊದಲಾದ ಸೈನಿಕರೂ ಅವಳನ್ನು ಹಿಂಬಾಲಿಸಿ, ನಾನಾದ್ವಾರಗ ಳಿಂದ ಒಳಹೊಕ್ಕು ಅವನ ಪಟ್ಟಣವನ್ನು ಸೂರೆಗೊಳುತ್ತ ಬಂದರು. ಕು ಟುಂಬದಲ್ಲಿ ವಿಶೇಷಮಮತೆಯನ್ನಿಟ್ಟು, ಆದಕ್ಕಾಗಿ ಕಷ್ಟಪಟ್ಟು ತೊಳಲು ತಿದ್ದ ಪುರಂಜನನು, ಹೀಗೆ ಶತ್ರುಸೈನಿಕರಿಂದ ತನ್ನ ಪಟ್ಟಣವು ಸೂರೆಹೋ ಗುತ್ತಿರುವಾಗ, ನಾನಾವಿಧಸಂಕಟಗಳಿಗೆ ಗುರಿಯಾಗಿ ಕೊರಗುತಿದ್ದನು. ಅನೇಕಶತ್ರುಗಳು ಬಲಾತ್ಕಾರದಿಂದ ಬಂದು ಅವನ ವಸ್ತುಗಳನ್ನೆಲ್ಲಾ ಕೊ ಳ್ಳೆಹೊಡೆಯುತ್ತಿದ್ದುದರಿಂದಲೂ, ಜರೆಯೆಂಬ ತರುಣಿಯು ತನ್ನನ್ನು ಬಿಗಿ ದಪ್ಪಿ, ತನ್ನ ಸಾರವನ್ನೆಲ್ಲಾ ಹೀರುತಿದ್ದುದರಿಂದಲೂ ಕೇವಲವಿಷಯಾಸ ಕ್ತನಾಗಿದ್ದ ಆ ರಾಜನು, ಕಳೆಗುಂದಿ, ಕೃಶನಾಗಿ, ತನ್ನ ಭೋಗಸಾಮಗ್ರಿಗ

ಶೆಲ್ಲವನ್ನೂ ಕಳೆದುಕೊಂಡು ಪ್ರಜ್ಞೆತಪ್ಪಿದಂತಾದನು. ಅವನ ಪಟ್ಟಣವೆಲ್ಲವೂ ಶತ್ರುಬಾಧೆಯಿಂದ ಶಿಥಿಲವಾಗುತ್ತ ಬಂದಿತು. * ಅವನಮಕ್ಕಳು, ಮುಮ್ಮಕ್ಕಳು, ಮುಂತಾದ ಪರಿವಾರದವರೆಲ್ಲರೂ ಅವನಿಗೆ ಪ್ರತಿಕೂಲರಾಗಿ, ತಿರಸ್ಕರಿಸುವುದಕ್ಕೆ ತೊಡಗಿದರು. ಅವನ ಮಂತ್ರಿಗಳು, ಭೃತ್ಯರು, ಮುಂತಾದ ಸೇವಕರೆಲ್ಲರೂ ಅವನನ್ನು ಅನಾದರಿಸುತ್ತ ಬಂದರು. ಅವನ ಕೈಹಿಡಿದ ಹೆಂಡತಿಯಾದ ಬುದ್ಧಿದೇವಿಗೂ ಅವನಲ್ಲಿ ಕ್ರಮಕ್ರಮವಾಗಿ ಪ್ರೇಮವು ತಪ್ಪುತ್ತ ಬಂದಿತು. ಜರೆಯೆಂಬ ವೇಶ್ಯೆಯು ಅವನನ್ನು ತನ್ನ ವಶಮಾಡಿಕೊಂಡು, ಸಾರವನ್ನೆಲ್ಲಾ ಹೀರುತಿದ್ದಳು. ಅವನ ಪುರಕ್ಕೆ ಶತ್ರುಗಳ ಬಾಧೆಯು ಹೆಚ್ಚಿತು. ಈ ದುರವಸ್ಥೆಗಳೆಲ್ಲವನ್ನೂ ನೋಡಿದಾಗ ಅವನ ಮನಸ್ಸಿಗೆ ಮಹತ್ತಾದ ಚಿಂತೆಯು ಹುಟ್ಟಿತು. ಈ ಕಷ್ಟವನ್ನು ನೀಗುವುದಕ್ಕೆ ಪ್ರತಿಕ್ರಿಯೆಯಾವುದೆಂದು ಕಾಣದೆ ತತ್ತಳಿಸುತಿದ್ದನು. ಕಾಲಕನ್ಯೆಯಾದ ಜರೆಯಿಂದ ಅವನ ಅವಯವಗಳು ನಿಸ್ಸಾರಗಳಾಗಿದ್ದರೂ, ಕಾಮಗಳನ್ನನುಭವಿಸುವುದರಲ್ಲಿಯೂ, ಹೆಂಡಿರುಮಕ್ಕಳನ್ನು ಪೋಷಿಸುವುದರಲ್ಲಿಯೂ ಅವನಿಗೆ ಆಸೆಯುಮಾತ್ರ ಹೆಚ್ಚುತ್ತ ಬಂದಿತು. ಆಗಲೂ ಅವನಿಗೆ ಆತ್ಮೋಜ್ಜೀವನಕ್ಕೆ ಬೇಕಾದ ಸದ್ಗತಿಯನ್ನು ಸಾಧಿಸಬೇಕೆಂಬ ಬುದ್ಧಿಯು ಹುಟ್ಟಲಿಲ್ಲ. ಕೊನೆಗೆ ಆ ರಾಜನು ತನ್ನ ಪಟ್ಟಣವೆಲ್ಲವೂ ಕಾಲಸೈನಿಕರಾದ ಗಂಧರ್ವರಿಂದಲೂ, ಭಯಸೈನಿಕರಾದ ಆಧಿವ್ಯಾಧಿಗಳೆಂಬ ಯವನರಿಂದಲೂ ಕಾಲಕನ್ಯೆಯಾದ ಜರೆಯಿಂದಲೂ ಪೀಡಿತವಾಗಿ ಶಿಥಿಲವಾಗುತ್ತ ಬಂದುದನ್ನು ನೋಡಿದನು. ಮನಸ್ಸಿಲ್ಲದಿದ್ದರೂ, ಅವನು ನಿರ್ವಾಹವಿಲ್ಲದೆ ಅದನ್ನು ಬಿಟ್ಟುಹೋಗಬೇಕಾಯಿತು. ಇಷ್ಟರಲ್ಲಿಯೇ ಭಯನ ಸೋದರನಾದ ಪ್ರಜ್ವಾರನು, ತನ್ನಣ್ಣನ ಮನಸ್ಸಂತೋಷಕ್ಕಾಗಿ ಆ ಪಟ್ಟಣವನ್ನು ಸುಡುವುದಕ್ಕೆ ತೊಡಗಿದನು. ಪಟ್ಟಣವು ಸುಡುತ್ತ ಬಂದಹಾಗೆಲ್ಲಾ ಅದರೊಳಗಿದ್ದ ಪುರಂಜನನೂ, ಅವನ ಪುತ್ರ ಮಿತ್ರ ಬಂಧು ಕಳತ್ರ ಪರಿವಾರದವರೆಲ್ಲವೂ ಸಂತಾಪದಿಂದ ಬೇಯುತಿದ್ದರು. ಒಂದು ಕಡೆಯಲ್ಲಿ ಜರೆ, ಮತ್ತೊಂದುಕಡೆಯಲ್ಲಿ ಕಾಲಸೈನಿಕರಾದ ಗಂಧರ್ವರು! ಇನ್ನೊಂದುಕಡೆಯ

* ಇದರಿಂದ ಜೀವನಿಗೆ ಶರೀರಾವಸಾನಕಾಲದಲ್ಲಿ ಬುದ್ಧೀಂದ್ರಿಯಾದಿಗಳಲ್ಲಿ ಪಟುತ್ವವು ತಪ್ಪಿಹೋಗುವುದಾಗಿ ಗ್ರಾಹ್ಯವು.

ಲ್ಲಿ ಭಯಸೈನಿಕರಾದ ಯವನರು! ಸುತ್ತಿಮುತ್ತಿ ಸೂರೆಗೊಳ್ಳುತ್ತಬಂದುದ ರಿಂದಲೂ,ಪ್ರಜ್ವಾರನು ಸುಡುತ್ತಬಂದುದರಿಂದಲೂ,ಅಲ್ಲಿನ ನಗರಪಾಲಕ ನಾದ ಪ್ರಜಾಗರನೂಕೂಡ ತನ್ನ ಕೈಸಾಗದೆ ಆ ಪಟ್ಟಣದೊಂದಿಗೆ ದಗ್ಧ ನಾದನು.ಆಗ ಪುರಂಜನನು ಸಹಿಸಲಾರದ ಸಂಕಟದಿಂದ ತಪಿಸುತ್ತ,ಭಯ ದಿಂದ ನಡುಗಿ, ಆ ಪಟ್ಟಣದಲ್ಲಿ ನಿಲ್ಲಲಾರದೆ, ಕಾಡುಗಿಚ್ಚಿಗೆ ಸಿಕ್ಕಿದ ಮರದ ಪೊಟ್ಟರೆಯಿಂದ ಹೊರಕ್ಕೆ ಬರುವ ಹಾವಿನಂತೆ, ಆ ಸ್ಥಾನವನ್ನು ಬಿಟ್ಟು ಹೊ ರಕ್ಕೆ ಬರುವ ಪ್ರಯತ್ನದಲ್ಲಿದ್ದನು. ರಾಜೇಂದ್ರಾ! ಆಗ ಪುರಂಜನನು, ಗಂ ಧರ್ವರ ಬಾಧೆಯಿಂದ ಹರಿದ ಮೈಯ್ಯುಳ್ಳವನಾಗಿ,ಶಕ್ತಿಗುಂದಿ,ಶತ್ರುಸೈನಿಕ ರು.ಅಲ್ಲಿಂದ ಹೊರಗೆ ಬರುವುದಕ್ಕೂ ಅವಕಾಶಕೊಡದಿರಲು, ಬಹಳವಾಗಿ *ರೋದಿಸುವುದಕ್ಕ ತೊಡಗಿದನು.ಈ ಅವಸ್ಥೆಯಲ್ಲಿಯೂ ಪುರಂಜನನು,ತನ್ನ ಹೆಂಡಿರು, ಮಕ್ಕಳು, ಮುಮ್ಮಕ್ಕಳು, ಸೊಸೆಯರು,ಮುಂತಾದ ಪರಿವಾರ ಗಳನ್ನೂ,ಅದುವರೆಗೆ ತಾನು ಅನುಭವಿಸಿ ಮಿಕ್ಕ ಭೋಗಸಾಮಗ್ರಿಗಳನ್ನೂ ತನ್ನ ಭೃತ್ಯವರ್ಗಗಳನ್ನೂ ಸ್ಮರಿಸಿಕೊಂಡು ದುಃಖಿಸುತ್ತ,ಅಹಂಕಾರಮಮ ಕಾರಗಳಿಂದ ಬುದ್ಧಿಗೆಟ್ಟು, ಕಾಮಾಸಕ್ತನಾಗಿ, ಭಾರ್ಯಾವಿಯೋಗವನ್ನೂ ಸಹಿಸಲಾರದೆ, ನಾನಾವಿಧಚಿಂತೆಯಿಂದ ಕೊರಗುವನು. “ಅಯ್ಯೋ! ನಾನು ಹೋದಮೇಲೆ ದಿಕ್ಕಿಲ್ಲದ ನನ್ನ ಪ್ರಿಯೆಯು ಆ ಸಣ್ಣಮಕ್ಕಳನ್ನು ಕ ಟ್ಟಿಕೊಂಡು ಹೇಗೆ ತಾನೇ ಬದುಕಬಲ್ಲಳು? ಆಹಾ! ಆಕೆಯ ಪಾತಿವ್ರತ್ಯವ ನ್ನು ನಾನೇನೆಂದು ಹೇಳಲಿ! ನಾನು ಊಟಮಾಡುವುದಕ್ಕೆ ಮೊದಲು ಊ ಟಮಾಡಳು! ನಾನು ಸ್ನಾನಮಾಡುವುದಕ್ಕೆ ಮೊದಲು ಸ್ನಾನಮಾಡಳು! ನನ್ನ ಕೋಪವನ್ನು ನೋಡಿ ನಡುಗುವಳು! ನಾನು ಬೈಯುತ್ತಿದ್ದರೂ ಬಾ ಯೆತ್ತದೆ ಸುಮ್ಮನಿರುವಳು! ಹೀಗೆ ವಿವಿಧವಿಧದಿಂದಲೂ ನನ್ನನ್ನು ಅನುವ ರ್ತಿಸುತಿದ್ದುದಲ್ಲದೆ, ನಾನು ತಪ್ಪುದಾರಿಗೆ ಹೋದಾಗ ನನಗೆ ಹಿತವಾದುವ ನ್ನೂ ಹೇಳುತಿದ್ದಳು. ಅಂತಹ ಕಾಂತಾಮಣಿಯು ನನ್ನನ್ನೂ ಆಗಲಿ ದುಃಖಪೀಡಿತೆಯಾಗಿ ಗೃಹಸ್ಥಧರ್ಮವನ್ನು ಹೇಗೆತಾನೇ ನಡೆಸಬಲ್ಲಳು? ಆ

---

* ಇಲ್ಲಿ ರೋದನವೆಂದರೆ ಜೀವನಿಗೆ ಶರೀರಾವಸಾನದಲ್ಲಿ ಮರಣಸಂಕಟದಿಂದುಂ ಟಾಗುವ ಮೇಲುಸಿರೆಂದು ಗ್ರಾಹ್ಯವು.

ಕೆಯು ನನಗೆ ಸರಿಯಾದ ಮಕ್ಕಳನ್ನು ಪಡೆದಿದ್ದರೂ,ನನ್ನನ್ನು ಬಿಟ್ಟಿರಲಾರ ದೆ ಮೃತಿಹೊಂದುವುದರಲ್ಲಿ ಸಂದೇಹವಿಲ್ಲ. ನಾನು ಸತ್ತಮೇಲೆ ನನ್ನ ಕನ್ಯೆಯರಾಗಲಿ, ನನ್ನ ಪುತ್ರರಾಗಲಿ, ಬೇರೆ ದಿಕ್ಕಿಲ್ಲದೆ ಮಹಾಸಮುದ್ರ ಮಧ್ಯದಲ್ಲಿ ಮುರಿದುಹೋದ ಹಡಗಿನ ಪ್ರಯಾಣಿಕರಂತೆ ನಿರಾಧಾ ರರಾಗಿ ಹೇಗೆತಾನೇ ಜೀವಿಸಬಲ್ಲರು” ಎಂದು ಪುರಂಜನನು ದೈನ್ಯದಿಂದ ರೋದಿಸುತಿದ್ದನು. ಎಷ್ಟು ಕೊರಗಿದರೇನು? ಇವನು ದುಃಖಿಸುತ್ತಿ ರುವಾಗಲೇ, ದಯಾಶೂನ್ಯನಾದ ಭಯನು, ಅವನನ್ನೂ ಪಟ್ಟಣದಿಂ ದ ಹೊರಡಿಸಬೇಕೆಂದು ತನ್ನ ಸಹಚರರೊಡಗೂಡಿ ಬಂದು, ಆ ರಾಜ ನನ್ನು ಪಶುವಿನಂತೆ ಬಂಧಿಸಿ ಎಳೆದುಕೊಂಡು ಹೋಗುತ್ತಿದ್ದನು. ಆಗ ಲೂ ಅವನ * ಭೃತ್ಯವರ್ಗವೂ, ಮಂತ್ರಿವರ್ಗವೂ ಮಹಾದುಃಖದಿಂದ ಹಿಂಬಾಲಿಸಿಬರುತ್ತಿದ್ದರು. ಪಟ್ಟಣವೆಲ್ಲವೂ ಸಂಪೂರ್ಣವಾಗಿ ದಗ್ಧವಾ ದಮೇಲೆ ಉರಿಯುತ್ತಿರುವ ಮರದ ಪೊಟ್ಟರೆಯಿಂದ ಹೊರಗೆ ಹಾರಿಬರು ವ ಸರ್ಪದಂತೆ, ಅವನೂ ಆ ಪಟ್ಟಣವನ್ನು ಬಿಟ್ಟು ಹೊರಕ್ಕೆ ಬಂದುಬಿಟ್ಟ ನು. ದಗ್ಧವಾದ ಆ ಪಟ್ಟಣವೂಕೂಡ ಶೀಘ್ರದಲ್ಲಿಯೇ ಅದರ ಗುರುತೇ ಇಲ್ಲದಂತೆ ಮಣ್ಣಾಯಿತು. ಪುರಂಜನನು ಅದನ್ನು ಬಿಟ್ಟು ತಪ್ಪಿಸಿಕೊಂಡು ಬಂದೊಡನೆ,ಅವನ ಹೆಂಡಿರು,ಮಕ್ಕಳುಮುಂತಾದ ಪರಿವಾರಗಳೆಲ್ಲವೂ ದುಃ ಖದಿಂದ ಬೆಂದು ಮೃತವಾದುವು. ಇತ್ತಲಾಗಿ ಪುರಂಜನನು ಮಹಾಬಲಾ ಢ್ಯನಾದ ಯವನಭಟರಿಂದ ಬಲಾತ್ಕಾರಪೂರ್ವಕವಾಗಿ ಎಳೆಯಲ್ಪಡುತ್ತ, ಆ ಪಟ್ಟಣದಿಂದ ತಪ್ಪಿಸಿಕೊಂಡು ಬರುವಾಗಲೂ, ವಿವೇಕವಿಲ್ಲದೆ, ತನ್ನ ಪರಮಮಿತ್ರನಾಗಿಯೂ, ತನಗೆ ಸರ್ವವಿಧದಲ್ಲಿಯೂ ಹಿತೈಷಿಯಾಗಿಯೂ ಇದ್ದ ಅವಿಜ್ಞಾತನೆಂಬ ಮಿತ್ರನನ್ನು ಮನಸ್ಸಿನಿಂದಲಾದರೂ ಸ್ಮರಿಸಿಕೊಳ್ಳ

---

* ಇದರಿಂದ ಜೀವನು ಪರಲೋಕಕ್ಕೆ ಹೋಗುವಾಗ ಬುದ್ಧೀಂದ್ರಿಯಾದಿಗ ಳೂ ಅವನೊಡನೆ ಕಲೆತು ಬರುವುವೆಂದು ಸೂಚಿತವು. “ಮನಷ್ಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ । ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ । ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶ್ರಯಾತ್” ಎಂದು ಇಲ್ಲಿ ಪ್ರ. ಮಾಣವು.

ಲಾರದೆ ಹೋದನು. ಎಲೈ ರಾಜೇಂದ್ರನೆ ! ಇಷ್ಟುಮಾತ್ರವಲ್ಲ, ಆ ಪುರಂಜನನು ಪೂರ್ವದಲ್ಲಿ ಯಾಗಗಳ ನೆವದಿಂದ ಯಾವಯಾವ ಪಶುಗಳನ್ನು ಕರುಣೆಯಿಲ್ಲದೆ ಕೊಂದಿದ್ದನೋ, ಆ ಪ್ರಾಣಿಗಳೆಲ್ಲವೂ ಆ ಕೋಪವನ್ನು ಮನಸ್ಸಿನಲ್ಲಿಟ್ಟು, ಗಂಡುಗೊಡಲಿಯಂತೆ ತೀಕ್ಷ್ಣವಾದ ತಮ್ಮ ಕೊಂಬುಗಳಿಂದ ಅವನನ್ನು ತಿವಿದು ಹಿಂಸಿಸುತಿದ್ದುವು. ಆಮೇಲೆ ಪುರಂಜನನು ಮಹಾಂಧಕಾರಪ್ರಚುರವಾದ ತಮಸ್ಸೆಂಬ ನರಕದಲ್ಲಿ ಮುಳುಗಿ, ಪ್ರಜ್ಞೆಯಿಲ್ಲದೆ ಅನೇಕಸಂವತ್ಸರಗಳವರಗೆ ದುಃಖವನ್ನನುಭವಿಸುತಿದ್ದನು. ಬಾಲ್ಯದಿಂದಲೂ ಸ್ತ್ರೀಲೋಲನಾಗಿದ್ದು, ಪ್ರಾಣೋತ್ಕ್ರಮಣಕಾಲದಲ್ಲಿಯೂ ಅವನು ತನ್ನ ಪತ್ನಿಯನ್ನೇ ಸ್ಮರಿಸಿಕೊಳ್ಳುತ್ತ ಪ್ರಾಣವನ್ನು ಬಿಟ್ಟುದರಿಂದ, ಮುಂದಿನ ಜನ್ಮದಲ್ಲಿ ಅವನು ರಾಜಸಿಂಹನೆಂಬ ವಿದರ್ಭರಾಜನ ಮನೆಯಲ್ಲಿ * ಹೆಂಗಸಾಗಿ ಹುಟ್ಟಿದನು. ಈ ಕನ್ಯಕೆಯು ತಂದೆಯ ಮನೆಯಲ್ಲಿ ಸುಖದಿಂದ ಬೆಳೆಯುತಿದ್ದಳು. ಈಕೆಯು ಪರಮಭಾಗವತೋತ್ತಮನನ್ನಲ್ಲದೆ ಬೇರೊಬ್ಬನನ್ನು ತಾನು ವರಿಸುವುದಿಲ್ಲವೆಂದು ದೃಢಪ್ರತಿಜ್ಞೆಯನ್ನು ಮಾಡಿದ್ದಳು. ಈ ಕಾಲದಲ್ಲಿ ಮಲಯಪರ್ವತದ ಸಮೀಪದೇಶದಲ್ಲಿ ಸುಪ್ರಸಿದ್ಧನಾದ ಮಲಯಧ್ವಜನೆಂಬ ರಾಜನಿದ್ದನು. ಅವನು ಯುದ್ಧದಲ್ಲಿ ತನ್ನ ವೀರ್ಯದಿಂದ ಅನೇಕರಾಜರನ್ನು ಜಯಿಸಿ ಪರದೇಶವನ್ನು ಸ್ವಾಧೀನಮಾಡಿದವನು. ಆ ಮಲಯಧ್ವಜನು ಈಕೆಯನ್ನು ವಿವಾಹಮಾಡಿಕೊಂಡು, ಅವಳಲ್ಲಿ † ನೀಲಲೋಚನೆಯಾದ ಒಬ್ಬ ಕನ್ಯೆಯನ್ನೂ, ಏಳುಮಂದಿ ಗಂಡುಮಕ್ಕಳನ್ನೂ ಪಡೆದನು. ಈ ಏಳುಮಂದಿ ಮಕ್ಕಳೂ ದ್ರವಿಡದೇಶಾಧಿಪತಿಗಳೆಂ

---

* ಇದರಿಂದ ಜೀವನಿಗೆ ಪ್ರಾಣೋತ್ಕ್ರಮಣಕಾಲದಲ್ಲಿ ಯಾವ ಭಾವನೆಯುಂಟಾಗುವುದೋ ಅದಕ್ಕೆ ತಕ್ಕ ಜನ್ಮವುಂಟಾಗುವುದೆಂದು ಸೂಚಿತವು.

† ವೈದರ್ಭಿಯು ಒಬ್ಬ ಕನ್ಯೆಯನ್ನೂ, ಏಳುಮಂದಿ ಗಂಡು ಮಕ್ಕಳನ್ನೂ ಪಡೆದಳೆಂಬುದರಿಂದ, ಭಗವತ್ಸೇವೆಯಲ್ಲಿ ಅಭಿರುಚಿಯೂ, ಶ್ರವಣ, ಕೀರ್ತನ, ಸ್ಮರಣ ಪಾದಸೇವನ, ಪಾದಾರ್ಚನ, ವಂದನ, ದಾಸ್ಯಗಳೆಂಬ ಏಳುಬಗೆಯ ಭಕ್ತ್ಯಂಗಗಳೂ ಉಂಟಾದುವೆಂದು ಸೂಚಿತವು. ನವವಿಧಭಕ್ತಿಗಳಲ್ಲಿ ಸಖ್ಯ, ಆತ್ಮನಿವೇದನವೆಂಬಿವೆರಡೂ ಮುಂದೆ ಭಗವಂತನಿಂದ ಸಾಕ್ಷಾತ್ತಾಗಿಯೇ ಉಪದೇಶಿಸಲ್ಪಡುವುದರಿಂದ. ಇಲ್ಲಿ ಏಳು ಮಾತ್ರ ಹೇಳಲ್ಪಟ್ಟಿವೆ,

ದು ಪ್ರಸಿದ್ಧರಾದರು. ಈ ಒಬ್ಬೊಬ್ಬ ಮಗನಲ್ಲಿಯೂ ಒಂದೊಂದುಕೋಟಿ ಮಕ್ಕಳಾದರು. ಈ ಸಂತತಿಯವರಿಂದಲೇ ಮನ್ವಂತರಕಾಲದಲ್ಲಿಯೂ, ಅದ ರಿಂದಾಚೆಗೆ ರಾಜ್ಯಾಧಿಪತ್ಯವು ನಡೆಸಲ್ಪಡುವುದು. ಆ ಮಲಯಧ್ವಜನ ಜ್ಯೇಷ್ಠಕುಮಾರಿಯು, ವ್ರತನಿಷ್ಠಳೆಂಬುದನ್ನು ತಿಳಿದು, ಅಗಸ್ತ್ಯನು ಅವ ಳನ್ನು ಮದುವೆಯಾಗಿ, ಅವಳಲ್ಲಿ ಬಹಳ ಧೀಮಂತನೆನಿಸಿದ ಇಧ್ಮವಾಹನೆಂಬ ಕುಮಾರನನ್ನು ಪಡೆದನು. ಮಲಯಧ್ವಜನು ತನ್ನ ಕೊನೆಗಾಲದಲ್ಲಿ ರಾಜ್ಯ ವನ್ನು ತನ್ನ ಮಕ್ಕಳಿಗೆ ಹಂಚಿಕೊಟ್ಟು, ಶ್ರೀಕೃಷ್ಣನನ್ನಾರಾಧಿಸಬೇಕೆಂಬ ಉದ್ದೇಶದಿಂದ ಮಲಯವೆಂಬ ಕುಲಪರ್ವತಪ್ರಾಂತಕ್ಕೆ ಹೋದನು.ಹೀಗೆ ಸಂಸಾರವನ್ನು ಬಿಟ್ಟು,ವಿರಕ್ತಿಯಿಂದ ತನ್ನ ಪತಿಯು ತಪೋವನಕ್ಕೆ ಹೋ ಗುತ್ತಿರುವುದನ್ನು ನೋಡಿ, ವೈದರ್ಭಿಯೂಕೂಡ, ತನ್ನ ಅರಮನೆಯನ್ನೂ, ಭೋಗಸಾಮಗ್ರಿಯನ್ನೂ ಬಿಟ್ಟು ಚಂದ್ರನನ್ನು ಹಿಂಬಾಲಿಸುವ ಚಂದ್ರಿಕೆ ಯಂತೆ ತನ್ನ ಪತಿಯನ್ನೇ ಹಿಂಬಾಲಿಸಿ ಹೋದಳು. ಆ ಕುಲಪರ್ವತದಲ್ಲಿ ಚಂದ್ರಮಸೆಯೆಂಬ ಹೆಸರುಳ್ಳ ಒಂದಾನೊಂದು ಪುಣ್ಯನದಿಯು ಪ್ರವಹಿ ಸುತ್ತಿರುವುದು. ಆ ನದೀತೀರದಲ್ಲಿ ಮಲಯಧ್ವಜನು ಆಶ್ರಮವನ್ನು ಮಾಡಿ ಕೊಂಡು, ಆ ಪುಣ್ಯಜಲದಲ್ಲಿ ಸ್ನಾನಪಾನಗಳಿಂದ ತನ್ನ ದೇಹದೊಳಗಿನ ಮ ತ್ತು ಹೊರಗಿನ ಕಲ್ಮಷಗಳೆಲ್ಲವನ್ನೂ ನೀಗಿಸಿಕೊಂಡು, ಆಗಾಗ ಲಭಿಸಿದ ಗೆಡ್ಡೆಗೆಣಸುಗಳಿಂದಲೂ,ಫಲಪುಷ್ಪಗಳಿಂದಲೂ, ಹುಲ್ಲುಕಡ್ಡಿಗಳಿಂದಲೂ, ಒಮ್ಮೊಮ್ಮೆ ಕೇವಲ ಜಲಾಹಾರದಿಂದಲೂ,ದೇಹಧಾರಣವನ್ನುಮಾಡುತ್ತ ತಪೋನಿರತನಾಗಿದ್ದನು.ಹೀಗೆ ತಪಸ್ಸಿನಲ್ಲಿ ನಿಂತ ಮಲಯಧ್ವಜನು,ಶೀತೋ ಷ್ಣಗಳು, ಮಳೆಗಾಳಿಗಳು,ಹಸಿವುಬಾಯಾರಿಕೆಗಳು,ಮುಂತಾದುವುಗಳೊಂ ದನ್ನೂ ಲಕ್ಷ್ಯಮಾಡದೆ,ಯಾವುದನ್ನೂ ತನಗೆ ಪ್ರಿಯವೆಂದಾಗಲಿ,ಅಪ್ರಿಯ ವೆಂದಾಗಲಿಭಾವಿಸದೆ, ಸುಖದುಃಖಾದಿದ್ವಂದ್ವಗಳೆಲ್ಲವನ್ನೂ ಜಯಿಸಿ ಸಮ ಸ್ತ ವಿಷಯಗಳಲ್ಲಿಯೂ ಸಮದೃಷ್ಟಿಯುಳ್ಳವನಾಗಿದ್ದನು. ಹೀಗೆ ಮಲಯ ಧ್ವಜನು ಕರ್ಮಯೋಗದಿಂದಲೂ, ಜ್ಞಾನಯೋಗದಿಂದಲೂ ತನ್ನ ಪುಣ್ಯ ಪಾಪಕರ್ಮಗಳೆಲ್ಲವನ್ನೂ ನೀಗಿ, ಯಮನಿಯಮಾದ್ಯ ಯೋಗಾಂಗಗಳಿಂದ ಇಂದ್ರಿಯಗಳನ್ನೂ, ಪ್ರಾಣವಾಯುವನ್ನೂ, ಮನಸ್ಸನ್ನೂ ಜಯಿಸಿ ವಶ

ಪಡಿಸಿಕೊಂಡನು. ಮನಸ್ಸನ್ನು ಪರಮಾತ್ಮನಲ್ಲಿ ನೆಲೆಗೊಳಿಸಿ ತನ್ನನ್ನೇ ಪರಮಾತ್ಮಸ್ವರೂಪನೆಂದು ಭಾವಿಸುತ್ತ, ವಾಸುದೇವನಲ್ಲಿ ಭಕ್ತಿಯನ್ನು ಸಾಧಿಸಿ,ತನ್ನ ಹೊರಗಿನ ಶರೀರಾದಿಗಳೆಲ್ಲವನ್ನೂ ಮರೆತು. ಕಂಬದಂತೆ ನಿಶ್ಚಲನಾಗಿ ನೂರು ದೇವವರುಷಗಳವರೆಗೆ ದೃಢತಪಸ್ಸಿನಲ್ಲಿದ್ದನು, ಅವನು ಆ ಸಮಾಧಿಯೋಗದಲ್ಲಿ, ಜೀವಾತ್ಮನಲ್ಲಿ ಒಳಹೊಕ್ಕಿರುವ ಪರಮಾತ್ಮನಸ್ವರೂಪ ವೈಲಕ್ಷಣ್ಯವನ್ನೂ ಧ್ಯಾನದಿಂದಕಂಡುಕೊಂಡು, ದೇಹಾದಿಗಳೆಲ್ಲವೂ ಸ್ವಪ್ನಪದಾರ್ಥಗಳಂತೆ ಅನಿತ್ಯವೆಂಬ ನಿಶ್ಚಯಜ್ಞಾನದಿಂದ ಅವೆಲ್ಲವನ್ನೂ ಮರೆತುಬಿಟ್ಟನು. ಲೋಕಗುರುವಾದ ಶ್ರೀಹರಿಯಿಂದುಪದೇಶಿಸಲ್ಪಟ್ಟು, ಸರ್ವತೋಮುಖವಾಗಿ ಬೆಳಗುತ್ತಿರುವ ಶುದ್ಧವಾದ ಆತ್ಮಜ್ಞಾನವೆಂಬ ದೀಪದಿಂದ, ತನ್ನಲ್ಲಿ ಪರಮಾತ್ಮನೂ, ಪರಮಾತ್ಮನಲ್ಲಿ ತಾನೂ ನೆಲೆಗೊಂಡಿರುವುವನ್ನು ಕಂಡುಕೊಂಡನು.ಕೊನೆಗೆ ಉಪಾಸನಾತ್ಮಕವಾದ ಆ ಭಾವನೆಯನ್ನು ಬಿಟ್ಟು, ತಾನೇ ಬ್ರಹ್ಮಾತ್ಮಕನೆಂಬ ಭಾವದಿಂದ ದೇಹವನ್ನೂ ಬಿಟ್ಟನು. ಆತನ ಪತ್ನಿಯಾದ ವೈದರ್ಭಿಯೂಕೂಡ,ಪತಿಯನ್ನು ಪಚರಿಸುವುದಕ್ಕಾಗಿ ಸಮಸ್ತರಾಜಭೋಗಗಳನ್ನೂ ಬಿಟ್ಟುಬಂದು, ಅವನನ್ನು ಪ್ರೀತಿಯಿಂದ ಹಿಂಬಾಲಿಸಿ ಶುಶ್ರೂಷೆಮಾಡುತಿದ್ದಳು. ಪತಿಯೇ ಪರದೈವವೆಂದು ನಂಬಿದ ಆ ಸತೀಮಣಿಯು,ಜಟಾವಲ್ಕಲಗಳನ್ನು ಧರಿಸಿ,ಉಪವಾಸಾದಿವ್ರತಗಳಿಂದ ಕೃಶಳಾಗಿ,ಕೆಂಡದಮೇಲಿನ ಹೊಗೆಯಿಲ್ಲದ ಜ್ವಾಲೆಯಂತೆ, ತಪಸ್ಸಿನಲ್ಲಿ ತನ್ನ ಪತಿಯನ್ನೆ ಹೋಲುತಿದ್ದಳು. ಹೀಗೆ ಪತಿಯನ್ನುಪಚರಿಸುತಿದ್ದ ಆಕೆಗೆ,ಆ ಕಾರ್ಯಾತುರದಿಂದ ಪತಿಯು ದೇಹತ್ಯಾಗಮಾಡಿದ ಸಂಗತಿಯೂ ತಿಳಿಯದೆ ಹೋಯಿತು.ಮೊದಲಿನಂತೆಯೇ ಪತಿಯಪಾದಗಳನ್ನು ಹಿಡಿದು ಉಪಚರಿಸುತಿದ್ದಾಗ,ಕೈಗೆ ಉಷ್ಣವು ತೋರದಿದ್ದುದರಿಂದ, ಅವಳ ಮನಸ್ಸಿಗೆ ಸಂದೇಹವು ಹುಟ್ಟಿತು. ಕೊನೆಗೆ ಪತಿಯು ಮೃತನಾದನೆಂದು ನಿಶ್ಚಯಿಸಿ ಮಂದೆಯನ್ನಗಲಿದ ಹೆಣ್ಣುಜಿಂಕೆಯಂತೆ ಅನಾಥೆಯಾಗಿ ದುಃಖದಿಂದ ತತ್ತಳಿಸುತ್ತಿದ್ದಳು. ದಿಕ್ಕಿಲ್ಲದ ತನ್ನ ಸ್ಥಿತಿಗಾಗಿ ದೈನ್ಯದಿಂದ ಗೋಳಿಡುತ್ತ, ಕಣ್ಣೀರಿನಿಂದ ತನ್ನ ಸ್ತನಗಳನ್ನು ತೊಯಿಸುತ್ತ,ನಿರ್ಜನವಾದ ಆ ತಪೋವನದಲ್ಲಿ ತನ್ನ ಪತಿಯನ್ನುಕುರಿತು ಹೀಗೆಂದು ವಿಲಪಿಸುವಳು. ''ಓ,ರಾಜರ್ಷೀ!

ಏಳು!ಏಳು! ನೀನು ಪ್ರಜೆಗಳನ್ನು ಕಾಪಾಡತಕ್ಕವನಲ್ಲವೆ? ಕಳ್ಳರಿಂದಲೂ, ದುಷ್ಟ ಕ್ಷತ್ರಿಯರಿಂದಲೂ, ಭಯಪಡುತ್ತಿರುವ ಸಮುದ್ರಮೇಖಲೆಯಾದ ಈ ಭೂಮಿಯನ್ನು ರಕ್ಷಿಸಬೇಡವೆ? ಏಳು!ಈ ಭೂಮಿಯ ಭಯವನ್ನು ನೀಗಿಸು” ಎಂದು ಪತಿಯ ಕಾಲಮೇಲೆ ಬಿದ್ದುಗೋಳಿಡುತ್ತ, ಧಾರಧಾರೆಯಾಗಿ ಕಣ್ಣೀರನ್ನು ಬಿಡುತಿದ್ದಳು. ಕೊನೆಗೆ ಕಟ್ಟಿಗೆಗಳನ್ನು ಸಂಗ್ರಹಿಸಿ, ಒಂದು ಚಿತೆಯನ್ನೇರ್ಪಡಿಸಿ,ಆ ಚಿತೆಯಮೇಲೆ ಪತಿಯ ದೇಹವನ್ನು ಏರಿಸಿಟ್ಟು ಅಗ್ನಿ ಪ್ರತಿಷ್ಠೆಯನ್ನೂ ಮಾಡಿದಳು.ತಾನೂ ಆಪತಿಯೊಡನೆ ಸಹಗಮನ ಮಾಡಬೇಕೆಂಬ ನಿಶ್ಚಯದಿಂದ, ಆ ಚಿತೆಯನ್ನೇರುವುದಕ್ಕೆ ಸಿದ್ಧಳಾದಳು. ಇಷ್ಟರಲ್ಲಿ ಆತ್ಮಜ್ಞಾನವುಳ್ಳ ಬಹಳ ವೃದ್ಧನಾದ ಬ್ರಾಹ್ಮಣನೊಬ್ಬನು, ಥಟ್ಟನೆ ಅಲ್ಲಿಗೆ ಬಂದು, ದುಃಖಿತೆಯಾದ ಆಕೆಯನ್ನು ನೋಡಿ,ಹಿತೈಷಿಯಾದ ಮಿತ್ರನಂತೆ ಮಧುರವಾಕ್ಯದಿಂದ ಅವಳನ್ನು ಸಮಾಧಾನಪಡಿಸುವನು. “ಎಲೆ ಭದ್ರೆ! ನೀನು ಯಾರು? ಯಾರ ಮಗಳು? ಇಲ್ಲಿ ಮಲಗಿರುವನಾರು?ಇವನಿಗಾಗಿ ನೀನು ದುಃಖಿಸುವುದಕ್ಕೆ ಕಾರಣವೇನು?ನಾನು ನಿನಗೆ ಬಹಳ ಪುರಾತನಸ್ನೇಹಿತನೆಂಬುದನ್ನು ಬಲ್ಲೆಯಷ್ಟೆ?ನಿನ್ನನ್ನು ಬಹುದಿನಗಳವರೆಗೆ ಬೆಳೆಸಿದವನೇ ನಾನು? ಒಂದುವೇಳೆ ನೀನು ನನ್ನ ಗುರುತನ್ನು ಮರೆತಿದ್ದರೂ ಮರೆತಿರಬಹುದು. ಬಹುಕಾಲಕ್ಕೆ ಹಿಂದೆ, ಅವಿಜ್ಞಾತನೆಂಬ ಮಿತ್ರನೊಬ್ಬನು ನಿನ್ನೊಡನೆಯೇ ಕಲೆತಿದ್ದನೆಂಬುದನ್ನಾದರೂ ನೀನುನೆನಪಿನಲ್ಲಿಟ್ಟಿರುವೆಯಾ? ನಿನಗೆ ಆ ಸ್ನೇಹಿತನು ಸರ್ವವಿಧದಲ್ಲಿಯೂ ಹಿತೈಷಿಯಾಗಿದ್ದರೂ, ಅವನನ್ನೂ ಲಕ್ಷ್ಯಮಾಡದೆ, ನೀಚನಾದ ಗ್ರಾಮ್ಯಭೋಗಗಳನ್ನು ಅನುಭವಿಸಬೇಕೆಂಬ ಆತುರದಿಂದ, ಭೋಗಸ್ಥಾನಗಳನ್ನು ಹುಡುಕುತ್ತ ಹೋದೆಯಲ್ಲವೆ?ಅದಾದರೂ ನಿನ್ನ ಸ್ಮರಣೆಯಲ್ಲಿರುವುದೆ?ಆ ನಿನ್ನ ಮಿತ್ರನೇ ನಾನು! ಎಲೆ ಆರ್ಯೆ! ನನ್ನನ್ನು ನೀನು ಸಂಪೂರ್ಣವಾಗಿಯೇ ಮರೆತಹಾಗಿದೆ. ಮತ್ತೊಂದು ವೃತ್ತಾಂತವನ್ನು ಜ್ಞಾಪಿಸುವೆನು ಕೇಳು. ಪೂರ್ವದಲ್ಲಿ ನಾವಿ

* ಈ ವೈದರ್ಭಿಯೇ ಪೂರ್ವಜನ್ಮದಲ್ಲಿ ಪುರಂಜನನಾಗಿದ್ದವಳಾದುದರಿಂದ, ಅವನಿಗೆ ಆಗ ಅವಿಜ್ಞಾತನೆಂಬ ಹೆಸರಿನಿಂದ ಮಿತ್ರನಾಗಿದ್ದ ಪರಮಾತ್ಮನೇ ಇಲ್ಲಿಗೂ ಬ್ರಾಹ್ಮಣವೇಷದಿಂದ ಬಂದುದಾಗಿ ತಿಳಿಯಬೇಕು.

ಬ್ಬರೂ * ಸಂಗಡಿಗರಾದ ಎರಡು ಹಂಸಗಳು. ಬಹುಸಂವತ್ಸರಗಳವರೆಗೆ ಮಾನಸಸರೋವರದಲ್ಲಿ ಕಾಲವನ್ನು ಕಳೆಯುತಿದ್ದೆವು. ಆಗಲೂ ನೀನು ಗ್ರಾಮ್ಯಸುಖಗಳಲ್ಲಿಯೇ ಆಸೆಪಟ್ಟು, ಸ್ನೇಹಿತನಾದ ನನ್ನನ್ನೂ ಮರೆತು ಈಭೂಮಿಗೆ ಬಂದು, ಭೋಗಸ್ಥಾನವನ್ನು ಹುಡುಕುತ್ತ ಸ್ತ್ರೀನಿರ್ಮಿತವಾದೊಂದು ಪಟ್ಟಣವನ್ನು ನೋಡಿದೆ! † ಆ ಪಟ್ಟಣಕ್ಕೆ ಸೇರಿದಂತೆ ಐದು ಪುರೋದ್ಯಾನಗಳಿದ್ದುವು. ಮತ್ತು ಆ ಪಟ್ಟಣಕ್ಕೆ ನವದ್ವಾರಗಳು, ಮೂರು ಪ್ರಾಕಾರಗಳು, ಅದಕ್ಕೆ ರಕ್ಷಕನಾದ ನಗರಪಾಲಕನೊಬ್ಬನು,ಇಷ್ಟವಾದ ವಸ್ತುಗಳೆಲ್ಲವನ್ನೂ ಒದಗಿಸಿಕೊಡತಕ್ಕ ಆರು ನಿವೇಶನಗಳು,ಐದು ಸಾಲಿನ ಅಂಗಡಿಬೀದಿಗಳು,ಐದು ಬಗೆಯ ಸಾಧನಗಳು,ಪ್ರಕೃತಿಯೆಂಬ ಹೆಂಗಸೇ ಅದಕ್ಕೆ ಒಡತಿ,ಹೀಗೆ ವಿಚಿತ್ರಸನ್ನಿವೇಶಗಳಿಂದ ಕಲ್ಪಿತವಾದ ಆ ಪಟ್ಟಣವನ್ನು ನೀನು ನೋಡಿದೆ ! ಆ ಪಟ್ಟಣದ ಐದು ಪುರೋದ್ಯಾನಗಳೂ ಪಂಚೇಂದ್ರಿಯಗಳನ್ನೂ ಆನಂದಪಡಿಸುವಂತಿದ್ದುವು. ಅಲ್ಲಿನ ಒಂಭತ್ತು ಪುರದ್ವಾರಗಳೂ ಹೋಗಿಬರುವುದಕ್ಕೆ ಅನುಕೂಲವಾಗಿದ್ದುವು. ಅಲ್ಲಿನ ಮೂರು ಪ್ರಾಕಾರಗಳಲ್ಲಿ, ಒಂದು ಅಗ್ನಿಮಯವಾಗಿಯೂ, ಒಂದು ಜಲಮಯವಾಗಿಯೂ, ಒಂದು ಪೃಥಿವೀಮಯವಾಗಿಯೂ ಇದ್ದುವು. ಮೇಲೆ ಹೇಳಿದ ಆರು ವಿಕ್ರಯಸ್ಥಳಗಳಲ್ಲಿ ಮನಸ್ಸಿಗೂ, ಇಂದ್ರಿಯಗಳಿಗೂ ಬೇಕಾದ ವಸ್ತುಗಳೆಲ್ಲವೂ ಲಭಿಸುತಿದ್ದುವು. ಅಲ್ಲಿನ ಅಂಗಡಿಬೀದಿಗಳೆಲ್ಲವೂ ಕೈಗಾರಿಕೆಯ ವಿಚಿತ್ರಶಕ್ತಿಯನ್ನು ತೋರಿಸುತಿದ್ದುವು. ಆ ಐದು ಸಾಧನಗಳೂ ಪಂ

---

* ಸಂಗಡಿಗರಾದ ಹಂಸಗಳೆಂದರೆ ಆತ್ಮ ಪರಮಾತ್ಮರೆಂದು ಭಾವವು. ಮಾನಸಸರೋವರವೆಂದರೆ ಹೃದಯಕಮಲವು.

† ಇಲ್ಲಿ ಶರೀರಪರವಾಗಿ, ಐದು ಪುರೋದ್ಯಾನಗಳೇ ಐದು ಶಬ್ದಾದಿ ವಿಷಯಗಳು. ಇಂದ್ರಿಯಸ್ಥಾನಗಳೇ ನವದ್ವಾರಗಳು. ಪೃಥಿವ್ಯಪ್ತೇಜಸ್ಸುಗಳೆಂಬಿವು ಮೂರೂ ಕೋಟೆಗಳು, ಪ್ರಾಣವಾಯುವೇ ಕಾವಲಿನವನು. ಮನಸ್ಸು ಮತ್ತು ಜ್ಞಾನೇಂದ್ರಿಯಗಳು ಸೇರಿ ಇವಾರೂ ನಿವೇಶನಗಳು. ಕರ್ಮೇಂದ್ರಿಯಗಳೈದೂ ಅಂಗಡಿಬೀದಿಗಳು, ಪಂಚಭೂತಗಳೇ ಸಾಧನಸಾಮಗ್ರಿಗಳೆಂದು ಗ್ರಾಹ್ಯವು.

ಚಭೂತಗಳಂತೆ ದೃಢವಾದ ಬಲುಮೆಯುಳ್ಳುವಾಗಿದ್ದುವು. ಬುದ್ಧಿಶ
ಕ್ತಿಗೆ ಅಧೀನನಾದ ಪುರುಷನು, ಅದರಲ್ಲಿ ಪ್ರವೇಶಿಸಿದಮೇಲೆ ತನ್ನನ್ನಾಗಲಿ
ತನ್ನ ಸ್ನೇಹಿತರನ್ನಾಗಲಿ ತಿಳಿಯಲಾರನು. ಎಲೆ ಭದ್ರೆ ! ನೀನು ಆ
ಪಟ್ಟಣವನ್ನು. ಪ್ರವೇಶಿಸಿ, ಸ್ತ್ರೀಲೋಲನಾಗಿದ್ದುದರಿಂದ ನಿನ್ನ ಹಿಂದಿ
ನ ಸ್ಮರಣವೆಲ್ಲವನ್ನೂ ಮರೆತು, ಅವಳ ಸಹವಾಸದಿಂದ ಪಾಪಿಷ್ಠವಾದ
ಈ ಸ್ತ್ರೀಜನ್ಮವೆಂಬ ದುರ್ದಶೆಯನ್ನು ಹೊಂದಿದೆ. ಆದುದರಿಂದ ಎಲೆ
ಸುಂದರಿ!ನೀನು ವಾಸ್ತವದಲ್ಲಿ ವಿದರ್ಭರಾಜನ ಮಗಳಲ್ಲ! ಈ ಮಲಯಧ್ವ
ಜನು ನಿನ್ನ ಪ್ರಿಯನೂ ಅಲ್ಲ ! ಪೂರ್ವಜನ್ಮದಲ್ಲಿ ನೀನು ಬುದ್ಧಿಯೆಂಬ
ನಾಮಾಂತರವುಳ್ಳ ಆ ಪುರಂಜನನಿಗೆ ಪತ್ನಿಯೂ ಅಲ್ಲ ! ಮೊದಲು ನೀನು
ಪುರುಷನೆಂದೂ,ಈಗ ಸ್ತ್ರೀಯೆಂದೂ ಭ್ರಾಂತಿಗೊಂಡಿರುವುದಕ್ಕೆ ಆ ಭಗವಂ
ತನ ಮಾಯೆಯಲ್ಲದೆ ಬೇರೆ ಕಾರಣವಿಲ್ಲ!ನಾವಿಬ್ಬರೂ ಮೊದಲು ಮಾನಸಸ
ರೋವರದಲ್ಲಿದ್ದ ಎರಡು ಹಂಸಪಕ್ಷಿಗಳು!ಆಗ ನಿನ್ನ ಸ್ವರೂಪವುಹೇಗಿತ್ತೆಂ
ಬುದನ್ನು ತಿಳಿಸುವೆನು ಕೇಳು! ನಾವಿಬ್ಬರೂ ಮೊದಲು ಶುದ್ಧಸ್ವರೂಪವು
ಳ್ಳವರಾಗಿಯೇ ಇದ್ದೆವು. ನಾವಿಬ್ಬರೂ ಯಾವಾಗಲೂ ಶರೀರಾತ್ಮಭಾವ
ದಿಂದ ಒಂಬಾಗಿಯೇ ಕಲೆತಿರತಕ್ಕವರು ನಾನೂ, ನೀನೂ ಬೇರೆಯಲ್ಲ.
ಹಾಗಿದ್ದರೂ ಈಗ ನಮ್ಮಿಬ್ಬರಿಗೆ ಪರಸ್ಪರ ವಿಯೋಗವುಂಟಾದಂತೆ ನೀನೂ,
ನಾನೂ, ಬೇರೆಯಾಗಿ ತೋರುವುದಕ್ಕೆ ಕಾರಣವೇನೆಂಬುದನ್ನು ಮಹಾಪಂ
ಡಿತನಾದರೆಮಾತ್ರ ನಿಶ್ಚಯಿಸಿತಿಳಿಯಬಲ್ಲನು.ನಮ್ಮಿಬ್ಬರಿಗೂ ಹೀಗೆ ಶರೀರಾ
ತ್ಮಭಾವವು ಬಹುಕಾಲದಿಂದ ನಡೆದುಬಂದಿರುವುದರಿಂದ,ನಾನೇ ನೀನು, ನೀ
ನೇ ನಾನಲ್ಲದೆ ಬೇರೆಯಲ್ಲ. ಮನುಷ್ಯನು ತನ್ನ ಪ್ರತಿಬಿಂಬವನ್ನು ಒಂದು
ದೊಡ್ಡ ಕನ್ನಡಿಯಲ್ಲಿ ನೋಡುವಾಗ,ತಾನು ದೊಡ್ಡವನಂತೆಯೇ ಕಾಣುವ
ನು. ಅದೇ ಮನುಷ್ಯನು ಮತ್ತೊಬ್ಬರ ಕಣ್ಣಾಲಿಯಲ್ಲಿ ತನ್ನ ಪ್ರತಿಬಿಂಬವ
ನ್ನು ನೋಡುವಾಗ, ಬಹಳಸೂಕ್ಷ್ಮರೂಪದಿಂದ ಕಾಣುವನು. ಹೀಗೆ ಒಬ್ಬ
ಮನುಷ್ಯನೇ ಆಯಾ ಆಶ್ರಯವಸ್ತುಗಳಲ್ಲಿ ಕಾಣುವ ತನ್ನ ಪ್ರತಿಬಿಂಬ
ಗಳನ್ನು ನೋಡಿದಾಗ,ತನ್ನಲ್ಲಿಆಕಾರಭೇದವುಂಟೆಂದುಭ್ರಮಿಸಬಹುದಲ್ಲವೆ?
ಹಾಗೆಯೇ ಶರೀರಾತ್ಮಭಾವದಿಂದಿರುವ ನಾವಿಬ್ಬರೂ ಒಂದೇ ಆಗಿದ್ದರೂ

ಸ್ಥೂಲಸೂಕ್ಷ್ಮಶರೀರಗಳಲ್ಲಿ ಪ್ರವೇಶಿಸುವುದರಿಂದ, ಆ ಶರೀರದ ಆಕಾರ ಭೇದವನ್ನನುಸರಿಸಿ, ಬೇರೆಬೇರೆ ರೂಪವುಳ್ಳವರಂತೆ ಕಾಣುವೆವು. ಆದ ರೇನು ? ಎಲೆ ನಾರೀಮಣಿ ! ನೀನೇ ನನಗೆ ಶರೀರವು. ನಾನು ನಿನ್ನಲ್ಲಿ ಅಂತರಾತ್ಮನಾಗಿರತಕ್ಕವನು. ಇದೇ ನಮ್ಮಿಬ್ಬರಿಗೂ ಇರುವ ಭೇದವು." ಎಂದನು. ಹೀಗೆ ತನ್ನ ಮಿತ್ರನಾದ ಹಂಸನಿಂದ ಎಚ್ಚರಿಸಲ್ಪಟ್ಟ ಆ ಸ್ತ್ರೀ ವ್ಯಕ್ತಿಯು, ತನಗೆ ಮರೆತುಹೋಗಿದ್ದ ಪೂರ್ವಜನ್ಮಸ್ಮರಣವನ್ನು ತಿರುಗಿ ಹೊಂದಿ, ತಾನೇ ಪುರಂಜನನೆಂಬುದನ್ನು ತಿಳಿದುಕೊಂಡಳು. "ಓ! ಪ್ರಾ ಚೀನಬರ್ಹಿ ! ಈ ಕಥೆಯನ್ನು ನೀನು ಚೆನ್ನಾಗಿ ಪರಿಶೀಲಿಸಿ ನೋಡು ! ಇದು ಅಧ್ಯಾತ್ಮಸಂಬಂಧವಾದ ಚರಿತ್ರವು. ಆ ಆತ್ಮತತ್ವವನ್ನು ನಿನಗೆ ಚೆನ್ನಾಗಿ ಬೋಧಿಸಬೇಕೆಂಬುದಕ್ಕಾಗಿಯೇ, ಈ ಉಪಾಖ್ಯಾನದ ಮೂಲಕ ವಾಗಿ ಅವೆಲ್ಲವನ್ನೂ ವಿವರಿಸಿರುವೆನು. ಲೋಕಕಾರಣನಾದ ಭಗವಂತನೂ ಇಂತಹ ಪರೋಕ್ಷವಿಷಯಗಳಲ್ಲಿಯೇ ಪ್ರೀತಿಸತಕ್ಕವನಾದುದರಿಂದ, ನಾನು ಆ ಆತ್ಮತತ್ವವನ್ನು ನಿನಗೆ ಅನ್ಯಾಪದೇಶದಿಂದ ತಿಳಿಸಿರುವೆನು" ಎಂದನು. ಇಲ್ಲಿಗೆ ಇಪ್ಪತ್ತೇಳನೆಯ ಅಧ್ಯಾಯವು.

---

{ನಾರದನು ಕಥಾರೂಪದಿಂದ ಗೂಢವಾಗಿ ಹೇಳಿದ ಆತ್ಮತತ್ವವನ್ನು ಸ್ಪಷ್ಟವಾಗಿ ವಿವರಿಸಿದುದು.}

ನಾರದನು ಹೇಳಿದ ಈ ಉಪಾಖ್ಯಾನವನ್ನು ಕೇಳಿಪ್ರಾಚೀನಬರ್ಹಿಯು ಅದರ ಗೂಢಾರ್ಥವನ್ನುತಿಳಿಯಲಾರದೆ ಆಶ್ಚರ್ಯದಿಂದ ಅವನನ್ನು ಕುರಿತು,·ಓ ಮಹಾತ್ಮಾ!ಕೇವಲಜ್ಞಾನಿಗಳಿಗೆಮಾತ್ರ ತಿಳಿಯತಕ್ಕ ನಿನ್ನಮಾತಿನಗೂಢಾ ರ್ಥವನ್ನುಕರ್ಮಬದ್ಧರಾಗಿ,ಆತ್ಮಜ್ಞಾನವಿಲ್ಲದ ನಮ್ಮಂತಮೂಢರುಹೇಗೆತಾ ನೇತಿಳಿಯಬಲ್ಲೆವು!ಆದುದರಿಂದ ನೀನು ಹೇಳಿದ ಉಪಾಖ್ಯಾನದಿಂದ ಆತ್ಮತ ತ್ವವು ಹೇಗೆ ವ್ಯಕ್ತವಾಗುವುದೋ ಅದನ್ನು ನೀನೇ ವಿವರಿಸಿ ತಿಳಿಸಬೇಕು." ಎಂದನು. ಅದಕ್ಕಾ ನಾರದನು "ರಾಜೇಂದ್ರಾ!ಹಾಗಾದರೆ ಕೇಳು! ನಾನು ಹೇಳಿದ ಉಪಾಖ್ಯಾನದಲ್ಲಿ ಪುರಂಜನನೆಂಬವನನ್ನೇ ಪುರುಷ (ಜೀವಾತ್ಮ)ನೆಂ

ದು ತಿಳಿ! ಪುರವೆಂದರೆ ಶರೀರವು. ಜೀವನು ಅದರಲ್ಲಿ ಪ್ರವೇಶಿಸಿ, ಅದರಲ್ಲಿ ಅಭಿಮಾನವಿಟ್ಟಿರುವುದರಿಂದ, ಅವನಿಗೆ ಪುರಂಜನನೆಂಬ ಹೆಸರಿಡಲ್ಪಟ್ಟಿತು. ಆ ಶರೀರಕ್ಕೆ ಒಂದಾಗಲಿ, ಎರಡಾಗಲಿ, ಮೂರಾಗಲಿ,ನಾಲ್ಕಾಗಲಿ, ಅದ ಕ್ಕಿಂತಲೂ ಅಧಿಕವಾಗಿಯೇ ಆಗಲಿ ಪಾದಗಳಿರುವುದುಂಟು ಕೆಲವಕ್ಕೆ ಪಾದವೇ ಇಲ್ಲದಿರುವುದೂ ಉಂಟು. ಇಂತಹ ಶರೀರಗಳ ಸಂಬಂಧವನ್ನು ಹೊಂದತಕ್ಕಜೀವನೇ ಪುರಂಜನನು ಅವಿಜ್ಞಾತನೆಂದು ಹೆಸರಿಡಲ್ಪಟ್ಟಿರುವ ಅವನ ಮಿತ್ರನೇ ಪರಮಾತ್ಮನು. ಅವನ ಹೆಸರಾಗಲಿ, ಅವನ ಕಾರ್ಯ ವಾಗಲಿ, ಅವನ ಗುಣಗಳಾಗಲಿ,ಜನರಿಗೆ ಸುಲಭವಾಗಿ ತಿಳಿಯತಕ್ಕುದಲ್ಲವಾ ದುದರಿಂದಲೇ ಅವನಿಗೆ ಅವಿಜ್ಞಾತನೆಂದು ಹೆಸರು!ಯಾವಾಗ ಪುರುಷನು, ಜ್ಞಾನೇಂದ್ರಿಯಗಳಿಗೆ ಗೋಚರಿಸತಕ್ಕ ಪ್ರಕೃತಿಗುಣಗಳಾದ ಶಬ್ದಾದಿ ವಿಷಯಸುಖಗಳನ್ನು ಚೆನ್ನಾಗಿ ಅನುಭವಿಸಬೇಕೆಂಬ ಆಸೆಯುಳ್ಳವನಾಗುವ ನೋ, ಆಗ ಮನುಷ್ಯಶರೀರವನ್ನು ಪ್ರವೇಶಿಸುವನು. ಒಂಬತ್ತು ದ್ವಾರಗ ಳೂ, ಎರಡುಕಾಲುಗಳೂ, ಎರಡು ಕೈಗಳೂ ಉಳ್ಳ ಇಂತಹ ಮನುಷ್ಯ ಶರೀರವೇ ವಿಷಯಸುಖಕ್ಕೆ ಮೇಲಾದುದೆಂದು ತಿಳಿಯುವನು. ಹಿಂದೆ ನವ ದ್ವಾರಾದಿವಿಶೇಷಣಗಳಿಂದ ವರ್ಣಿಸಲ್ಪಟ್ಟ ಪಟ್ಟಣವೇ ಶರೀರವೆಂದುತಿಳಿ ! ಮತ್ತು ಪುರಂಜನನಿಗೆ ಪ್ರಮದೆಯೆಂಬ ಪತ್ನಿಯೊಬ್ಬಳು ಸಿಕ್ಕಿದಳೆಂದು ಹೇಳಿದೆನಲ್ಲವೆ ? ಆ ಪತ್ನಿಯೇ ಅವನ ಬುದ್ಧಿಯು ! "ನಾನು, ನನ್ನದು" ಎಂಬ ಅಹಂಕಾರಮಮಕಾರಗಳನ್ನು ಹುಟ್ಟಿಸಿ. ಮದವನ್ನು ಹೆಚ್ಚಿಸತಕ್ಕ ಸ್ವಭಾವವುಳ್ಳುದಾದುದರಿಂದ, ಬುದ್ಧಿಗೆ ಪ್ರಮದೆಯೆಂದು ಹೆಸರಿಡಲ್ಪಟ್ಟಿ ರುವುದು. ಆ ಬುದ್ಧಿಯ ಪ್ರೇರಣೆಯಿಂದಲೇ ಜೀವನು, ಕಣ್ಣು, ಕಿವಿ, ಮೊದಲಾದ ಇಂದ್ರಿಯಗಳಿಂದ ಶಬ್ದಾದಿವಿಷಯಗಳನ್ನನುಭವಿಸುವನು. ಆ ಪುರಂಜನನಿಗೆ ಹನ್ನೊಂದುಮಂದಿ ಮಿತ್ರರಿದ್ದರೆಂದು ಹೇಳಿದೆನಲ್ಲವೆ ? ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೊಡನೆ ಮನಸ್ಸೂ ಸೇರಿ,ಏಕಾದಶೇಂ ದ್ರಿಯಗಳೂ ಆ ಬುದ್ಧಿಯನ್ನನುವರ್ತಿಸಿ ನಡೆಯುವುದರಿಂದ, ಅವು ಬುದ್ಧಿಗೆ ಮಿತ್ರರೆಂದು ಹೇಳಲ್ಪಟ್ಟಿದೆ. ಅವರಲ್ಲಿ ಒಬ್ಬೊಬ್ಬರೂ ನೂರುನೂರು ಮಂದಿ ಸ್ತ್ರೀಯರೊಡಗೂಡಿರುವರಂದು ಹೇಳಿದೆನಲ್ಲವೆ ? ಆ ಸ್ತ್ರೀಯರೇ

ಇಂದ್ರಿಯವೃತ್ತಿಗಳು! ಆ ಪಟ್ಟಣವನ್ನು ಕಾಯುತ್ತಿರುವ ಐದು ಹೆಡೆಯುಸ ರ್ಪವೆಂದು ಹೇಳಿದೆನಲ್ಲವೆ? ಅದೇ ಆ ಶರೀರವನ್ನು ರಕ್ಷಿಸತಕ್ಕ ಪ್ರಾಣವೆಂ ದುತಿಳಿ! ಆ ಪ್ರಾಣವಾಯುವು ಐದು ಬಗೆಯ ವ್ಯಾಪಾರವುಳ್ಳುದಾದುದ ರಿಂದ,ಐದು ಹೆಡೆಯುಸರ್ಪವೆಂದು ನಿರೂಪಿಸಲ್ಪಟ್ಟಿರುವುದು. ಹತ್ತುಮಂದಿ ಭಟರಿಗೂ ನಿಯಾಮಕನಾದ ಸೇನಾಧಿಪತಿಯೊಬ್ಬನಿದ್ದನೆಂದು ಹೇಳಿದೆ ನಲ್ಲವೆ? ಅದೇ, ಆ ಇಂದ್ರಿಯಗಳನ್ನು ಬೇರೆಬೇರೆ ವಿಷಯಗಳಲ್ಲಿ ಸೇರಿಸತಕ್ಕ ಮನಸ್ಸು! ಪುರಂಜನನು ಪಾಂಚಾಲವನ್ನು ಪಾಲಿಸುವನೆಂದರೆ, ಜೀವನು ಪಂಚೇಂದ್ರಿಯಗಳಿಗೆವಿಷಯವಾದ ಪದಾರ್ಥಗಳನ್ನು ಅನುಭವಿಸುವನೆಂದು ತಿಳಿಯಬೇಕು. ಆ ಪಟ್ಟಣಕ್ಕೆ ನವದ್ವಾರಗಳೆಂದರೆ, ಶರೀರದಲ್ಲಿರುವ ಕಣ್ಣು ಗಳೆರಡು, ಮೂಗಿನ ರಂಧ್ರಗಳೆರಡು, ಕಿವಿಗಳೆರಡು, ಬಾಯಿ, ಮೂತ್ರ ದ್ವಾರ, ಮಲದ್ವಾರಗಳೆಂಬ ಈ ಒಂಬತ್ತುದ್ವಾರಗಳೆಂದು ತಿಳಿಯಬೇಕು. ಈ ದ್ವಾರಗಳಿಂದ ರಾಜನು ಸಂಚಾರಮಾಡುವನೆಂದರೆ, ಜೀವನು ಆ ಇಂ ದ್ರಿಯಶಕ್ತಿಯಿಂದ ಹೊರಗಿನ ವಿಷಯಗಳನ್ನು ಗ್ರಹಿಸುವನೆಂದರ್ಥವು. ಈ ನವದ್ವಾರಗಳಲ್ಲಿ ಕಣ್ಣುಗಳೆರಡೂ,ಮೂಗಿನರಂಧ್ರಗಳೆರಡೂ,ಮುಖವೊಂ ದೂ, ಇವೈದೂ ಶರೀರದ ಮುಂಭಾಗದಲ್ಲಿರುವುದರಿಂದ ಪೂರ್ವದ್ವಾರಗಳೆಂ ದೂ,ಬಲದ ಕಿವಿಯು ದಕ್ಷಿಣದ್ವಾರವೆಂದೂ, ಎಡದಕಿವಿಯು ಉತ್ತರದ್ವಾ ರವೆಂದೂ, ಮೂತ್ರಮಲದ್ವಾರಗಳೆರಡೂ ಕೆಳಗಿನ ದ್ವಾರಗಳೆಂದೂ ನಿರೂ ಪಿಸಲ್ಪಟ್ಟಿರುವುವು. ಜೀವನು ನೇತ್ರದ್ವಾರಗಳಿಂದ ರೂಪವನ್ನು ಗ್ರಹಿಸುವ ನೆಂಬುದಕ್ಕಾಗಿ ಅವಕ್ಕೆ ಖದ್ಯೋತಿಯೆಂದೂ, ಆವಿರ್ಮುಖಿಯೆಂದೂ ಹೆಸರಿ ಡಲ್ಪಟ್ಟಿರುವುದು. ಜೀವನು ಮೂಗಿನ ರಂಧ್ರಗಳಲ್ಲಿರುವ ಇಂದ್ರಿಯದಿಂದ ಗಂಧವನ್ನು ತಿಳಿಯುವನಾದುದರಿಂದ, ಅವೆರಡಕ್ಕೂ ನಳಿನ ಮತ್ತು ನಾಳಿ ನಿಯೆಂದು ಹೆಸರಿಡಲ್ಪಟ್ಟಿರುವುದು. ಐದನೆಯ ದ್ವಾರವೇ ಮುಖವು! ಜೀ ವನು ಅಲ್ಲಿರುವ ರಸನೇಂದ್ರಿಯದಿಂದ ರಸಗ್ರಹಣವನ್ನು ಮಾಡುವನು. ವಿಪಣವೆಂಬ ವಾಗಿಂದ್ರಿಯದ ಮೂಲಕವಾಗಿ ವ್ಯವಹರಿಸುವನು. ದಕ್ಷಿ ಣೋತ್ತರದ್ವಾರಗಳಲ್ಲಿ ಪಿತೃಹುವೆಂದರೆ ಬಲದ ಕಿವಿ ! ದೇವಹುವೆಂದರೆ ಎಡದ ಕಿವಿ ! ಇವುಗಳಿಂದ ಜೀವನು ಶಬ್ದಗಳನ್ನು ಗ್ರಹಿಸುವನು. ಚಂಡ

ವೇಗನೆಂಬ ಗಂಧರ್ವಸೇನಾಪತಿಯೊಬ್ಬನಿರುವನೆಂದು ಹೇಳಿದೆನಲ್ಲವೆ ? ಅವನೇ ಜೀವನ ಆಯುಃ ಕಾಲವನ್ನು ಅಳೆಯತಕ್ಕ ಸಂವತ್ಸರವೆಂದು ತಿಳಿ ! ಆ ಸೇನಾಪತಿಗೆ ಕೆಲವು ಗಂಧರ್ವರೂ, ಕೆಲವು ಗಂಧರ್ವಸ್ತ್ರೀಯರೂ ಪರಿಚರರಾಗಿದ್ದರೆಂದು ಹೇಳಿದೆನಲ್ಲವೆ? ಮುನ್ನೂರರುವತ್ತು ದಿನಗಳೇ ಗಂಧರ್ವರೆಂಪೂ, ಅಷ್ಟೇ ರಾತ್ರಿಗಳು ಗಂಧರ್ವಸ್ತ್ರೀಯರೆಂದೂ ತಿಳಿ! ಈ ಸಂವತ್ಸರವೆಂಬುದು ಚಕ್ರದಂತೆ ವೇಗದಿಂದ ತಿರುಗುತ್ತ, ಮನುಷ್ಯನ ಆಯುಸ್ಸನ್ನು ಅಳೆಯುತ್ತಿರುವುದರಿಂದಲೇ, ಅದಕ್ಕೆ ಚಂಡವೇಗವೆಂದು ಹೆಸರಿಡಲ್ಪಟ್ಟಿರುವುದು, ಮತ್ತು ಗಂಧರ್ವರು ಮಾಯೆಯಿಂದ ಕಾರ್ಯಗಳನ್ನು ನಡೆಸುವಂತೆ, ಈ ಆಹೋರಾತ್ರಗಳಿಂದ ಕೂಡಿದ ಸಂವತ್ಸರವೂ, ಮನುಷ್ಯನ ಆಯುಸ್ಸನ್ನು ತಿಳಿಯದಹಾಗೆಯೇ ಅಪಹರಿಸುತ್ತಿರುವುದರಿಂದ, ಗಂಧರ್ವರೂಪವಾಗಿ ವ್ಯವಹರಿಸಲ್ಪಟ್ಟಿರುವುದು. ಮತ್ತು ಹಿಂದೆ ಕಾಲಕನ್ಯೆಯೆಂಬ ಒಬ್ಬ ಹೆಂಗಸನ್ನು ಹೇಳಿದೆನಲ್ಲವೆ? ಅದನ್ನೇ ವಾರ್ಧಕಾವಸ್ಥೆಯೆಂದು ತಿಳಿ! ಪುರುಷಾಯುಸ್ಸನ್ನು ಅಪಹರಿಸುವ ಕಾಲಕ್ಕೆ, ಜರೆಯೆಂಬುದು ಬಹಳ ಅನುಕೂಲವಾದುದರಿಂದ, ಅದನ್ನು ಕಾಲಕ್ಕೆ ಮಗಳನ್ನಾಗಿ ಹೇಳಿದೆನು. ಆ ಕನ್ಯೆಯು ಬಹಳ ಕುರೂಪಿಣಿಯಾದುದರಿಂದ, ಲೋಕದಲ್ಲಿ ಯಾರೂ ಅವಳನ್ನು ಪರಿಗ್ರಹಿಸುವುದಕ್ಕೆ ಸಮ್ಮತಿಸಲಿಲ್ಲವೆಂದು ಹೇಳಿದೆನಲ್ಲವೆ? ಮನುಷ್ಯನಿಗೆ ವಾರ್ಧಕವೆಂಬುದು ರೂಪವನ್ನು ಕೆಡಿಸಿ ಬಿಡುವುದೆಂದೂ, ಆ ವಾರ್ಧಕದಶೆಯನ್ನನುಭವಿಸುವುದಕ್ಕೆ ಯಾರೂ ಇಷ್ಟಪಡಲಾರರೆಂದೂ ಅದರ ಭಾವವು. ಹೀಗೆ ಜರೆಯನ್ನು ಯಾರೂ ಪರಿಗ್ರಹಿಸದಿದ್ದಾಗ, ಸಕಲರೋಗಗಳಿಗೂ ರಾಜನಾದ ಮೃತ್ಯುವು, ಪ್ರಾಣಿಗಳನ್ನು ಕೊಲ್ಲುವುದಕ್ಕಾಗಿ ಅವಳ ಸಹಾಯವನ್ನಪೇಕ್ಷಿಸಿ ಅವಳನ್ನು ವರಿಸಿದನೆಂದು ಹೇಳಿದೆನಲ್ಲವೆ? ಇದರಿಂದ ಮನುಷ್ಯನಿಗೆ ಮುಪ್ಪು ಬಂದೊಡನೆ, ನಾನಾವಿಧರೋಗಗಳು ತಲೆದೋರಿ, ಕೊನೆಗೆ ಮೃತ್ಯುವಿನ ಪಾಲಾಗುವನೆಂದು ತಿಳಿಯಬೇಕು. ಈ ಯವನರಾಜನಾದ ಭಯನೆಂಬ ಮೃತ್ಯುವು, ಪುರಂಜನನ ಪಟ್ಟಣವನ್ನು ಮುತ್ತುವುದಕ್ಕಾಗಿ ಸೈನಿಕರೊಡನೆ ಬಂದನೆಂದರೆ, ಆ ಪುರಂಜನನ ದೇಹದಲ್ಲಿ ವಾರ್ಧಕವು ಕಾಣಿಸಿಕೊಂಡು, ಆಧಿವ್ಯಾಧಿಗಳೆಲ್ಲವೂ ತಲೆದೋರಿದುವೆಂದು ತಿಳಿಯಬೇಕು. ಇವೆಲ್ಲ

ವೂ ಮನುಷ್ಯನಿಗೆ ಬಹಳೆ ಸಂಕಟಕರಗಳಾದುದರಿಂದ ಶತ್ರುಗಳೆಂದು ವ್ಯವಹರಿಸಲ್ಪಟ್ಟಿರುವುದು. ಸುಖದುಃಖಗಳು, ರಾಗದ್ವೇಷಗಳು, ಭಯ, ಅಭಿಮಾನ, ಪ್ರಮೋದ, ಮುಂತಾದುವೆಲ್ಲವೂ ಆ ಮೃತ್ಯುವಿನ ಸಹಾಯಕರೆಂದು ತಿಳಿ! ಪ್ರಜ್ವಾರನೆಂಬ ಬೇರೊಬ್ಬ ಶತ್ರುವನ್ನು ಹೇಳಿದೆನಲ್ಲವೆ? ಅದೇ ಸಮಸ್ತರೋಗಸಮುದಾಯವು. ಮತ್ತು ದಕ್ಷಿಣೋತ್ತರಪಾಂಚಾಲಗಳೆಂಬ ಎರಡು ದೇಶಗಳನ್ನು ಹೇಳಿದೆನಲ್ಲವೆ ? ಧರ್ಮಾರ್ಥಕಾಮಗಳ ಸಾಧನೋಪಾಯವನ್ನು ತಿಳಿಸತಕ್ಕ ಪ್ರವೃತ್ತಿಶಾಸ್ತ್ರವೇ ದಕ್ಷಿಣಪಾಂಚಾಲವು. ಈ ಮೂರುಬಗೆಯ ಪುರುಷಾರ್ಥಗಳೂ ಅಶಾಶ್ವತಗಳೆಂದೂ, ಬ್ರಹ್ಮೋಪಾಸನವೊಂದೇ ಸ್ಥಿರವಾದ ಮೋಕ್ಷಫಲವನ್ನು ಕೊಡತಕ್ಕುದೆಂದೂ ತಿಳಿಸುವ ನಿವೃತ್ತಿಶಾಸ್ತ್ರವೇ ಉತ್ತರಪಾಂಚಾಲವು. ದಕ್ಷಿಣದೇಶದಲ್ಲಿರುವ ಪಿತೃದೇವತೆಗಳನ್ನು ಪೂಜಿಸಿ, ಅವರ ಲೋಕವನ್ನು ಪಡೆಯುವುದಕ್ಕೆ ಸಾಧನವಾದುದರಿಂದ, ಪ್ರವೃತ್ತಿಮಾರ್ಗವು ದಕ್ಷಿಣಪಾಂಚಾಲವೆಂದು ಹೆಸರಿಡಲ್ಪಟ್ಟಿರುವುದು. ಉತ್ತಮವಾದ ಬ್ರಹ್ಮಪ್ರಾಪ್ತಿಯನ್ನು ತಿಳಿಸುವ ನಿವೃತ್ತಿಶಾಸ್ತ್ರಕ್ಕೆ ಉತ್ತರಪಾಂಚಾಲವೆಂದು ಹೆಸರಿಡಲ್ಪಟ್ಟಿರುವುದು. ರಾಜನು ಈ ದೇಶಗಳನ್ನು ಶ್ರುತಧರನ ಸಹಾಯದಿಂದ ಸೇರುವನೆಂದರೆ, ಜೀವನು ಈ ಪ್ರವೃತ್ತಿನಿವೃತ್ತಿಶಾಸ್ತ್ರಗಳನ್ನು ತನ್ನ ಶ್ರೋತ್ರೇಂದ್ರಿಯದಿಂದ ಕೇಳಿ ತಿಳಿಯುವನೆಂದು ಭಾವವು. ಆಸುರಿಯೆಂಬ ಹೆಸರುಳ್ಳ ಪಶ್ಚಿಮದ್ವಾರವೊಂದುಂಟೆಂದು ಹೇಳಿದೆನಲ್ಲವೆ ? ಅದೇ ಶಿಶ್ನವು. (ಮೂತ್ರದ್ವಾರವು.) ಇದರಿಂದ ಜೀವನು ಮೈಥುನಾದಿಕರ್ಮವನ್ನು ನಡೆಸುವನು. ದುರ್ಮದವೆಂಬ ಮತ್ತೊಂದು ಪಶ್ಚಿಮದ್ವಾರದಿಂದ, ಪುರಂಜನನು ವೈಶಸವೆಂಬದೇಶಕ್ಕೆ ಹೋಗುವನೆಂದು ಹೇಳಿದೆನಲ್ಲವೆ? ಇದರಿಂದ ಜೀವನು ಗುದಸ್ಥಾನದಿಂದ ನರಕದುಃಖಗಳನ್ನನುಭವಿಸುವುದಕ್ಕಾಗಿಯೇ ಹೋಗುವನೆಂದು ಭಾವವು. ಪುರಂಜನನು ಅಂಧರೆಂಬ ತನ್ನ ಪರಿಚಾರಕರಿಬ್ಬರಿಂದ ತನ್ನ ಕಾರ್ಯಗಳನ್ನು ನಡೆಸುತಿದ್ದನೆಂದು ಹೇಳಿದೆನಲ್ಲವೆ ? ಇದರಿಂದ ಜೀವನು ಜ್ಞಾನಹೀನಗಳಾದ ತನ್ನ ಕಾಲುಗಳಿಂದ ನಡೆಯುವನೆಂದೂ, ಕೈಗಳಿಂದ ಕೆಲಸಮಾಡುವನೆಂದೂ ಭಾವವು. ಪುರಂಜನನು ಅಂತಃಪುರದಲ್ಲಿ ವಿಹರಿಸುವ

ನೆಂದರೆ, ಜೀವನು ತನ್ನ ಹೃದಯದಲ್ಲಿ ಮೋಹ, ಹರ್ಷ ಮೊದಲಾದುವುಗಳನ್ನು ಹೊಂದುವನೆಂದು ಭಾವವು. ವಿಷೂಚೀನನೆಂದರೆ ಮನಸ್ಸೆಂದೂ, ಅವನ ಸಹಾಯದಿಂದ ಮೋಹಾದಿ ಮನೋವಿಕಾರಗಳನ್ನನುಭವಿಸುವನೆಂದೂ ತಿಳಿಯಬೇಕು ಸ್ವಪ್ನಾವಸ್ಥೆಯಲ್ಲಿ ಬುದ್ಧಿಯು ವಿಕಾರಹೊಂದಿದಾಗಲೂ, ಅಥವಾ ಎಚ್ಚರದಲ್ಲಿ ಅದೇ ಬುದ್ಧಿಯು ಇಂದ್ರಿಯಗಳನ್ನು ವಿಕಾರಹೊಂದಿಸಿದಾಗಲೂ, ಜೀವನು ತಾನು ತಟಸ್ಥನಾಗಿರುವನು. ಆದರೂ, ಆ ಬುದ್ಧಿಗುಣಗಳಿಗೆ ವಶನಾಗಿ, ಆಗಾಗ ಆ ಬುದ್ಧಿಯ ವ್ಯಾಪಾರಗಳನ್ನು ತನ್ನಲ್ಲಿ ಆರೋಪಿಸಿಕೊಳ್ಳುವನು. ರಾಜೇಂದ್ರಾ! ಇನ್ನು ಆ ಪುರಂಜನನ ಬೇಟೆಯ ವೃತ್ತಾಂತವನ್ನು ವಿವರಿಸುವೆನು ಕೇಳು! ಅವನ ದೇಹವೇ ರಥವು! ಜ್ಞಾನೇಂದ್ರಿಯಗಳೇ ಅದಕ್ಕೆ ಕಟ್ಟಿದ ಐದು ಕುದುರೆಗಳು! ಕಾಲವೇಗವೇ ರಥಗಮನವು! ಪುಣ್ಯಪಾಪಕರ್ಮಗಳೆರಡೂ ಅದರ ಚಕ್ರಗಳು! ಸತ್ವರಜಸ್ತಮೋ ಗುಣಗಳೆಂಬಿವು ಮೂರೂ ಮೂರು ಧ್ವಜದಂಡಗಳು! ಪಂಚ ಪ್ರಾಣಗಳೂ ಐದು ಕಟ್ಟುಗಳು! ಮನಸ್ಸೇ ಕುದುರೆಗಳಿಗೆಕಟ್ಟಿದ ಹುಗ್ಗವು! ಬುದ್ಧಿಯೇಸಾರಥಿಯು! ಹೃದಯವೇ ರಥಿಕನುಕುಳ್ಳಿರತಕ್ಕಜಗತಿ! ಸುಖದುಃಖಾದಿದ್ವಂದ್ವಗಳೇ ನೊಗವನ್ನು ಕಟ್ಟಿದ ಎರಡು ಮೂಕಿಗಳು! ಪಂಚೇಂದ್ರಿಯಗ್ರಾಹ್ಯಗಳಾದ ಐದು ಬಗೆಯ ಶಬ್ದಾದಿವಿಷಯಗಳುಬಾಣಗಳು! ಚರ್ಮ ಮೊದಲಾದ ಸಪ್ತಧಾತುಗಳೂ, ಆ ರಥಕ್ಕೆ ಹೊದಿಸಿದ ಚರ್ಮಾದ್ಯಾವರಣಗಳು! ಕರ್ಮೇಂದ್ರಿಯಗಳ ವ್ಯಾಪಾರವೇ ಐದು ಬಗೆಯ ಅಶ್ವಗತಿಗಳು! ವಿಷಯಾಸಕ್ತಿಯೇ ವನಪ್ರಯಾಣವು! ಪದಿನ್ನೊಂದು ಇಂದ್ರಿಯಗಳೂ ಅವನ ಸೈನ್ಯವು. ಪ್ರಾಣಿಹಿಂಸೆಯೇ ಬೇಟೆಯ ವಿನೋದವು. ಹೀಗೆ ಜೀವನು ಶರೀರವೆಂಬ ರಥವನ್ನೇರಿ, ಬಿಸಿಲ್ಗೊರೆಯಂತೆ ಆಸೆಹುಟ್ಟಿಸತಕ್ಕ ವಿಷಯಸುಖಗಳ ಕಡೆಗೆ ಓಡುತ್ತಿರುವ ಇಂದ್ರಿಯಗಳೆಂಬ ಸೈನಿಕರನ್ನು ಕಟ್ಟಿಕೊಂಡು, ನೂರು ವರ್ಷಗಳವರೆಗೆ ಆಧ್ಯಾತ್ಮಿಕಾದಿತಾಪತ್ರಯವೆಂಬ ಬಿಸಿಲಲ್ಲಿ ಬೆಂದು, ದುಃಖವೆಂಬ ಮಹಾರಣ್ಯದಲ್ಲಿ ಸುತ್ತಿ ಸಂಕಟಪಡುವನು. ಅಜ್ಞಾನವೆಂಬ ಅಂಧಕಾರದಲ್ಲಿ ಕಣ್ಣುಕಾಣದೆ ತತ್ತಳಿಸುವನು. ಮತ್ತು ಪ್ರಾಣಗಳು, ಇಂದ್ರಿಯಗಳು, ಮನಸ್ಸು, ಮುಂತಾದುವುಗ

ಳಲ್ಲಿರುವ ಧರ್ಮವನ್ನು ತನ್ನಲ್ಲಿ ಆರೋಪಿಸಿಕೊಂಡು, ನಾನು ಸುಖಿಯೆಂದೂ, ನಾನು ದುಃಖಿಯೆಂದೂ, ನಾನು ಕುರುಡನೆಂದೂ, ನಾನು ಕಿವುಡನೆಂದೂ ಭಾವಿಸಿಕೊಳ್ಳುವನು. ಅಲ್ಪಸುಖಕ್ಕಾಗಿ ಎಷ್ಟೋ ಕಷ್ಟಪಡುವನು. ''ತಾನು, ತನ್ನ"ದೆಂಬ ಅಹಂಕಾರಮಮಕಾರಗಳಿಂದ, ಪುನರ್ಜನ್ಮಕ್ಕೆ ಕಾರಣಗಳಾದ ಕರ್ಮಗಳನ್ನಾಚರಿಸುತ್ತ, ಶರೀರದಲ್ಲಿ ಸೆರೆಸಿಕ್ಕಿ ಕಷ್ಟಪಡುವನು. ಜೀವನು ತನ್ನ ಮತ್ತು ಪರಮಾತ್ಮನ ಸ್ವರೂಪವನ್ನು ತಿಳಿಯುವುದರಲ್ಲಿ ಮನಸ್ಸಿಡದೆ ಹೋಗುತ್ತಿರುವವರೆಗೆ, ಪ್ರಕೃತಿಯ ಗುಣಗಳಾದ ಶಬ್ದಾದಿವಿಷಯಗಳಲ್ಲಿಯೇ ವಿಶೇಷವಾಗಿ ಅವನ ಮನಸ್ಸು ಪ್ರವರ್ತಿಸುವುದು. ಅವುಗಳಲ್ಲಿ ಯಾವಾಗ ಆಸೆಯು ಹುಟ್ಟುವುದೋ, ಆಗ, ಅದಕ್ಕಾಗಿ ಅನೇಕ ಕರ್ಮಗಳನ್ನು ನಡೆಸುವನು. ಸಾತ್ವಿಕ, ರಾಜಸ, ತಾಮಸಗಳೆಂಬ ಮೂರುವಿಧವಾದ ಕರ್ಮಗಳಲ್ಲಿ ಯಾವುದನ್ನು ನಡೆಸುವನೋ, ಅದರ ಫಲಕ್ಕೆ ತಕ್ಕಂತೆ ಬೇರೆಬೇರೆ ಜನ್ಮಗಳಲ್ಲಿ ಹುಟ್ಟುವನು. ಸಾತ್ವಿಕಕರ್ಮಗಳನ್ನು ನಡೆಸಿದವನು ತೇಜೋವಿಶೇಷದಿಂದ ಕೂಡಿದ ದಿವ್ಯದೇಹವನ್ನು ಹೊಂದುವನು. ರಾಜಸಕರ್ಮಗಳಲ್ಲಿ ಬಿದ್ದವನು ದುಃಖಪ್ರಚುರವಾದ ನರಜನ್ಮವನ್ನು ಹೊಂದುವನು. ತಾಮಸಕರ್ಮಗಳಲ್ಲಿ ಬಿದ್ದವನು ಕೇವಲ ಶೋಕಕ್ಕೂ, ಅಜ್ಞಾನಕ್ಕೂ ನೆಲೆಯಾದ ನೀಚದೇಹವನ್ನು ಹೊಂದುವನು. ಹೀಗೆ ಕರ್ಮಾನುಗುಣವಾಗಿಯೇ ಜೀವನು ಒಮ್ಮೆ ದೇವಶರೀರವನ್ನೂ, ಮತ್ತೊಮ್ಮೆ ಮನುಷ್ಯಶರೀರವನ್ನೂ, ಒಮ್ಮೆ ಪಶುಪಕ್ಷಿ ಮೊದಲಾದ ತಿರ್ಯಕ್ಛರೀರವನ್ನೂ ಹೊಂದುವನು. ಆ ಕರ್ಮಾನುಸಾರವಾಗಿಯೇ, ಸ್ತ್ರೀಯಾಗಿಯೂ, ಪುರುಷನಾಗಿಯೂ, ನಪುಂಸಕನಾಗಿಯೂ ಜನಿಸುವನು. ಹಸಿವಿನಿಂದ ಪೀಡಿತವಾದ ನಾಯಿಯು, ಪ್ರಯತ್ನಪಟ್ಟು ಮನೆಮನೆಗೆ ಹೊಕ್ಕು ಬರುವಾಗ, ಅಲ್ಲಿ ದೈವಾಧೀನವಾಗಿ ಲಭಿಸಿದ ಅನ್ನವನ್ನಾಗಲಿ, ಅತಿಕ್ರಮಪ್ರವೇಶದಿಂದ ದಂಡಪ್ರಹಾರವನ್ನಾಗಲಿ ತಿಂದು ಬರುವಹಾಗೆ, ಜೀವನೂ, ಕಾಮಾಭಿಲಾಷೆಯಿಂದ ತಾನು ಮಾಡಿದ ಕರ್ಮಗಳಿಗನುಸಾರವಾಗಿ, ಊರ್ಧ್ವಲೋಕದಲ್ಲಿಯೂ, ಅಧೋಲೋಕದಲ್ಲಿಯೂ, ಈ ಲೋಕದಲ್ಲಿಯೂ ತಿರುಗುತ್ತ, ಒಮ್ಮೆ ಪ್ರಿಯವಸ್ತುವನ್ನೂ, ಮತ್ತೊಮ್ಮೆ ಅಪ್ರಿಯವಸ್ತುವನ್ನೂ ಅನುಭ

ವಿಸುವನು. ಜೀವನಿಗೆ ಸಂಸಾರದಶೆಯಲ್ಲಿ ಆಧ್ಯಾತ್ಮಿಕವೆಂದೂ,ಆಧಿಭೌತಿಕ ವೆಂದೂ, ಆಧಿದೈವಿಕವೆಂದೂ ಕರೆಯಲ್ಪಡುವ ತಾಪತ್ರಯವು ಎಂದಿಗೂ ತಪ್ಪಿದುದಲ್ಲ. ಇವುಗಳಲ್ಲಿ ಒಂದನ್ನು ತಪ್ಪಿಸಿಕೊಂಡರೂ,ಮತ್ತೊಂದುಮೇ ಲೆ ಬೀಳುವುದಕ್ಕೆ ಕಾದೇ ಇರುವುದು. ಎಡೆಬಿಡದೆ ಮೇಲೆ ಬಿದ್ದು ಬರುವ ಈ ತಾಪತ್ರಯವನ್ನು ನೀಗಿಸುವುದಕ್ಕೆ ಭಗವದುಪಾಸನವೊಂದುಹೊರತು ಬೇರೆ ಉಪಾಯಾಂತರವಿಲ್ಲ. ಈ ಸಂಸಾರದಲ್ಲಿ ಒಂದು ದುಃಖವನ್ನು ತಪ್ಪಿಸಿ ಕೊಳ್ಳುವುದಕ್ಕಾಗಿ ಮಾಡತಕ್ಕ ಪ್ರತಿಕ್ರಿಯೆಯೂ,ಮತ್ತೊಂದುವಿಧದಿಂದ ದುಃಖಕಾರಣವಾಗಿಯೇ ಇರುವುದು. ತಲೆಯಮೇಲೆ ದೊಡ್ಡಭಾರವನ್ನು ಹೊತ್ತ ಮನುಷ್ಯನು,ತಲೆಗೆ ಸ್ವಲ್ಪವಿಶ್ರಾಂತಿಯನ್ನು ಕೊಡುವುದಕ್ಕಾಗಿ,ಆ ಭಾರವನ್ನು ಹೆಗಲಿಗೆ ತೆಗೆದುಕೊಳ್ಳುವನು. ತತ್ಕಾಲದಲ್ಲಿ ತಲೆಗೆ ಭಾರವು ತ ಪ್ಪಿದಂತಾದರೂ ಹೆಗಲಿಗೆ ಆ ಭಾರವು ತಪ್ಪಲಿಲ್ಲವಷ್ಟೆ? ಹಾಗೆಯೇ ಒಂದು ದುಃಖನಿವೃತ್ತಿಗಾಗಿ ಮಾಡತಕ್ಕ ಕರ್ಮಗಳು ಮತ್ತೊಂದು ದುಃಖಕ್ಕೆ ಕಾರಣವಾಗುವುವೇಹೊರತು, ಅದರಿಂದ ಎಂದಿಗೂ ನಿಶ್ಶೇಷವಾಗಿ ದುಃಖ ನಿವೃತ್ತಿಯಾಗಲಾರದು. ಭಕ್ತಿಜ್ಞಾನಗಳಿಲ್ಲದ ಕೇವಲಕರ್ಮಾಚರಣೆಗ ಳೆಲ್ಲವೂ, ಅಜ್ಞಾನಾತ್ಮಕವಾಗಿಯೇ ಇರುವುದು. ಮೇಲೆಮೇಲೆ ಕನಸನ್ನು ಕಾಣುವ ಮನುಷ್ಯನಿಗೆ,ಹಿಂದೆ ಕಂಡ ಕನಸನ್ನು ಮರೆಸುವಂತೆ ಬೇರೊಂದು ಸ್ವಪ್ನವು ಕಂಡರೂ, ಅವೆರಡೂ, ಸ್ವಪ್ನಾನುಭವವೆನಿಸಿಕೊಳ್ಳುವುವೇ ಹೊ ರತು ನಿಜವಲ್ಲವಷ್ಟೆ? ಹಾಗೆಯೇ ದುಃಖನಿವೃತ್ತಿಗಾಗಿ ಮಾಡತಕ್ಕ ಕರ್ಮ ವೂ, ಅಜ್ಞಾನಮೂಲಕವಾದುದಲ್ಲದೆ ಬೇರೆಯಲ್ಲ. ಈ ಅಜ್ಞಾನವನ್ನು ತಪ್ಪಿ ಸಿಕೊಳ್ಳಬೇಕಾದರೆ, ಮೊದಲು ಅದಕ್ಕೆ ಉತ್ಪತ್ತಿಕಾರಣವಾದಮನಸ್ಸನ್ನು ನಿಗ್ರಹಿಸಬೇಕು.ಏಕೆಂದರೆ,ಮನುಷ್ಯನುಸ್ವಪ್ನದಲ್ಲಿ ತನ್ನ ದೇಹವನ್ನು ಮರೆ ತಾಗಲೂ, ಲಿಂಗಶರೀರರೂಪವಾದ ಮನಸ್ಸಿನಿಂದ ಸುಖದುಃಖಗಳನ್ನನುಭ ವಿಸುವಂತೆ, ಆತ್ಮನಿಗೆ ದೇವಮನುಷ್ಯಾದ್ಯಾಕರಗಳಿಲ್ಲದಿದ್ದಾಗಲೂ. ಮನ ಸ್ಸಿನಮೂಲಕವಾಗಿ ದೇಹಾತ್ಮಭ್ರಮರೂಪವಾದ ಸಂಸಾರವು ಆ ಆತ್ಮ ನನ್ನು ಅನುಸರಿಸದೆ ಬಿಡದು. ಕೇವಲಪುರುಷಾರ್ಥಸ್ವರೂಪನಾದ ಆತ್ಮನಿಗೆ ದುಃಖರೂಪವಾದ ಈ ಸಂಸಾರವೆಂಬುದು, ಮನಸ್ಸಿನಮೂಲಕವಾಗಿಯೇ

ಉಂಟಾಗುವುದರಿಂದ, ಆ ಸಂಸಾರದುಃಖವನ್ನು ತಪ್ಪಿಸಿಕೊಳ್ಳಬೇಕಾದರೆ ಮನಸ್ಸನ್ನು ನೀಗಿಸಬೇಕು. ಮಹಾನರ್ಥಕಾರಣವಾದ ಈ ಸಂಸಾರಕ್ಕೆ ಮನಸ್ಸೇ ಕಾರಣವಾದುದರಿಂದ ಮೊದಲು ಅದನ್ನೇ ನೀಗಿಸುವುದಕ್ಕೆ ಯತ್ನಿಸಬೇಕು. ಮನಸ್ಸನ್ನು ನೀಗಿಸುವುದೇ ಮೋಕ್ಷವು. ಈ ಕಾರ್ಯಕ್ಕೆ ಭಗವದ್ಭಕ್ತಿಯನ್ನು ಸಾಧಿಸಬೇಕು. ಅದು ತಾನಾಗಿಯೇ ವಿರಕ್ತಿಯನ್ನೂ, ತತ್ವಜ್ಞಾನವನ್ನೂ ಹುಟ್ಟಿಸುವುದು. ಈ ಭಕ್ತಿಯೋಗವು ಹುಟ್ಟಬೇಕಾದರೆ, ನಿತ್ಯವೂ ಶ್ರದ್ಧೆಯಿಂದ ಭಗವತ್ಕಥೆಗಳನ್ನು ಕೇಳುತ್ತಿರಬೇಕು. ಯಾವಾಗಲೂ ಆ ಕಥೆಗಳನ್ನು ಕೀರ್ತಿಸುತ್ತಿರಬೇಕು. ಭಗವದ್ಗುಣಾನುಭವವನ್ನು ಮಾಡಬೇಕಾದರೆ, ಶುದ್ಧಮನಸ್ಕರಾಗಿಯೂ, ಸಾಧುಗಳಾಗಿಯೂ ಇರುವ ಭಗವದ್ಭಕ್ತರು ಎಲ್ಲೆಲ್ಲಿ ಆತನ ಕಥಾಶ್ರವಣಕೀರ್ತನಾದಿಗಳನ್ನು ನಡೆಸುತ್ತಿರುವರೋ, ಆಯಾಸ್ಥಳಕ್ಕೆ ಹೋಗಿ,ಅವರೊಡನೆ ಸಹವಾಸಮಾಡಿದಪಕ್ಷದಲ್ಲಿ, ನಮಗೆ ಯಾವಾಗಲೂ ಭಗವತ್ಕಥೆಗಳು ಕಿವಿಗೆ ಬೀಳುತ್ತಿರುವುವು. ಸುಧಾಪ್ರವಾಹದಂತೆ ಅವರ ಬಾಯಿಂದ ಹೊರಡುತ್ತಿರುವ ಭಗವತ್ಕಥಾರಸಗಳನ್ನು ತಮ್ಮ ಕರ್ಣಪುಟಗಳಿಂದ ಪಾನಮಾಡುತ್ತಿರುವವರಿಗೆ ಹಸಿವು, ಬಾಯಾರಿಕೆ, ಶೋಕ, ಮೋಹ, ಭಯ, ಮುಂತಾದ ದೇಹಜನ್ಯಗಳಾದ ಬಾಧೆಗಳೊಂದೂ ತೋರಲಾರವು.ಪ್ರಾಣಿಶರೀರಕ್ಕೆ ಸಹಜವಾದ ಈಬಾಧೆಗಳು ಸುತ್ತಿಮುತ್ತಿ ಬಾಧಿಸುತ್ತಿರುವುದರಿಂದಲೇ, ಮನುಷ್ಯನಿಗೆ ಹರಿಕಥಾಶ್ರವಣದಲ್ಲಿ ಆಸಕ್ತಿಯು ಹುಟ್ಟದು. ಆದುದರಿಂದಲೇ ಭಾಗವತೋತ್ತಮರ ಸಹವಾಸದಲ್ಲಿದ್ದು, ಹರಿಕಥೆಗಳನ್ನು ಕೇಳುತ್ತ ಅದರ ಆನಂದದಿಂದ ಆ ಬಾಧೆಗಳನ್ನು ಗೆಲ್ಲಬೇಕು. ಇತರ ಬಲದಿಂದ ಭಗವದುಪಾಸನವೂ,ಅದರಿಂದ ವೈರಾಗ್ಯವೂ, ಅದರಮೂಲಕವಾಗಿ ಆತ್ಮಜ್ಞಾನವೂ, ಅದರಿಂದ ಭಕ್ತಿಯೂ, ಆ ಭಕ್ತಿಯಿಂದ ಮುಕ್ತಿಯೂ, ಕ್ರಮಕ್ರಮವಾಗಿ ಕೈಗೂಡಿಬರುವುವು. ಭಗವಂತನಲ್ಲಿ ಈ ಭಕ್ತಿಯುಂಟಾಗಬೇಕಾದರೂ ಆತನ ಅನುಗ್ರಹವಿಲ್ಲದೆ ಲಭಿಸಲಾರದು.

ರಾಜೇಂದ್ರಾ ! ಪ್ರಜಾಪತಿಯಾದ ಸಾಕ್ಷಾಚ್ಚತುರ್ಮುಖನು, ಪೂಜ್ಯನಾದ ರುದ್ರನು, ಮನು ದಕ್ಷರೇ ಮೊದಲಾದ ಪ್ರಜಾಧಿಪತಿಗಳು,

ಸೃಷ್ಟಿಕರಾದ ಸನಕಾದಿಗಳು, ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು, ಭೃಗು, ವಸಿಷ್ಠಮುನಿ, ಮೊದಲಾಗಿ ನನ್ನವರೆಗಿನ ಬ್ರಹ್ಮವಾದಿಗಳು, ಬೃಹಸ್ಪತಿ, ವ್ಯಾಸಮಹರ್ಷಿ ಮೊದಲಾದವರೆಲ್ಲರೂ ತಪಸ್ಸು, ವಿದ್ಯೆ, ಸಮಾಧಿ ಮೊದಲಾದ ಬೇರೆಬೇರೆ ಉಪಾಯಗಳಿಂದ ಹುಡುಕುತ್ತಿದ್ದರೂ, ಅದ್ಯಾಪಿ ಆ ಪರಮಪುರುಷನನ್ನು ಸಾಕ್ಷಾತ್ಕರಿಸ ಲಾರದೆ ಕಳವಳಿಸುತ್ತಿರುವರು. ಅಂತಹ ಮಹಾತ್ಮರೇ ಆ ಪರಮಪುರುಷ ನನ್ನು ಕಾಣಲಾರದಿರುವಾಗ, ಅನಂತವಾಗಿಯೂ, ದುರವಗಾಹವಾಗಿಯೂ ಇರುವ ವೇದದಲ್ಲಿ ಹೇಳಲ್ಪಟ್ಟ ಅಲ್ಪಸುಖಗಳಿಗಾಗಿ ಆಸೆಪಟ್ಟು, ಇಂದ್ರಾದಿ ದೇವತೆಗಳನ್ನು ಭಜಿಸತಕ್ಕ ನಿನ್ನಂತವರು, ಅವನನ್ನು ಹೇಗೆತಾನೇ ಕಾಣ ಬಲ್ಲರು? ಭಗವಂತನು ಯಾವಾಗ ಯಾವ ಚೇತನನಲ್ಲಿ ಅನುಗ್ರಹವನ್ನಿ ಟ್ಟು ಅವನನ್ನುದ್ಧರಸಬೇಕೆಂದು ಸಂಕಲ್ಪಿಸುವನೋ, ಆ ಕ್ಷಣವೇ ಆ ಮ ನುಷ್ಯನಿಗೆ,ಇಹಲೋಕದ ಮತ್ತು ಸ್ವರ್ಗಾದಿಪರಲೋಕಗಳ ಸುಖಕ್ಕೆ ಸಾ ಧನವಾದ ಕರ್ಮಗಳಲ್ಲಿ ಆಸೆಯು ಬಿಟ್ಟುಹೋಗಿ,ಅವನ ಮನಸ್ಸು ಭಗವಂತ ನಲ್ಲಿಮಾತ್ರವೇ ನೆಲೆಗೊಳ್ಳುವುದು. ಆದುದರಿಂದ ಎಲೈ ಪ್ರಾಚೀನಬರ್ಹಿ ರಾಜೇಂದ್ರನೆ! ನೀನು ಭಗವದನುಗ್ರಹವೇ ಮುಕ್ತಿಕಾರಣವೆಂದು ದೃಢವಾ ಗಿ ನಂಬು! ಸ್ವರ್ಗಾದಿಸಾಧನಗಳಾದ ಕರ್ಮಗಳು ಪುರುಷಾರ್ಥವನ್ನು ಕೈಗೂ ಡಿಸುವುವೆಂಬ ಬುದ್ಧಿಯನ್ನು ಬಿಡು ! ಆ ಸುಖಗಳು ಎಂದಿಗೂ ಪುರುಷಾ ರ್ಥಗಳೆನಿಸುವುದಿಲ್ಲ! ಅಧಿಕಾಯಾಸದಿಂದ ಸ್ವಲ್ಪಫಲಗಳನ್ನು ಕೊಡತಕ್ಕ ಅವುಗಳಲ್ಲಿ ಕಷ್ಟಕ್ಕೆ ತಕ್ಕ ಸುಖವಿಲ್ಲ! ರಾಜಸತಾಮಸಬುದ್ಧಿಯುಳ್ಳ ಕೆಲ ವರು, ವೇದದಲ್ಲಿ ಭಗವದಾರಾಧನರೂಪವಾಗಿಯೇ ಹೇಳಲ್ಪಟ್ಟ ಕರ್ಮ ಕಾಂಡವನ್ನು, ಕೇವಲಕರ್ಮಪ್ರಧಾನವೆಂದು ತಿಳಿಯುವರು. ಅವರು ವೇ ದದ ತಾತ್ಪರ್ಯಾರ್ಥವನ್ನೂ,ಸ್ವಸ್ವರೂಪವನ್ನೂ ತಿಳಿಯದ ಅಜ್ಞಾನಿಗಳಲ್ಲದೆ ಬೇರೆಯಲ್ಲ. ರಾಜೇಂದ್ರಾ! ಆದುದರಿಂದ ನೀನು ಇನ್ನುಮೇಲೆ ಕೇವಲ ಕ ರ್ಮ ಪ್ರವೃತ್ತನಾಗಿರಬೇಡ! ಭೂಮಿಯಗಲಕ್ಕೂ ಪೂರ್ವಾಗ್ರವಾದ ದರ್ಭೆ ಗಳನ್ನು ಹರಡಿ, ಅನೇಕಪಶುಗಳನ್ನು ಕೊಲ್ಲುವುದರಿಂದ, ನಾನೇ ದೊಡ್ಡ ಯಾಗಶೀಲನೆಂದು ಗರ್ವಿಸಿ, ನೀನು ಹಿಂದುಮುಂದಾಲೋಚನೆಯಿಲ್ಲದೆ,

ಉತ್ತಮಪುರುಷಾರ್ಥವಾದ ಮೋಕ್ಷೋಪಾಯವನ್ನು ಮರೆತು, ಜಡನಾಗಿರುವೆ! ಇನ್ನು ಈವಿಧವಾದ ಕರ್ಮಗಳನ್ನು ನಿಲ್ಲಿಸಿಬಿಡು! ಭಗವಂತನನ್ನೊಲಿಸು! ಭಗವಂತನನ್ನೊಲಿಸತಕ್ಕ ಕರ್ಮವೇ ಕರ್ಮವು! ಭಗವಂತನನ್ನು ಧ್ಯಾನಿಸತಕ್ಕ ಜ್ಞಾನವೇ ಜ್ಞಾನವು! ಆ ಶ್ರೀಹರಿಯೇ ಸಕಲದೋಷಗಳನ್ನೂ ನೀಗಿಸತಕ್ಕವನು! ಅವನೇ ಸಮಸ್ತಕಲ್ಯಾಣಗುಣಪರಿಪೂರ್ಣನು! ಅವನೇ ಸಮಸ್ತಜೀವಗಳಿಗೂ ಅಂತರ್ಯಾಮಿಯು! ಅವನೇ ಸಕಲಜಗತ್ತಿಗೂ ಮೂಲಕಾರಣನು! ಅವನೇ ಸಕಲಜಗದೀಶ್ವರನು! ಅವನ ಪಾದಮೂಲವನ್ನು ಸೇರಿಪರೆಮಾತ್ರವೇ ಕ್ಷೇಮವು! ಅಂತವರೇ ಭಗವಂತನಿಗೆ ಬಹಳ ಪ್ರೀತಿಪಾತ್ರರು! ಅಂತವರಿಗೆ ಯಾವ ವಿಚಾರದಲ್ಲಿಯೂ ಎಳ್ಳಷ್ಟಾದರೂ ಭಯವಿರದು! ರಾಜಾ! ಈ ತತ್ವಗಳನ್ನು ಬಲ್ಲವನೇ ವಿದ್ವಾಂಸನು! ಅಂತಹ ವಿದ್ವಾಂಸನೇ ಗುರುವೆನಿಸುವನು! ಅಂತಹ ಗುರುವೇ ಸಾಕ್ಷಾಚ್ಛ್ರೀಹರಿಯೆಂದೂ ತಿಳಿಯಬೇಕು? ರಾಜೇಂದ್ರಾ! ನೀನು ಕೇಳಿದ ಪ್ರಶ್ನಗಳೆಲ್ಲಕ್ಕೂ ಇದೇ ನನ್ನ ಸಮಾಧಾನವು. ಇದೇ ವಿಚಾರವನ್ನು ಇನ್ನೂ ಚೆನ್ನಾಗಿ ಪುಷ್ಟೀಕರಿಸುವಂತೆ ಮತ್ತೊಂದು ರಹಸ್ಯವನ್ನು ತಿಳಿಸುವೆನು ಕೇಳು! ಒಂದಾನೊಂದು ಜಿಂಕೆಯು, ತನಗೆ ಬಹಳ ಮೋಹಪಾತ್ರವಾದ ಹೆಣ್ಣುಜಿಂಕೆಯೊಡನೆ ಹೂವಿನ ತೋಟದಲ್ಲಿ ಪ್ರವೇಶಿಸಿ, ಸ್ವಲ್ಪಸುಖಕ್ಕಾಗಿ ಅಲ್ಲಲ್ಲಿ ತಿರುಗುತ್ತ, ಅಲ್ಲಲ್ಲಿ ಭ್ರಮರಝಂಕಾರಗಳನ್ನು ಕಿವಿಗೊಟ್ಟು ಕೇಳುತ್ತ, ಮುಂದೆ ಮಾಂಸಭಕ್ಷಕಗಳಾದ ತೋಳಗಳು ತನ್ನನ್ನು ಕೊಂದು ತಿನ್ನುವುದಕ್ಕೆ ಕಾದಿರುವುದನ್ನೂ ತಿಳಿಯದೆ ಅಲೆಯುತ್ತಿರುವಾಗ, ಹಿಂದಿನಿಂದ ಬೇಡನ ಬಾಣಕ್ಕೆ ಸಿಕ್ಕಿ ಸತ್ತುಬಿದ್ದರೆ ಹೇಗೋ ಹಾಗೆ, ನೀನು ನಿನ್ನಸ್ಥಿತಿಯನ್ನು ಹೋಲಿಸಿ ನೋಡು? ಆ ಜಿಂಕೆಯ ಸ್ಥಿತಿಯಂತೆಯೇ ಈಗ ನಿನ್ನ ಸ್ಥಿತಿಯೆಂದು ತಿಳಿ! ಈ ಗೃಹಸ್ಥಾಶ್ರಮವೆಂಬುದು ಹೂವಿನತೋಟದಂತೆ ಕೆಲವು ಕಾಲದವರೆಗೆ ಮನಸ್ಸನ್ನು ಮೋಹಗೊಳಿಸತಕ್ಕ ಸ್ತ್ರೀಯರಿಂದ ತುಂಬಿರುವುದು. ಕಾಮಸುಖವೆಂಬುದು ಮಕರಂದಗಂಧದಂತೆ ಮನುಷ್ಯನಿಗೆ ಆಸೆಯನ್ನು ಹುಟ್ಟಿಸುವುದು. ಆ ತೋಟದಲ್ಲಿರುವ ಕ್ಷುದ್ರಾಹಾರಗಳಂತೆ ಇಂದ್ರಿಯಚಾಪಲ್ಯವು ಮನುಷ್ಯನನ್ನು ಅತ್ತಿತ್ತ ಅಲೆದಾಡಿಸುತ್ತಿರುವುದು. ಭ್ರಮರಝಂಕಾರ

ದಂತೆ ಸ್ತ್ರೀಯರ ಮಧುರಾಲಾಪವು ಮೋಹಗೊಳಿಸುತ್ತಿರುವುದು. ತೋಳ ಗಳಂತೆ ಅಹೋರಾತ್ರಗಳೆಂಬ ಕಾಲವಿಭಾಗಗಳು ಮನುಷ್ಯನಿಗೆ ತಿಳಿಯದಂತೆ ಅವನ ಆಯುಸ್ಸನ್ನು ಕಂದಿಸುವುದಕ್ಕೆ ಕಾದಿರುವುವು. 'ಕಾಡುಮೃಗದಂತೆ, ಇದೊಂದನ್ನೂ ತಿಳಿಯದೆ ಅಜ್ಞನಾಗಿ ಕುಟುಂಬಧರ್ಮದಲ್ಲಿರುವ ಮನುಷ್ಯನನ್ನು, ಮೃತ್ಯುವು ಬೇಡನಂತೆ ಹಿಂದಿನಿಂದ ಬಂದು ಕೊಲ್ಲುವುದು. ಈಗ ನಿನ್ನ ಸ್ಥಿತಿಯೂ ಅದೇವಿಧವಾದುದೆಂದು ತಿಳಿ ! ಆದುದರಿಂದ ನೀನು ಆ ಜಿಂಕೆಯ ಸ್ಥಿತಿಯನ್ನು ಚೆನ್ನಾಗಿ ಆಲೋಚಿಸಿ, ನಿನ್ನ ಮನಸ್ಸನ್ನು ನಿನ್ನ ಹೃದಯಗುಹೆಯಲ್ಲಿಮಾತ್ರವೇ ನಿರ್ಬಂಧಿಸಿಡು ! ಕಿವಿಗಳ ವ್ಯಾಪಾರವನ್ನು ಆ ಮನಸ್ಸಿಗೆ ಅಧೀನವಾಗಿ ಮಾಡು ! ಕರ್ಮಗಳಲ್ಲಿ ಅಭಿಲಾಷೆಯನ್ನು ಬಿಡು ! ಈ ಗೃಹಸ್ಥಾಶ್ರಮವನ್ನು ತೊರೆದುಬಿಡು ! ಊರಲ್ಲಿ ಕಾಮುಕರ ಚರಿತ್ರೆಯೇ ವಿಶೇಷವಾಗಿ ಕಿವಿಗೆಬೀಳುವುದರಿಂದ ಮನಸ್ಸನ್ನು ಕೆಡಿಸುವುದು. ಆದುದರಿಂದ ಅದನ್ನು ತ್ಯಜಿಸುವುದೇ ಮೇಲು! ಜೀವನನ್ನು ಸರ್ವವಿಧದಿಂದಲೂ ರಕ್ಷಿಸತಕ್ಕ ಭಗವಂತನನ್ನು ಶರಣುಹೊಂದು." ಎಂದನು.

ನಾರದನ ತತ್ವೋಪದೇಶವನ್ನು ಕೇಳಿ ಪ್ರಾಚೀನಬರ್ಹಿಯು "ಓ ಮುನೀಂದ್ರಾ! ಜ್ಞಾನಾದಿಸಂಪನ್ನನಾದ ನೀನು ಪ್ರೀತಿಯಿಂದುಪದೇಶಿಸಿದ ಆತ್ಮತತ್ವವೆಲ್ಲವನ್ನೂ ಚೆನ್ನಾಗಿ ಕೇಳಿದೆನು. ಇವೆಲ್ಲವೂ ಅವಶ್ಯವಾಗಿ ಕೇಳಿ ನಡೆಯಬೇಕಾದುದೇ! ಇದುವರೆಗೆ ನನಗೆ ಕರ್ಮಗಳ ಮೇಲ್ಮೆಯನ್ನು ಹೇಳಿದ ನನ್ನ ಉಪಾಧ್ಯಾಯರಿಗೂ ಈ ರಹಸ್ಯಾರ್ಥವು ತಿಳಿಯದೆಂದೇ ತೋರುವುದು. ಹಾಗೆ ತಿಳಿದಿದ್ದಪಕ್ಷದಲ್ಲಿ ಅವರು ಅದನ್ನು ನನಗೆ ತಿಳಿಸದೆ ಹೋಗುತಿದ್ದರೆ? ಓ ಮುನೀಂದ್ರಾ ! ನೀನು ಹೇಳಿದ ಈ ಅಧ್ಯಾತ್ಮತತ್ವದಿಂದ ಪ್ರಾಯಕವಾಗಿ ನನ್ನ ಸಂಶಯಗಳೆಲ್ಲವೂ ತೀರಿದುವು ಆದರೆ ನನಗೆ ಇನ್ನೊಂದು ಸಂಶಯವಿರುವುದು. ಆ ಸಂದೇಹವನ್ನು ಪರಿಹರಿಸುವುದಕ್ಕೆ ಇಂದ್ರಿಯವ್ಯಾಪಾರಗಳು ಸಾಲದುದರಿಂದ, ಮಹರ್ಷಿಗಳೂ ಅದನ್ನು ತಿಳಿಯಲಾರರೆಂದೇ ತೋರುವುದು. ಆ ಸಂದೇಹವನ್ನೂ ನೀನೇ ಪರಿಹರಿಸಬೇಕು. "ಪುರುಷನು ಯಾವದೇಹದಿಂದ ಈ ಲೋಕದಲ್ಲಿ ಪುಣ್ಯಪಾಪರೂಪವಾದಕರ್ಮಗಳನ್ನು ನಡೆಸುವನೋ, ಆ ದೇಹವನ್ನು ಇಲ್ಲಿಯೇ ಬಿಟ್ಟು, ಆ ಕರ್ಮಗಳಿಂದುಂಟಾದ

ಬೇರೊಂದು ದೇಹವನ್ನು ಹೊಂದಿ,ಆ ಕರ್ಮಾನುಸಾರವಾಗಿಯೇ ಸುಖದುಃಖಗಳನ್ನೂ ಅನುಭವಿಸುವನು" ಎಂದು ಅಲ್ಲಲ್ಲಿ ವೇದವಾದಿಗಳು ಹೇಳಿರುವುದಾಗಿ ಪುರಾಣಾದಿಗಳಿಂದ ತಿಳಿದುಬರುವುದು. ಹೀಗೆ ಸುಖದುಃಖಗಳಿಗೆ ಕಾರಣವೆಂದು ಹೇಳಿರುವ ಪುಣ್ಯಪಾಪಕರ್ಮಗಳು, ಜನರಿಂದ ಯಾವಯಾವ ಕಾಲದಲ್ಲಿ ನಡೆಸಲ್ಪಡುವುವೋ, ಆಯಾ ಉತ್ತರಕ್ಷಣದಲ್ಲಿಯೇ ಅದರ ಪ್ರಸಕ್ತಿಯೇ ಇಲ್ಲದಂತೆ ಅದೃಶ್ಯವಾಗುವುವಷ್ಟೆ? ಪೂರ್ವಕರ್ಮಗಳಾಗಲಿ, ಆ ಕರ್ಮಗಳಿಗೆ ಕಾರಣವಾದ ಮನಸ್ಸಾಗಲಿ, ಆ ಮನಸ್ಸಿಗೆ ಆಶ್ರಯವಾದ ದೇಹವಾಗಲಿ, ಯಾವುದೂ ಮುಂದಿನ ಜನ್ಮದಲ್ಲಿ ಕಾಣಲಾರವು. ಹೀಗಿರುವಾಗ ಪೂರ್ವಜನ್ಮದಲ್ಲಿ ಮಾಡಿದ ಕರ್ಮಗಳು, ಉತ್ತರಜನ್ಮದಲ್ಲಿ ಸುಖದುಃಖಾದಿಗಳಿಗೆ ಕಾರಣವೆಂಬುದು ಹೇಗೆ? ಆದುದರಿಂದ,ಸುಖದುಃಖಾದಿಗಳೆಲ್ಲವೂಮನುಷ್ಯನಿಗೆ ನಿರ್ನಿಮಿತ್ತವಾಗಿಯೇ ಪ್ರಾಪ್ತವಾಗುವುವೆಂದು ಹೇಳಬೇಕಲ್ಲವೆ? ಈ ವಿಷಯದಲ್ಲಿ ನಿನ್ನ ಅಭಿಪ್ರಾಯವನ್ನು ತಿಳಿಸಬೇಕು" ಎಂದನು.

ಅದಕ್ಕಾ ನಾರದನು. "ರಾಜೇಂದ್ರಾ! ಜೀವನು ಕರ್ಮಗಳನ್ನು ನಡೆಸುವುದಕ್ಕೆ ಅವನ ಮನಸ್ಸೇ ಕಾರಣವು. ಮನುಷ್ಯನು ಯಾವ ಮನಸ್ಸಿನಿಂದ ಕರ್ಮಗಳನ್ನು ನಡೆಸುವನೋ, ಆ ಮನಸ್ಸಿನೊಡನೆಯೇಪರಲೋಕಕ್ಕೆ ಹೋಗಿ, ಅಲ್ಲಿ ಆಯಾಕರ್ಮಾನುಗುಣವಾದ ಸುಖದುಃಖಗಳನ್ನು ಅನುಭವಿಸುವನು. ಮನುಷ್ಯನಿಗೆ ಆಯಾಜನ್ಮದಲ್ಲಿದ್ದ ಸ್ಥೂಲಶರೀರವು ನಷ್ಟವಾದರೂ, ಕರ್ಮಕಾರಣವಾದ ಮನಸ್ಸೆಂಬುದು,ಮುಂದುಮುಂದಿನ ಜನ್ಮಗಳಲ್ಲಿಯೂ ಅನುಸರಿಸಿ ಬಂದು, ಜೀವನಿಗೆ ಸುಖದುಃಖಗಳ ಅನುಭವವನ್ನುಂಟು ಮಾಡುವುದು. ಇದಕ್ಕೊಂದು ದೃಷ್ಟಾಂತವನ್ನು ಹೇಳುವೆನು ಕೇಳು.ಮನುಷ್ಯನುನಿದ್ರೆಯಿಂದಮಲಗಿದಾಗ,ಅವನ ದೇಹವು ಪ್ರಾಣಸಹಿತವಾಗಿ ಉಸಿರಾಡುತ್ತಿದ್ದರೂ, ಕನಸಿನಲ್ಲಿ ಜೀವನು ಆ ದೇಹದಲ್ಲಿ ಅಭಿಮಾನವನ್ನು ಬಿಟ್ಟು, ತನ್ನ ಮನಸ್ಸಿನಲ್ಲಿ ವಾಸನಾರೂಪವಾಗಿ ಅಂಟಿಬರುವ ಕರ್ಮಫಲವನ್ನು ಮಾತ್ರ ಅದೇ ಮನುಷ್ಯದೇಹದಿಂದಲಾಗಲಿ, ಬೇರೆ ದೇವಾದಿಶರೀರದಿಂದಾಗಲಿ, ಆ ಮನಸ್ಸಿನಿಂದಲೇ ಅನುಭವಿಸುವನು. ಸ್ಥೂಲದೇಹವು ಶವದಂತೆ ಒಂದುಕಡೆಯಲ್ಲಿ ಬಿದ್ದಿರುವಾಗಲೂ, ಮನುಷ್ಯನ ಮನಸ್ಸಿಗೆ,

ಕನಸಿನಲ್ಲಿ ಸುಖದುಃಖಗಳು ಹೇಗೆ ತೋರುವುವೋ, ಹಾಗೆಯೇ ಪುರುಷ ನನ್ನು ಅವನ ಮನಸ್ಸು ಲೋಕಾಂತರದಲ್ಲಿಯೂ ಅನುವರ್ತಿಸಿ ಬಂದು, ಸುಖದುಃಖಾನುಭವವನ್ನುಂಟುಮಾಡುವುದು. ಮತ್ತು ಆಯಾಕ್ಷಣದಲ್ಲಿಯೇ ನಾಶಹೊಂದತಕ್ಕ ಕರ್ಮವು,ಜನ್ಮಾಂತರ ಫಲಗಳಿಗೆ ಹೇಗೆ ಕಾರಣವಾಗುವುದೆಂದು ಕೇಳಿದೆಯಲ್ಲವೆ?ಕರ್ಮವು ನಷ್ಟವಾದರೇನು? ಮನುಷ್ಯನು “ನಾನು, ನನ್ನದು” ಎಂಬ ಅಹಂಕಾರಮಮಕಾರಗಳಿಂದ ಯಾವಯಾವ ಕರ್ಮಗಳನ್ನು ನಡೆಸುವನೋ, ಅವು ಆಗಾಗಲೇ ನಷ್ಟವಾದರೂ, ಆ ಕರ್ಮಗಳ ವಿಷಯದಲ್ಲಿ ಭಗವಂತನ ನಿಗ್ರಹಾನುಗ್ರಹರೂಪವಾದ ಶಕ್ತಿಯು ಸಿದ್ಧವಾಗಿ ನಿಲ್ಲುವುದು. ಆ ಶಕ್ತಿಯೇ ಪುನರ್ಜನ್ಮವನ್ನುಂಟುಮಾಡುವುದು. ಮತ್ತು ಪೂರ್ವಜನ್ಮದಲ್ಲಿದ್ದ ಮನಸ್ಸು, ಆ ಕರ್ಮವಾಸನೆಯೊಡನೆ ಮುಂದಿನ ಜನ್ಮದಲ್ಲಿ ಅನುಸರಿಸಿ ಬರುವುದು.ಇದಕ್ಕೆ ಪ್ರಮಾಣವನ್ನು ತೋರಿಸಿಕೊಡುವೆನು ನೋಡು! ಇಂದ್ರಿಯವ್ಯಾಪಾರದಿಂದ ಮನುಷ್ಯನ ಮನಸ್ಸನ್ನು ಊಹಿಸಿ ತಿಳಿಯಬಹುದು. ಹೇಗೆಂದರೆ, ಸರ್ವೇಂದ್ರಿಯಗಳೂ, ಮತ್ತು ಆಯಾ ಇಂದ್ರಿಯಗಳಿಗೆ ಗೋಚರಿಸತಕ್ಕ ವಿಷಯಗಳೂ ಸಿದ್ಧವಾಗಿರುವಾಗಲೂ, ಆ ಸರ್ವೇಂದ್ರಿಯಜ್ಞಾನವೂ ಏಕಕಾಲದಲ್ಲಿ ಉಂಟಾಗಲಾರದಷ್ಟೆ? ಜೀವಾತ್ಮನ ಜ್ಞಾನವು ಎಲ್ಲಾವಿಷಯಗಳಲ್ಲಿಯೂ ನಿರಂಕುಶವಾಗಿ ನಡೆಯತಕ್ಕದಾಗಿದ್ದರೂ,ಮನಸ್ಸು ಅದನ್ನು ತಡೆದು, ಒಂದೊಂದುವಿಷಯದಲ್ಲಿಮಾತ್ರ ಪ್ರವರ್ತಿಸುವಂತೆ ಮಾಡುವುದು. ಆದುದರಿಂದ ಮನಸ್ಸೇ ಜ್ಞಾನಕ್ಕೆ ದ್ವಾರವೆನಿಸುವುದು ಹೀಗಾಗುವುದಕ್ಕೆ ಆಯಾ ಇಂದ್ರಿಯದೊಡನೆ ಮನಸ್ಸಿನ ಸಂಬಂಧವೇ ಕಾರಣವೆಂದು ತಿಳಿಯಬೇಕು. ಇದರಂತೆಯೇ ಆಯಾ ಮನುಷ್ಯನ ಚಿತ್ತವ್ಯಾಪಾರಗಳಿಂದ, ಅವನಿಗೆ ಪೂರ್ವಜನ್ಮಾರ್ಜಿತವಾದ ಕರ್ಮಗಳುಂಟೆಂದೂ ಊಹಿಸಬಹುದು. ಪುರುಷನು ತಾನು ಹುಟ್ಟಿದುದುವೊದಲು, ಈ ಜನ್ಮದಲ್ಲಿ ಕಂಡಾಗಲಿ, ಕೇಳಿಯಾಗಲಿ, ಅನುಭವಿಸಿಯಾಗಲಿ ಇಲ್ಲದ ವಸ್ತುಗಳು ಆ ಮನುಷ್ಯನಿಗೆ ಸ್ವಪ್ನದಲ್ಲಿಯೂ ಕಾಣಲಾರದೆಂದೇಹಿರಿಯರು ನಿರ್ಣಯಿಸಿರುವರು. ಆದುದರಿಂದ ಹಿಂದಿನಜನ್ಮದಲ್ಲಿ ಇದಕ್ಕೆ ವೊದಲೇ ಅನುಭವಿಸಲ್ಪಟ್ಟ ವಸ್ತುವೇ, ಸ್ವಪ್ನಾದಿಗಳಲ್ಲಿ ಮನಸ್ಸಿನ ಅನುಭವಕ್ಕೆಬರಬೇ

ಕಲ್ಲದೆ ಬೇರೆಯಲ್ಲ!ಇಂತಹ ಮನಸ್ಸಿನ ವ್ಯಾಪಾರದಿಂದಲೇ ನಾವು ಜನ್ಮಾಂತರವುಂಟೆಂಬುದನ್ನು ಊಹಿಸಿ ತಿಳಿಯಬಹುದಲ್ಲವೆ? ಹಿಂದೆ ಅನುಭವಿಸಿದ ಪದಾರ್ಥವೇ ಸ್ವಪ್ನಾದಿಗಳಲ್ಲಿಯೂ ಅನುಭವಕ್ಕೆ ಬರಬೇಕಾದುದರಿಂದ, ಮನುಷ್ಯನು ಈ ಜನ್ಮದಲ್ಲಿ ಹಿಂದೆ ಯಾವಾಗಲೂ ತಾನು ಕಂಡು ಕೇಳಿಲ್ಲದ ವಸ್ತುವನ್ನು, ಸ್ವಪ್ನದಲ್ಲಿಯೋ ಅಥವಾ ಮನಸ್ಸಿನ ಭಾವನೆಯಲ್ಲಿಯೋ ಕಂಡರೆ, ಪೂರ್ವಜನ್ಮದಲ್ಲಿ ಆ ವಸ್ತುವನ್ನು ಅನುಭವಿಸಿಯೇ ಇರಬೇಕೆಂದು ನಿಶ್ಚಯಿಸಬಹುದು. ಮನುಷ್ಯನ ಮನಸ್ಸೇ ಅವನ ಭೂತಭವಿಷ್ಯದ್ವರ್ತಮಾನರೂಪಗಳೆಲ್ಲವನ್ನೂ ಕಾಣಿಸುವುದು. ಹಿಂದೆ ಯಾವಾಗಲೂ ಕಂಡು ಕೇಳಿಲ್ಲದ ವಸ್ತುವು ಒಮ್ಮೊಮ್ಮೆ ಮನಸ್ಸಿಗೆ ಹೊಳೆದಾಗ, ಕಾಲದೇಶವರ್ತಮಾನಗಳೊಡನೆ ಅದನ್ನು ಹಾಗೆಯೇ ತಾನು ಮೊದಲು ಅನುಭವಿಸಿದ್ದಂತೆ ಊಹಿಸಬೇಕು.

ಆದರೆ, ಮೇಲೆಹೇಳಿದ ನಿರೂಪಣೆಯಿಂದ ಜನ್ಮಾಂತರವೂ, ಪ್ರಾರಬ್ಧಕರ್ಮಗಳೂ ಉಂಟೆಂದು ಸಾಧಿಸಿದಮಾತ್ರಕ್ಕೆ ಅದರಿಂದ ಲಾಭವೇನು ? ಎಂದು ಕೇಳುವೆಯಾ? ಈ ಜನ್ಮದಲ್ಲಿ ಮನೋರಥಕ್ಕೆ ವಿಷಯವಾಗುವ ಪದಾರ್ಥಗಳೆಲ್ಲವೂ ಪೂರ್ವಜನ್ಮದಲ್ಲಿ ಇಂದ್ರಿಯಗಳ ಮೂಲಕವಾಗಿ ಮನಸ್ಸಿಗೆ ಹೊಳೆದಿರಬೇಕಲ್ಲವೆ? ಪೂರ್ವಜನ್ಮದ ಅನುಭವದಿಂದುಂಟಾದ ಆ ವಾಸನೆಗೆ ತಕ್ಕಂತೆಯೇ, ಪ್ರತಿಮನುಷ್ಯನಿಗೂ ಮನೋರಥವೂ ಬೇರೆಬೇರೆ ವಿಧವಾಗಿ ಪ್ರವರ್ತಿಸುವುದು. ಹೀಗೆ ಆಯಾ ಮನುಷ್ಯನ ಮನೋರಥವನ್ನನುಸರಿಸಿ, ಅವನ ಪೂರ್ವಜನ್ಮದ ವಾಸನೆಯನ್ನು ಊಹಿಸಬಹುದು.ಮನಸ್ಸೆಂಬುದು ಜನ್ಮಜನ್ಮಕ್ಕೂ ಅನುಸರಿಸಿ ಬರುವುದರಿಂದಲೂ ಸಮಸ್ತಪದಾರ್ಥಗಳೂ ಅವರವರ ಕರ್ಮವಾಸನೆಗೆ ಅನುಸಾರವಾಗಿ ಮನಸ್ಸಿನಲ್ಲಿ ಅಂಟಿರುವುದರಿಂದಲೂ, ಹಿಂದೆ ಅನುಭವಿಸಿದ ವಸ್ತುವೇ ಮುಂದೆ ಬುದ್ಧಿಗೆ ತೋರಬೇಕೇಹೊರತು, ಅನುಭವಿಸಿ ಕಾಣದ ವಸ್ತುವು ಯಾರಿಗೂ ಯಾವಾಗಲೂ ಕಾಣಲಾರದು. ಮನಸ್ಸು ಜನ್ಮಜನ್ಮಕ್ಕೂ ಅನುಸರಿಸಿ ಬಾರದಿದ್ದರೆ ಹೀಗಾಗಲಾರದು

"ಹಾಗಿದ್ದರೆ ಮುಮುಕ್ಷುಗಳು ಬಯಸತಕ್ಕ ಮೋಕ್ಷಾನಂದವೂ ಅವರಿಗೆ ಪೂರ್ವಜನ್ಮದಲ್ಲಿ ಅನುಭವಿಸಿದ್ದಾಗಿಯೇ ಇರಬೇಕಲ್ಲವೆ" ಎಂದರೆ,ಹಾಗಲ್ಲ. ಸತ್ವಗುಣವು ಹೆಚ್ಚಿ ಮನಸ್ಸು ಭಗವದುಪಾಸನೆಯಲ್ಲಿ ಪ್ರವರ್ತಿಸಿದಾಗಲೂ, ಚಂದ್ರೋದಯದಲ್ಲಿ ಅಂಧಕಾರವು ಹೇಗೋ ಹಾಗೆ ಅಜ್ಞಾನವೂ ಮಂಕಾಗಿ ಕಾಣುತ್ತಿರುವುದು.ಆಗ ಜ್ಞಾನಾಜ್ಞಾನಗಳೆರಡೂ ಬೆಳದಿಂಗಳೂ ಕತ್ತಲೆಯೂ ಸೇರಿದಂತೆ ಮಿಳಿತವಾಗಿರುವುವು. ಭಗವದುಪಾಸನೆಯನ್ನು ಆಗಲೇ ಪ್ರಾರಂಭಿಸಿದವನಿಗೆ,ಬ್ರಹ್ಮಸ್ವರೂಪಾನುಭವದಿಂದತೋರುವ ಆನಂದಾದಿಗಳು ಪರೋಕ್ಷವಾಗಿಯೇ ಮನಸ್ಸಿಗೆ ತೋರುವುವೇಹೊರತು ಪ್ರತ್ಯಕ್ಷವಾಗಿ ಲಭಿಸಲಾರವು. ಸಂಸಾರದಶೆಯಲ್ಲಿ ಇರುವವರು ಆ ಆನಂದಾದಿಗಳನ್ನು ಪರೋಕ್ಷದಲ್ಲಿಯೂ ಪಡೆಯಲಾರರು. ಏಕೆಂದರೆ, ಜೀವನು ಶಬ್ದಾದಿವಿಷಯಗಳಿಂದಲೂ, ಸತ್ವಾದಿಗುಣಗಳಿಂದಲೂ, ಇಂದ್ರಿಯಗಳಿಂದಲೂ,ಆವೃತನಾಗಿರುವವರೆಗೆ,ಅವನಿಗೆ ಆತ್ಮಸ್ವರೂಪವನ್ನು ಮರೆಸತಕ್ಕ ಅಹಂಕಾರ ಮಮಕಾರಗಳು ಬಿಟ್ಟುಹೋಗಲಾರವು. ಮತ್ತು ನಿದ್ರೆಯಲ್ಲಿಯೂ, ಮೂರ್ಛೆಯಲ್ಲಿಯೂ, ಮಿತಿಮೀರಿದ ಸಂಕಟದಲ್ಲಿಯೂ, ಮರಣದಲ್ಲಿಯೂ, ಜೀವನಿಗೆ ಜ್ಞಾನವೆಂಬುದು ಬಹಳವಾಗಿ ತಗ್ಗಿ ಹೋಗುವುದು. ಆ ಸ್ಥಿತಿಯಲ್ಲಿ ಅವನಿಗೆ ತನ್ನ ದೇಹವೇ ತನಗೆ ಮರೆತುಹೋಗುವುದರಿಂದ, ಆ ದೇಹದಲ್ಲಿ ನಾನೆಂಬ ಅಜ್ಞಾನವೂ ಉಂಟಾಗದು. ಆದರೆ ಮೇಲೆಹೇಳಿದ ಅವಸ್ಥೆಗಳಲ್ಲಿ ಜ್ಞಾನಕಾರಣಗಳಾದ ಇಂದ್ರಿಯಗಳೂ, ಮನಸ್ಸೂ ನಷ್ಟವಾಗದೆ ಇರುವಾಗ, ಜ್ಞಾನವುಮಾತ್ರ ನಷ್ಟವಾಗುವುದೇಕೆ? ಎಂದು ನೀನು ಶಂಕಿಸಬಹುದು. ಯೌವನಸ್ಥನಾದ ಪುರುಷನಿಗೆ ಮನಸ್ಸಿನೊಡಗೂಡಿದ ಹನ್ನೊಂದು ಬಗೆಯ ಇಂದ್ರಿಯಗಳಿಂದ ಯಾವ ವಿಧವಾದ ಜ್ಞಾನವುಂಟಾಗುವುದೋ, ಆ ಜ್ಞಾನವು ಗರ್ಭದಶೆಯಲ್ಲಿಯಾಗಲಿ, ಬಾಲ್ಯದಲ್ಲಿಯಾಗಲಿ ಉಂಟಾಗದು. ಏಕೆಂದರೆ, ಇಂದ್ರಿಯಗಳಿಗೆ ಆ ಸ್ಥಿತಿಯಲ್ಲಿ ಸಾಕಾದಷ್ಟು ಶಕ್ತಿಯಿಲ್ಲದಿರುವುದೇ ಕಾರಣವು. ಅಮಾವಾಸ್ಯೆಯಲ್ಲಿ ಚಂದ್ರನಿದ್ದರೂ ಅವನಿಗೆ ಕಳೆಗಳು ಪೂರ್ಣವಾಗಿ ಇಲ್ಲದುದರಿಂದ, ಹೇಗೆ ಬೆಳದಿಂಗಳುಂಟಾಗದೋ, ಹಾಗೆಯೇ ಗರ್ಭದಲ್ಲಿಯೂ, ಬಾಲ್ಯದಲ್ಲಿಯೂ, ಇಂದ್ರಿಯಗಳಿ

ದ್ದರೂ, ಅವಕ್ಕೆ ಪೂರ್ಣಶಕ್ತಿಯಿಲ್ಲವಾದುದರಿಂದ ಜ್ಞಾನವುಂಟಾಗದು. ಆದರೆ ಗರ್ಭದಶೆಯಲ್ಲಿ ಇಂದ್ರಿಯವ್ಯಾಪಾರವೊಂದೂ ಇಲ್ಲದಿದ್ದಮೇಲೆ, ಆ ಸ್ಥಿತಿಯಲ್ಲಿ ಜೀವನನ್ನು ಸಂಸಾರದಿಂದ ಮುಕ್ತನಾದಂತೆಯೇ ಎಣಿಸ ಬೇಕಲ್ಲವೆ? ಎಂದರೆ, ಆ ಸ್ಥಿತಿಯಲ್ಲಿ ಇಂದ್ರಿಯಗಳಿಗೆ ವ್ಯಾಪಾರಶಕ್ತಿಯಿಲ್ಲ ದುದರಿಂದ, ಜೀವನಿಗೆ ವಿಷಯಾನುಭವವಿಲ್ಲದಿದ್ದರೂ ಹಿಂದಿನ ಜನ್ಮದಲ್ಲಿ ಅನುಭವಿಸಿದ ವಿಷಯವಾಸನೆಯು, ಅವನನ್ನು ಅನುಸರಿಸಿಯೇ ಬರುತ್ತಿರು ವುದರಿಂದ, ಆಗಲೂ ಅವನನ್ನು ಸಂಸಾರಬದ್ಧನೆಂದೇ ತಿಳಿಯಬೇಕು. ಮನು ಷ್ಯನಿಗೆ ಸ್ವಪ್ನದಲ್ಲಿ ಕಂಡಪದಾರ್ಥಗಳಲ್ಲಿ ಎಚ್ಚರವಾದಮೇಲೆ ಯಾವುದೂ ಕಾಣದಿದ್ದರೂ, ಆ ಸ್ವಪ್ನದಿಂದ ಸೂಚಿತಗಳಾದ ಶುಭಾಶುಭಗಳು ಬಿಟ್ಟು ಹೋಗಲಾರವು. ಅದರಂತೆಯೇ ಜೀವನಿಗೆ ಇಂದ್ರಿಯವ್ಯಾಪಾರಗಳು ತಗ್ಗಿ ದರೂ ಸಂಸಾರವು ಬಿಟ್ಟು ಹೋಗಲಾರದು ಓ ಪ್ರಾಚೀನಬರ್ಹಿ! ನೀನು ಹೇಳಿದ ಪ್ರಶ್ನೆಗಳೆಲ್ಲಕ್ಕೂ ಕ್ರಮವಾಗಿ ಉತ್ತರವನ್ನು ಹೇಳಿದುದಾಯಿತು. ಇನ್ನು ದೇಹಾತ್ಮಗಳ ಸ್ವರೂಪಭೇದವನ್ನು ವಿವರಿಸುವೆನು ಕೇಳು ! ಪಂಚ ಭೂತಗಳಿಂದಲೂ,ಪಂಚಪ್ರಾಣಗಳೊಡಗೂಡಿದ ಹನ್ನೊಂದು ಇಂದ್ರಿಯ ಗಳಿಂದಲೂ, ಸತ್ವರಜಸ್ತಮೋಗುಣಗಳಿಂದಲೂ, ಏರ್ಪಟ್ಟಿರುವ ಈ ಆಕಾ ರವೇ ದೇಹವೆನಿಸುವುದು. ಚೈತನ್ಯದಿಂದ ಕೂಡಿ(ಅಹಂ) "ನಾನು" ಎಂಬ ಜ್ಞಾನವಿಷಯವಾದುದೇ ಜೀವವೆನಿಸುವುದು. ಈ ವಿಧವಾದ ಶರೀರದಿಂದ ಕೂಡಿದ ಜೀವನು, ಇನ್ನೂ ಇದೇವಿಧವಾಗಿ ಎಷ್ಟೋ ದೇಹಗಳನ್ನು ಹೊಂ ದುತ್ತಿರುವನು.ಮತ್ತು ಅದನ್ನೂ ಕೆಲವು ಕಾಲದಮೇಲೆ ಬಿಟ್ಟುಬಿಡುವನು. ಆ ಶರೀರಸಂಬಂಧದಿಂದಲೇ, ಸುಖ, ದುಃಖ, ಭಯ, ಹರ್ಷ, ಮೊದಲಾದು ವುಗಳೆಲ್ಲವನ್ನೂ ಹೊಂದುತ್ತಿರುವನು. ಜೀವನು ಒಂದುಶರೀರವನ್ನು ಬಿಟ್ಟು ಮತ್ತೊಂದು ಶರೀರಕ್ಕೆ ಹೋಗುವ ಕ್ರಮವನ್ನು ತಿಳಿಸುವೆನು ಕೇಳು. ಹುಲ್ಲಟ್ಟೆಯೆಂಬ ಹಸುರುಹುಳುವು ತಾನು ಮೊದಲುಹಿಡಿದ ಸ್ಥಳವನ್ನು ಬಿ ಟ್ಟು ಮತ್ತೊಂದು ಸ್ಥಳಕ್ಕೆ ಹೋಗಬೇಕಾದಾಗ,ಮುಂದೆ ತನಗೆ ಸ್ಥಲ ಸಿ ಕ್ಕುವವರೆಗೆ ಹಿಂದಿನ ಸ್ಥಲವನ್ನು ಬಿಡಲಾರದೆ,ಮುಂದೆಯೂ ಹೋಗಲಾರ ದೆ ಅದನ್ನೇ ಬಲವಾಗಿ ಹಿಡಿದು ತತ್ತಳಿಸುವಂತೆ,ಮನುಷ್ಯನು ಮರಣಕಾಲ

ದಲ್ಲಿ ದೇಹಾಂತರವು ಸಿಕ್ಕುವವರೆಗೆ ಶರೀರವನ್ನು ಬಿಡಲಾರದೆ ಸಂಕಟಪಡು ತ್ತಿರುವನು. ಕಾಲನಿರ್ಬಂಧಕ್ಕಾಗಿ ತಾನು ಹಿಂದಿನ ಶರೀರವನ್ನು ಬಿಟ್ಟು ಹೋದರೂ, ಅವನ ಮನಸ್ಸು ಅದನ್ನು ಬಿಡಲಾರದೆ ತತ್ತಳಿಸುವುದು.ಬೇರೆ ಶರೀರವು ಬಂದಮೇಲೆ ಪೂರ್ವಶರೀರದ ಸ್ಮರಣವು ಕರ್ಮವಶದಿಂದ ತಪ್ಪಿ ಹೋಗುವುದು. ಆಜೀವನಿಗೆ ಕರ್ಮಗಳೆಲ್ಲವೂ ತೀರಿ,ದೇಹಕ್ಕೂ ತನಗೂಸಂ ಬಂಧವಿಲ್ಲವೆಂಬ ಜ್ಞಾನವು ಹುಟ್ಟುವವರೆಗೆ, ಅವನು ದೇಹಾಭಿಮಾನವನ್ನು ಬಿಡಲಾರನು. ಓ ರಾಜಾ! ಇಂದ್ರಿಯಗಳಿಂದ ಪೂರ್ವಜನ್ಮದಲ್ಲಿ ಅನುಭ ವಿಸಿದ ವಸ್ತುಗಳನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ, ಅದನ್ನು ಸಾಧಿಸುವು ದಕ್ಕಾಗಿ ಆಗಾಗ ಕರ್ಮಗಳನ್ನಾಚರಿಸುವನು. ಆ ಕರ್ಮಬಂಧದಿಂದ ತಿರುತಿರುಗಿ ಹುಟ್ಟುತ್ತಿರುವನು. ಆದುದರಿಂದ ಮನುಷ್ಯನು ಜನ್ಮಗಳನ್ನು ಹೊಂದುವುದಕ್ಕೆ ಮನಸ್ಸೇ ಕಾರಣವು. ಕರ್ಮದಿಂದುಂಟಾದ ದೇಹವನ್ನು ಪಡೆದೊಡನೆ ಮನುಷ್ಯನಿಗೆ "ನಾನು,ನನ್ನದು"ಎಂಬ ಅಹಂಕಾರಮಮಕಾರ ರೂಪವಾದ ಅವಿದ್ಯೆಯು ಹುಟ್ಟುವುದು.ಈ ಅವಿದ್ಯೆಯಿಂದ ತಿರುಗಿಕರ್ಮಗ ಳಲ್ಲಿ ಬೀಳುವನು.ಹೀಗೆ ಕರ್ಮಸಂಬಂಧದಿಂದ ಅವಿದ್ಯೆಯೂ, ಆ ಅವಿದ್ಯೆಯಿಂ ದ ತಿರುಗಿ ಕರ್ಮಸಂಬಂಧವೂ ಮೇಲೆಮೇಲೆ ಅಂಟುತ್ತಲೇಬರುವುದು.ಆತ್ಮ ನಿಗೆ ಸ್ವಸ್ವರೂಪಜ್ಞಾನವುಂಟಾದಹೊರತು, ಈ ವಿಧವಾದ ಸಿಕ್ಕು ತಪ್ಪಿ ದುದಲ್ಲ. ಆದುದರಿಂದ ಎಲೈ ರಾಜೇಂದ್ರನೇ! ನೀನು ದೇಹವಿಲಕ್ಷಣವಾದ ಆ ಆತ್ಮಜ್ಞಾನವನ್ನು ಪಡೆಯಬೇಕಾದರೆ,ತ್ರಿಕರಣಗಳಿಂದಲೂ ಪರಮಪುರು ಷನಾದ ಆ ಹರಿಯನ್ನೇ ಭಜಿಸಬೇಕು ಈ ಜಗತ್ತಿಗೆ ಯಾವನಿಂದ ಸೃಷ್ಟಿ ಸ್ಥಿತಿಲಯಗಳುಂಟಾಗುವುವೋ,ಆ ಶ್ರೀಹರಿಗೇ ಈಜಗತ್ತೆಲ್ಲವೂ ಶರೀರವೆಂಬ ಭಾವದಿಂದ ಅವನನ್ನು ಭಜಿಸು" ಎಂದನು. ವಿದುರಾ! ಹೀಗೆ ನಾರದನು ಪ್ರಾಚೀನಬರ್ಹಿಗೆ ಜೀವಾತ್ಮಪರಮಾತ್ಮಸ್ವರೂಪವನ್ನು ವಿವರಿಸಿ, ಅವನ ಅನುಮತಿಯನ್ನು ಪಡೆದು, ಬ್ರಹ್ಮಲೋಕಕ್ಕೆ ಹಿಂತಿರುಗಿದನು. ಆಮೇಲೆ ಇತ್ತಲಾಗಿ ಪ್ರಾಚೀನಬರ್ಹಿಯು,ತನ್ನ ಮಕ್ಕಳಿಗೆ ರಾಜ್ಯವನ್ನೊಪ್ಪಿಸಿ, ತಪ ಸ್ಸಿಗಾಗಿ ಕಪಿಲಾಶ್ರಮಕ್ಕೆ ಹೋದನು.ಅಲ್ಲಿ ಜಿತೇಂದ್ರಿಯನಾಗಿ ಬೇರೆ ಚಿಂ ತೆಯನ್ನು ಬಿಟ್ಟು,ಭಗವಂತನ ಪಾದಾರವಿಂದವನ್ನೇ ಧ್ಯಾನಿಸುತ್ತ,ಭಕ್ತಿಪರಿ

ಪಾಕದಿಂದ ಆ ಪರಮಪುರುಷ ಸಾರೂಪ್ಯವನ್ನೂ ಹೊಂದಿದನು. ವಿದುರಾ! ನಾರದೋಕ್ತವಾದ ಈ ಆಧ್ಯಾತ್ಮತತ್ವವನ್ನು ಯಾರು ಪಠಿಸುವರೋ,ಅಥವಾ ಯಾರು ಕಿವಿಯಿಂದ ಕೇಳುವರೋ,ಅವರು ಸಂಸಾರಕಾರಣವಾದ ಶರೀರದಿಂದ ಮುಕ್ತರಾಗುವರು. ಭಗವತ್ಕಥಾಮಿಶ್ರವಾದುದರಿಂದ ಲೋಕಪಾವನವಾಗಿಯೂ, ಮನಸ್ಸನ್ನು ಶುದ್ಧಿಗೊಳಿಸತಕ್ಕುದಾಗಿಯೂ, ಉತ್ತಮಫಲವನ್ನು ಕೊಡತಕ್ಕುದಾಗಿಯೂ ಇರುವ ನಾರದೋಕ್ತವಾದ ಈ ಆತ್ಮತತ್ವವನ್ನು ಕೀರ್ತಿಸಿದವರು,ತಿರುಗಿ ಸಂಸಾರಬಂಧಕ್ಕೆ ಸಿಕ್ಕಲಾರರು.ವಿದುರಾ! ಅನ್ಯಾಪದೇಶದಿಂದ ನಾರದನು ಕಥಾರೂಪವಾಗಿ ವಿವರಿಸಿದ ಈ ಅಧ್ಯಾತ್ಮತತ್ವವು ಬಹಳ ಅದ್ಭುತವಾದುದು. ಜೀವನಿಗೆ ಗೃಹಸ್ಥಧರ್ಮದಿಂದುಂಟಾಗುವ ಸಂಸಾರಬಂಧವನ್ನೂ ಇದರಿಂದ ನಿನಗೆ ವಿವರಿಸಿದಂತಾಯಿತು. ಇದಲ್ಲದೆ ಪ್ರಾರಬ್ಧಕರ್ಮವೂ ಪರಲೋಕವೂ ಉಂಟೇ,ಇಲ್ಲವೇ,ಎಂಬ ವಿಚಾರವಾಗಿ ನಿನಗಿದ್ದ ಸಂದೇಹವೂ ಇದರಿಂದ ನಿವೃತ್ತವಾಯಿತಷ್ಟೆ?"ಎಂದನು ಇಲ್ಲಿಗೆ ಇಪ್ಪತ್ತೊಂಬತ್ತನೆಯ ಅಧ್ಯಾಯವು.

---

## ಪ್ರಾಚೀನಬರ್ಹಿಕುಮಾರರಾದ ಪ್ರಚೇತಸರ ವೃತ್ತಾಂತವು.

ಆಮೇಲೆ ವಿದುರನು ಮೈತ್ರೇಯನನ್ನು ಕುರಿತು. "ಓಮಹಾತ್ಮಾ! ಪ್ರಾಚೇತಸರು ರುದ್ರನಿಂದ ಉಪದೇಶವನ್ನು ಹೊಂದಿ ಭಗವಂತನನ್ನು ಸಂತೋಷಪಡಿಸಿದರೆಂದು ಹೇಳಿದೆಯಲ್ಲವೆ? ಅವರು ಅದರಿಂದ ಯಾವ ಸಿದ್ಧಿಯನ್ನು ಪಡೆದರು! ರುದ್ರನು ತಾನಾಗಿಯೇ ಅವರಿಗೆ ದರ್ಶನವನ್ನು ಕೊಟ್ಟು, ಅವರಲ್ಲಿ ಅನುಗ್ರಹವನ್ನು ತೋರಿಸಿದುದರಿಂದ, ಅವರಿಗೆ ಮೋಕ್ಷವು ಲಭಿಸಿರುವುದರಲ್ಲಿ ಏನೇನೂ ಸಂದೇಹವಿಲ್ಲ! ಮುಕ್ತಿಪ್ರದನಾದ ಶ್ರೀಹರಿಗೆ ಬಹಳ ಪ್ರಿಯತಮನಾದ ರುದ್ರನ ಅನುಗ್ರಹವನ್ನು ಪಡೆದವರಿಗೆ ಮುಕ್ತಿಯುಂಟಾಗುವುದರಲ್ಲಿ ಸಂದೇಹವೇನಿದೆ? ಆದರೆ ಆ ರಾಜಕುಮಾರರು ಮುಕ್ತಿಯನ್ನು ಹೊಂದುವುದಕ್ಕೆ ಮೊದಲು, ಈ ಲೋಕದಲ್ಲಿಯಾಗಲಿ, ಪರಲೋಕದಲ್ಲಿಯಾಗಲಿ, ಯಾವಯಾವ ಫಲವನ್ನು ಹೊಂದಿದರು?"ಎಂದನು. ಅದಕ್ಕಾ ಮೈತ್ರೇಯನು 'ವಿದುರಾ ಕೇಳು! ಆ ರಾಜಕುಮಾ

ರರು. ತಂದೆಯಾಜ್ಞೆಯಿಂದ ಪ್ರಜಾಸೃಷ್ಟಿಕಾರ್ಯದಲ್ಲಿ ಸಾಮರ್ಥ್ಯವನ್ನು ಪಡೆಯುವುದಕ್ಕಾಗಿ,ತಪೋವನಕ್ಕೆ ಹೊರಟು, ದಾರಿಯಲ್ಲಿ ರುದ್ರನಿಂದ ಗೀತೆಯನ್ನು ಪದೇಶಹೊಂದಿದರಷ್ಟೆ? ಅಲ್ಲಿಂದಹೊರಟು ಮಹಾಸಮುದ್ರಮಧ್ಯದಲ್ಲಿ ಹತ್ತು ಸಾವಿರವರುಷಗಳವರೆಗೆ ಆ ಸ್ತೋತ್ರವನ್ನೇ ಜಪಿಸುತ್ತ, ದೃಢವಾದ ತಪಸ್ಸನ್ನು ಮಾಡಿ, ನಿರಂಜನನಾದ ಆಪರಮಪುರುಷನನ್ನು ಸಂತೋಷಪಡಿಸಿದರು. ಕೊನೆಗೆ ಭಗವಂತನು ಅವರ ತಪಸ್ಸಿಗೆ ಮೆಚ್ಚಿ, ತನ್ನ ದೇಹಕಾಂತಿಯಿಂದಲೇ ಅವರ ತಪಃಕ್ಲೇಶವೆಲ್ಲವನ್ನೂ ನೀಗಿಸುತ್ತ ಶುದ್ಧಸತ್ವಮಯವಾದ ಶರೀರದಿಂದ, ಮೇರುಪರ್ವತವನ್ನೇರಿದ ಕಾಲಮೇಘದಂತೆ ಗರುಡನಮೇಲೆ ಕುಳಿತು ಬಂದು ಅವರಿಗೆ ಪ್ರತ್ಯಕ್ಷನಾದನು.ಆ ಭಗವಂತನ ದಿವ್ಯಸೌಂದರ್ಯವನ್ನು ಕೇಳಬೇಕೆ? ನಡುವಿನಲ್ಲಿ ಪೀತಾಂಬರವೆಂಬ ಪಟ್ಟೆಮಡಿ! ದಿಕ್ಕುಗಳೆಲ್ಲವನ್ನೂ ಬೆಳಗುವಂತೆ ಕಂಠದಲ್ಲಿ ಹೊಳೆಯುತ್ತಿರುವ ಕೌಸ್ತುಭಮಣಿ! ಮುಖಮಂಡಲವನ್ನೂ, ಕಪೋಲವನ್ನೂ ಮತ್ತಷ್ಟು ಕಾಂತಿವಿಶಿಷ್ಟವಾಗಿ ಮಾಡುತ್ತಿರುವ ಕಿರೀಟಕುಂಡಲಾದ್ಯಾಭರಣಗಳು! ಹಸ್ತಾಗ್ರದಲ್ಲಿ ಶಂಖಚಕ್ರಗಳೇ ಮೊದಲಾದ ಎಂಟು ದಿವ್ಯಾಯುಧಗಳು,ಸುತ್ತಲೂಸೇವಾನಿರತರಾದ ಮಹರ್ಷಿಗಳು!ಅನೇಕದೇವಕಿಂಕರರು! ನಾನಾಕಡೆಯಲ್ಲಿಯೂ ತನ್ನ ಕೀರ್ತಿಯನ್ನು ಕೊಂಡಾಡುತ್ತಿರುವ ಗರುಡಕಿನ್ನರಗಂಧರ್ವರೇ ಮೊದಲಾದ ಸ್ತುತಿಪಾಠಕರು! ದುಂಡಗೆ ನೀಡಿದ ಎಂಟು ಭುಜಗಳನಡುವೆ ವಕ್ಷಸ್ಥಲದಲ್ಲಿ ಶೋಭಿಸುತ್ತಿರುವ ಲಕ್ಷ್ಮೀದೇವಿಯ ದೇಹಕಾಂತಿ! ಆ ಲಕ್ಷ್ಮೀದೇವಿಯ ದೇಹಕಾಂತಿಯೊಡನೆ ಹೋರಾಡುವಂತೆ, ಕಾಂತಿಯಿಂದ ಝುಗಝುಗಿಸುತ್ತಿರುವ ವನಮಾಲಿಕೆ! ಇಂತಹ ದಿವ್ಯಸೌಂದರ್ಯದೊಡನೆ ಪ್ರತ್ಯಕ್ಷನಾದ ಭಗವಂತನು, ದಯಾದೃಷ್ಟಿಯಿಂದ ಆ ರಾಜಕುಮಾರರನ್ನು ನೋಡುತ್ತ, ಮೇಘಧ್ವನಿಯಂತೆ ಗಂಭೀರಸ್ವರದಿಂದ ಹೀಗೆಂದು ಹೇಳುವನು".

"ಎಲೈರಾಜಕುಮಾರರೇ! ನಿಮಗೆ ಕ್ಷೇಮವಾಗಲಿ! ಬೇಕಾದ್ದ ವರವನ್ನು ಕೇಳಿರಿ!ನೀವು ನನ್ನಲ್ಲಿ ತೋರಿಸಿದಭಕ್ತಿಗೂ,ನಿಮ್ಮ ಸಹೋದರರಲ್ಲಿರುವಸ್ನೇಹಕ್ಕೂ ನಾನು ಬಹಳ ಸಂತೋಷಪಟ್ಟೆನು. ನಿಮಗೆ ವರವನ್ನು ಕೊಡುವುದಕ್ಕೆ ಸಿದ್ಧನಾಗಿರುವೆನು. ನಿಮ್ಮ ವಿಷಯವು ಹಾಗಿರಲಿ!ಯಾರು ಪ್ರತಿದಿನ ಪ್ರಾತಃ

ಕಾಲದಲ್ಲಿಯೂ,ರಾತ್ರಿಕಾಲದಲ್ಲಿಯೂ,ಹಾಸಿಗೆಯಲ್ಲಿ ನಿಮ್ಮನ್ನು ಸ್ಮರಿಸುವರೋ, ಅವರೂ ನಿಮ್ಮಂತೆಯೇ ಸಹೋದರವಾತ್ಸಲ್ಯವುಳ್ಳವರಾಗಿ, ಇತರ ಭೂತಗಳನ್ನೂ ತಮಗೆ ಸಮಾನವಾಗಿ ಪ್ರೀತಿಯಿಂದ ನೋಡುವರು. ಮತ್ತು ನೀವು ಉಪದೇಶಹೊಂದಿದ ಈ ರುದ್ರಗೀತೆಯಿಂದ,ಪ್ರಾತಸ್ಸಾಯಂಕಾಲಗಳಲ್ಲಿ ನನ್ನನ್ನು ಸ್ತುತಿಸುವವರೆಲ್ಲರಿಗೂ ನಾನು ಇಷ್ಟವರಗಳನ್ನು ಕೊಟ್ಟು,ಉತ್ತಮಜ್ಞಾನವನ್ನೂ ಅನುಗ್ರಹಿಸುವುದಕ್ಕೆ ಸಿದ್ಧನಾಗಿರುವೆನು. ಇನ್ನು ನಿಮ್ಮ ವಿಷಯದಲ್ಲಿ ಕೇಳಬೇಕಾದುದೇನು ? ಇದಲ್ಲದೆ ನೀವೆಲ್ಲರೂ ಸಂತೋಷಪೂರ್ವಕವಾಗಿ ನಿಮ್ಮ ತಂದೆಯ ಆಜ್ಞೆಯನ್ನು ಶಿರಸಾವಹಿಸಿ ಬಂದವರು. ಇದರಿಂದ ನಿಮ್ಮಕೀರ್ತಿಯು ಲೋಕವಿಖ್ಯಾತವಾಗುವುದು. ನೀವು ಪುತ್ರಾರ್ಥಿಗಳಾಗಿ ಬಂದವರಲ್ಲವೆ? ಪ್ರಸಿದ್ಧಗುಣವುಳ್ಳ ವಿಶ್ರುತನೆಂಬ ಮಹರ್ಷಿಗೆ ಕಂಡುವೆಂಬ ಪುತ್ರನಿರುವನು. ಅವನು ಗುಣದಲ್ಲಿ ತಂದೆಗೆ ಸಮಾನನು. ಪ್ರಮ್ಲೋಚೆಯೆಂಬ ಅಪ್ಸರಸಿಯು, ಆತನ ಸಂಗಮದಿಂದ ಒಂದು ಹೆಣ್ಣುಕೂಸನ್ನು ಪಡೆದು, ಆಶಿಶುವನ್ನು ಒಂದಾನೊಂದು ತೋಪಿನಲ್ಲಿರಿಸಿ ತಾನು ಸ್ವರ್ಗಕ್ಕೆ ಹೊರಟುಹೋದಳು.ಆ ಅಡವಿಯವೃಕ್ಷಗಳೇ ಆ ಶಿಶುವನ್ನು ತಮ್ಮ ಮಗಳನ್ನಾಗಿ ಭಾವಿಸಿ ಪೋಷಿಸುತ್ತಿದ್ದುವು.ಆಶಿಶುವು ಹಸಿವಿನಿಂದ ರೋದಿಸುತ್ತಿರುವಾಗ,ಓಷಧಿಗಳೆಲ್ಲಕ್ಕೂ ಅಧಿಪತಿಯಾದ ಸೋಮನು ಬಂದು ಅಮೃತವನ್ನು ತೊಟ್ಟಿಕ್ಕುತ್ತಿರುವ ತನ್ನ ತೋರುಬೆರಳನ್ನು ಆ ಶಿಶುವಿನ ಬಾಯಲ್ಲಿಟ್ಟನು. ಆಗ ಆ ಶಿಶುವು ಅಮೃತಪಾನವನ್ನು ಮಾಡಿರುವುದರಿಂದಲೂ, ಅಪ್ಸರಸ್ತ್ರೀಯ ಗರ್ಭದಲ್ಲಿ ಹುಟ್ಟಿದುದರಿಂದಲೂ ಎಣೆಯಿಲ್ಲದ ಸೌಂದರ್ಯದಿಂದ ಶೋಭಿಸುತ್ತಿರುವುದು. ಈಗ ಆ ಕನ್ನಿಕೆಯು ಯೌವನವತಿಯಾಗಿ, ತಕ್ಕ ಪತಿಯನ್ನು ಹುಡುಕುತ್ತಿರುವಳು. ನೀವು ಈಗಲೇ ಅವಳಲ್ಲಿಗೆ ಹೋಗಿ, ಅವಳನ್ನು ನಿಮಗೆ ಪತ್ನಿಯನ್ನಾಗಿ ಸ್ವೀಕರಿಸಬೇಕು. ಈ ವಿಷಯದಲ್ಲಿ ನೀವು ಕಾಲವಿಳಂಬವನ್ನು ಮಾಡಕೂಡದು. ನೀವು ಹತ್ತುಮಂದಿಯೂ ಆಕೆಯೊಬ್ಬಳನ್ನೇ ವರಿಸುವುದು ಧರ್ಮವಿರುದ್ಧವೆಂದೂ ಯೋಚಿಸಬೇಡಿರಿ! ನೀವೆಲ್ಲರೂ ಶೀಲಸ್ವಭಾವಗಳಲ್ಲಿಯೂ, ಪರಸ್ಪರಪ್ರೀತಿಯಲ್ಲಿಯೂ, ಸ್ವಲ್ಪಮಾತ್ರವೂ ಭೇದವಿಲ್ಲದೆ,ಒಂದೇ ಶರೀರದಂತಿರುವುದರಿಂದ, ಆ

ಕೆಯೂ ನಿಮ್ಮಲ್ಲಿ ಭೇದಬುದ್ಧಿಯಿಲ್ಲದೆ ವರ್ತಿಸುವಳು ಪತಿಪರಾಯಣೆಯಾಪ ಆಕೆಯು ನಿಮ್ಮೆಲ್ಲರನ್ನೂ ಒಂದೇವಿಧವಾಗಿ ಉಪಚರಿಸುತ್ತ,ಸಮಾನಪ್ರೀತಿ ಯಿಂದಿರುವಳು. ನಿಮ್ಮ ಸುಸ್ವಭಾವದಿಂದಲೂ, ನನ್ನ ಆಜ್ಞೆಯಿಂದಲೂ ಈ ವಿಷಯದಲ್ಲಿ ಧರ್ಮವಿರೋಧವೇನೂ ಉಂಟಾಗದು.ನೀವೆಲ್ಲರೂ ಆಕೆಯೊ ಡನೆ ಸಾವಿರಾರು ದೇವವರುಷಗಳವರೆಗೆ ದೃಢವಾದ ಇಂದ್ರಿಯಶಕ್ತಿಯುಳ್ಳ ವರಾಗಿ, ಈ ಭೂಲೋಕದ ಮತ್ತು ಸ್ವರ್ಗಲೋಕದ ಸುಖಗಳೆಲ್ಲವನ್ನೂ ಅ ನುಭವಿಸುತ್ತಿರಬೇಕು. ಆಮೇಲೆ ನಿಮಗೆ ನನ್ನಲ್ಲಿ ದೃಢವಾದ ಭಕ್ತಿಯು ಹು ಟ್ಟಿ, ಅದರಿಂದ ನಿಮ್ಮ ಮನಸ್ಸಿನ ರಾಗದ್ವೇಷಾದಿದೋಷಗಳೆಲ್ಲವೂ ನೀಗು ವುವು-ಆಮೇಲೆ ನೀವು ಈ ಸಂಸಾರಸಂಬಂಧವನ್ನು ಬಿಟ್ಟು ನನ್ನಸ್ಥಾನವನ್ನು ಸೇರಬಹುದು. ಆದರೆ ಭೋಗಾಸಕ್ತರಾದ ನಿಮಗೆ ನನ್ನಲ್ಲಿ ಭಕ್ತಿಯುಂಟಾ ಗುವುದು ಹೇಗೆಂದು ನೀವು ಸಂದೇಹಿಸಬೇಕಾದುದಿಲ್ಲ. ನನ್ನ ಭಕ್ತರು ಗೃಹ ಸ್ಥಾಶ್ರಮದಲ್ಲಿದ್ದರೂ,ಫಲಾಪೇಕ್ಷೆಯಿಲ್ಲದೆ ಕರ್ಮಗಳನ್ನು ನಡೆಸುತಿದ್ದರೆ, ಆಗಾಗ ನನ್ನ ಕಥಾಶ್ರವಣದಿಂದ ಕಾಲವನ್ನು ಕಳೆಯುತ್ತಬಂದರೆ,ಆ ಗೃಹ ಸ್ಥಾಪ್ರಮವು ಅವರ ಭಕ್ತಿಗೆ ಪ್ರತಿಬಂಧಕವಾಗಲಾರದು ನಾನು ಎಲ್ಲರ ಹೃ ದಯವನ್ನೂ ತಿಳಿಯಬಲ್ಲವನು ನನ್ನ ಕಥಾಶ್ರವಣದಲ್ಲಿ ಶ್ರದ್ಧೆಯುಳ್ಳವರ ಮನಸ್ಸಿನಲ್ಲಿ ನಾನು ಕ್ಷಣಕ್ಷಣಕ್ಕೂ ಹೊಸಹೊಸದಾಗಿತೋರುತ್ತಿರುವೆನು. ಅವರಿಗೆ ಯಾವಾಗಲೂ ನಾನು ಪ್ರತ್ಯಕ್ಷನಾಗಿರುವೆನು. ನನ್ನನ್ನು ಭಜಿಸು ತಿದ್ದರೆ ಶೋಕಮೋಹಾದಿಗಳೊಂದೂ ಬಾಧಿಸಲಾರವು" ಎಂದನು.

ಸಕಲಪುರುಷಾರ್ಥಗಳನ್ನೂ ಕೊಡತಕ್ಕ ಶ್ರೀಹರಿಯು ಹೇಳಿದ ಈ ಮಾತನ್ನು ಕೇಳಿ, ಆ ರಾಜಕುಮಾರರೆಲ್ಲರೂ ಪರಮಾನಂದಭರಿತರಾದ ರು. ಆತನ ದರ್ಶನಮಾತ್ರದಿಂದಲೇ ಶುದ್ಧಮನಸ್ಕರಾದ ಆ ಪ್ರಚೇತಸರು, ಆತನ ಮುಂದೆ ಬದ್ಧಾಂಜಲಿಗಳಾಗಿ ನಿಂತು, ಸಂತೋಷದಿಂದ ಕುಗ್ಗಿದ ಧ್ವನಿಯುಳ್ಳವರಾಗಿ ಆ ಭಗವಂತನನ್ನು ಹೀಗೆಂದು ಸ್ತೋತ್ರಮಾ ಡುವರು. ‹‹ ಓ ದೇವಾ ! ಆಧ್ಯಾತ್ಮಿಕಾದಿತಾಪಗಳೆಲ್ಲವನ್ನೂ ನಿವಾರಿ ಸತಕ್ಕ ನಿನಗೆ ನಮಸ್ಕಾರವು! ಉದಾರಚರಿತ್ರಗಳನ್ನು ಪ್ರಕಟಿಸತಕ್ಕ ಪವಿತ್ರ ನಾಮಗಳುಳ್ಳ ನಿನಗೆ ನಮಸ್ಕಾರವು! ಮನಸ್ಸಿಗೂ, ಮಾತಿಗೂ ಗೋಚರಿ

ಸದ ಮಹಾಮಹಿಮೆಯುಳ್ಳ ನಿನಗೆ ನಮಸ್ಕಾರವು! ಸರ್ವೇಂದ್ರಿಯಗಳಿಗೂ ಅಗೋಚರವಾದ ಸ್ವರೂಪಸ್ವಭಾವವುಳ್ಳ ನಿನಗೆ ನಮಸ್ಕಾರವು! ಓದೇವಾ! ನೀನು ಕರ್ಮಸಂಬಂಧವಿಲ್ಲದವನು! ಹಸಿವು, ಬಾಯಾರಿಕೆ, ಮುಂತಾದ ಷಡೂರ್ಮಿಗಳಿಲ್ಲದವನು! ನಿನ್ನ ಸ್ವರೂಪವನ್ನು ತಿಳಿಯಲಾರದೆ ಹೋದರೂ ನಿನ್ನ ಅನುಗ್ರಹದಿಂದ ದೇಹಾತ್ಮಜ್ಞಾನವನ್ನು ಹೊಂದಿದ ಜೀವಾತ್ಮರಿಗೆನೀನು ಬಹಳ ಪ್ರಿಯನೆನಿಸುವೆ! ಮತ್ತು ನೀನು ಲೋಕದ ಸೃಷ್ಟಿಸ್ಥಿತಿಸಂಹಾರಗಳನ್ನು ಮಾಡುವುದಕ್ಕಾಗಿ ಬ್ರಹ್ಮರುದ್ರಸ್ವರೂಪದಿಂದಲೂ, ಬೇರೆಬೇರೆ ಅವತಾರದಿಂದಲೂ ತೋರತಕ್ಕವನು. ಮತ್ತು, ಓ ಮಹಾತ್ಮಾ! ನೀನು ಆಶ್ರಿತರ ಸಂಸಾರಬಂಧವನ್ನು ಬಿಡಿಸತಕ್ಕವನು. ಶುದ್ಧಮನಸ್ಸಿಗೆಮಾತ್ರ ಗೋಚರಿಸತಕ್ಕವನು. ಸಮಸ್ತ ಭೂತಗಳಲ್ಲಿಯೂ ವಾಸಮಾಡತಕ್ಕವನು. ಭಕ್ತರಿಗೆ ಆನಂದವನ್ನುಂಟುಮಾಡತಕ್ಕವನು. ಸಮಸ್ತಲೋಕಕ್ಕೂ ನಿಯಾಮಕನು. ಇಂತಹ ನಿನಗೆ ನಮಸ್ಕಾರವು! ಮತ್ತು ನೀನು ಈ ಪ್ರಪಂಚಕ್ಕೆ ಉತ್ಪತ್ತಿಸ್ಥಾನವಾದ ಕಮಲವನ್ನು ನಾಭಿಯಲ್ಲಿ ಧರಿಸಿದವನು. ಪದ್ಮಮಾಲಿಕೆಯಿಂದ ಶೋಭಿತವಾದ ಕಂಠವುಳ್ಳವನು. ಇಂತಹ ನಿನಗೆ ನಮಸ್ಕಾರವು ! ಕಮಲದಂತೆ ಪಾದವುಳ್ಳವನಾಗಿಯೂ, ಕಮಲನೇತ್ರನಾಗಿಯೂ, ಕಮಲಕೇಸರದಂತೆ ಹೊಂಬಣ್ಣವುಳ್ಳ ಪೀತಾಂಬರವನ್ನು ಧರಿಸಿದವನಾಗಿಯೂ, ಸರ್ವಾಂತರ್ಯಾಮಿಯಾಗಿಯೂ, ಸರ್ವಸಾಕ್ಷಿಯಾಗಿಯೂ, ಸರ್ವಶರೀರಿಯಾಗಿಯೂ ಇರುವ ನಿನಗೆ ನಮಸ್ಕಾರವು! ಓ ಜಗನ್ನಾಥಾ! ತಾಪತ್ರಯದಿಂದ ಪೀಡಿತರಾದ ನಮಗೆ ಸಮಸ್ತದುಃಖವನ್ನೂ ನೀಗಿಸತಕ್ಕ ನಿನ್ನ ಸ್ವರೂಪವನ್ನು ಈಗ ಪ್ರತ್ಯಕ್ಷವಾಗಿ ತೋರಿಸಿದೆಯಲ್ಲವೆ? ಇದಕ್ಕಿಂತಲೂ ಹೆಚ್ಚಾಗಿ ನಿನ್ನಿಂದ ನಾವು ಪಡೆಯಬೇಕಾದ ಅನುಗ್ರಹವೇನಿರುವುದು? "ಇವರು ನನ್ನವರು"ಎಂಬ ಅನುಗ್ರಹಬುದ್ಧಿಯಿಂದ ತಕ್ಕ ಕಾಲದಲ್ಲಿ ತಮ್ಮ ಆಶ್ರಿತರನ್ನು ಸ್ಮರಿಸುವುದೊಂದೇ ದೀನವತ್ಸಲರಾದ ಮಹಾತ್ಮರು ಮಾಡತಕ್ಕ ಕಾರ್ಯವು. ನೀನು ನಮ್ಮನ್ನು ಮನಸ್ಸಿನಲ್ಲಿ ಸ್ಮರಿಸಿದಮಾತ್ರದಿಂದಲೇ ನಮ್ಮ ಪಾಪಗಳೆಲ್ಲವೂ ನೀಗಿದುವು ಓ ಮಹಾತ್ಮಾ! ನೀನು ಎಲ್ಲರ ಹೃದಯದಲ್ಲಿಯೂ ಅಂತರಾತ್ಮನಾಗಿರತಕ್ಕವನಲ್ಲವೆ ! ಹೀಗಿರುವಾಗ ನಮ್ಮ

ಉದ್ದೇಶವೇನೆಂಬುದನ್ನು ನೀನು ಕಾಣೆಯಾ ? ನೀನು ನಮಗೆ ಪ್ರತ್ಯಕ್ಷ ನಾದುದೇ ನಮಗೆ ಇಷ್ಟಾರ್ಥಸಿದ್ಧಿಯು ! ಹಾಗಿದ್ದರೂ ಈಗ ಪರಾತ್ಪರ ನಾದ ನಿನ್ನಿಂದ ಒಂದು ವರವನ್ನು ಪಡೆಯಬೇಕೆಂದಿರುವೆವು. ಓ ದೇವಾ ! ನಿನ್ನ ವಿಭೂತಿಗಳಿಗೆ ಎಲ್ಲೆಯಿಲ್ಲದುದರಿಂದ ನೀನು ಅನಂತನೆಂಬ ಹೆಸರಿ ನಿಂದ ಕರೆಯಲ್ಪಡುವೆ ? ಮಂದಾರಪುಷ್ಪದ ಮಕರಂದರಸವು ಸಿಕ್ಕಿದಾಗ ಭ್ರಮರವು ಬೇರೆ ಪುಷ್ಪರಸವನ್ನು ಒಯಸುವುದೆ ? ಅದರಂತೆಯೇ ಈಗ ನಾವು ನಿನ್ನ ಪಾದಮೂಲವನ್ನೇ ಹೊಂದಿರುವಾಗ, ಬೇರೆ ಯಾವ ವರ ವನ್ನು ತಾನೇ ಬಯಸುವೆವು. ಇದಕ್ಕಿಂತಲೂ ನಮಗೆ ಮೇಲಾದ ಕೋ ರಿಕೆಯೊಂದೂ ಇರುವುದಿಲ್ಲ.ಹಾಗಿದ್ದರೂ ಇದೊಂದನ್ನುಮಾತ್ರ ನೀನು ಕರುಣಿಸಬೇಕು. ಇನ್ನೂ ಸಾವಿರಾರುವರುಷಗಳವರೆಗೆ ನಾವು ಈ ಲೋಕ ದ ಸಂಸಾರಸುಖವನ್ನನುಭವಿಸಬೇಕೆಂದು ಹೇಳಿದೆಯಲ್ಲವೆ ? ನಿನ್ನ ಮಾಯೆ ಯಿಂದ ಮೋಹಿತರಾದ ನಾವು ಆ ಸಂಸಾರದಲ್ಲಿ ತೊಳಲುತ್ತಿರುವಷ್ಟು ಕಾಲವೂ, ನಮಗೆ ನಿನ್ನ ಭಕ್ತರೊಡನೆ ಸಹವಾಸವಾದರೂ ಲಭಿಸುವಂತೆ ಮಾಡಬೇಕು. ಇದೇ ಈಗ ನಾವು ನಿನ್ನಲ್ಲಿ ಕೋರತಕ್ಕ ವರವು. ಸ್ವರ್ಗಾದಿ ಸುಖಗಳಾಗಲಿ, ಕೈವಲ್ಯವಾಗಲಿ ನಿನ್ನ ಭಕ್ತರೊಡನೆ ಸ್ವಲ್ಪಕಾಲಸಹವಾ ಸಕ್ಕೆ ಸಾಟಿಯಾಗಲಾರವು. ಹೀಗಿರುವಾಗ ಎಂದಿದ್ದರೂ ಮರಣವನ್ನೇ ಇದಿರುನೋಡುತ್ತಿರುವ ನಮ್ಮ ರಾಜ್ಯಸುಖವೂ ಒಂದು ಸುಖವೆ ? ಪಾಪ ನಿವಾರಕಗಳಾದ ನಿನ್ನ ಕಥೆಗಳನ್ನು ಕೇಳುತ್ತಿರುವವರಿಗೆ, ಅನ್ನಪಾನಗಳಲ್ಲಿ ಯೂ ಆಸೆ ಹುಟ್ಟದು! ಅಂತವರಿಗೆ ಇತರಭೂತಗಳಲ್ಲಿ ವೈರಬುದ್ಧಿಯೂ ಉಂಟಾಗದು. ಅವರಿಗೆ ಯಾವ ಭಯವೂ ಇರದು! ಬೇರೆ ದುಷ್ಕಥೆಗಳನ್ನು ಬಿಟ್ಟು, ನಿನ್ನ ಸತ್ಕಥೆಗಳನ್ನೇ ಅನುಸಂಧಾನಮಾಡುತ್ತಿರುವ ಸತ್ಪುರುಷರ ಬಾಯಿಂದ “ನಮಗೆ ಆ ಶ್ರೀಮನ್ನಾರಾಯಣನೇ ಸದ್ಗತಿ”ಯೆಂಬ ವಾಕ್ಯವು ಬಾರಿಬಾರಿಗೂ ಹೊರಡುತ್ತಿರುವುದರಿಂದ. ಆಗಾಗ ಕಿವಿಗೆ ಬೀಳುತ್ತಿರುವ ಆ ನಿನ್ನ ನಾಮವೇ ಪಾಪಿಗಳನ್ನೂ ಪಾವನಮಾಡುವುದು. ತಮ್ಮ ಪಾದ ಸಂಚಾರದಿಂದ ಗಂಗಾದಿ ಪುಣ್ಯತೀರ್ಥಗಳನ್ನೂ ಪಾವನಮಾಡತಕ್ಕ ಅಂತಹ ಮಹಾತ್ಮರ ಸಹವಾಸವು, ಸಂಸಾರಭಯದಲ್ಲಿ ಸಿಕ್ಕಿದ ಯಾವ ಪುರುಷನಿಗೆ

ತಾನೇ ರುಚಿಸದು ? ಭಗವದ್ಭಕ್ತರ ಸಹವಾಸಫಲವನ್ನು ಈಗಾಗಲೇ ನಾವೂ ಅನುಭವಿಸಿರುವೆವು.ಸಂಸಾರರೂಪವಾದ ಮೃತ್ಯುವನ್ನು ನಿಗ್ರಹಿಸಿ ದವನಾಗಿಯೂ, ನಿನಗೆ ಪ್ರಿಯತಮನಾಗಿಯೂ ಇರುವ ಆ ರುದ್ರನೊಡನೆ ಕ್ಷಣಮಾತ್ರಸಹವಾಸದಿಂದಲ್ಲವೇ, ನಮಗೂ ಸಾಕ್ಷಾತ್ತಾಗಿ ಮೋಕ್ಷಪ್ರದ ನಾದ ನಿನ್ನ ದರ್ಶನವು ಲಂಭಿಸುವಂತಾಯಿತು. ಆದುದರಿಂದ ನಮಗೆ ಜೀ ವಾವಧಿ ನಿನ್ನ ಭಕ್ತರ ಸಹವಾಸವು ಲಭಿಸುವಂತೆ ಅನುಗ್ರಹಿಸಬೇಕು. ಇದ ಲ್ಲದೆ ಇದುವರೆಗೆ ನಾವು ಕ್ರಮವಾಗಿ ಅಧ್ಯಯನಮಾಡಿದುದೂ, ಗುರು ಹಿರಿಯರನ್ನುಪಚರಿಸಿ ಅವರ ಅನುಗ್ರಹವನ್ನು ಪಡೆದುದೂ, ಪೂಜ್ಯರನ್ನು ನಮಸ್ಕರಿಸಿದುದೂ, ಮಿತ್ರರಲ್ಲಿಯೂ, ಒಡಹುಟ್ಟಿದವರಲ್ಲಿಯೂ ಇತರಭೂ ತಗಳಲ್ಲಿಯೂ, ಅಸೂಯೆಯಿಲ್ಲದೆ ಸ್ನೇಹಭಾವದಿಂದ ನಡೆಯುತಿದ್ದುದೂ, ಅನೇಕವರ್ಷಗಳವರೆಗೆ ಅನ್ನಾಹಾರವಿಲ್ಲದೆ ಜಲಮಧ್ಯದಲ್ಲಿ ನಿಂತು ತಪ ಸ್ಸನ್ನು ಮಾಡಿದುದೂ, ಇವೆಲ್ಲವೂ ಪರಮಪುರುಷನಾದ ನಿನ್ನ ಸಂತೋ ಷಾರ್ಥವಾಗಿ ನಿನ್ನಲ್ಲಿಯೇ ಅರ್ಪಿತವಾಗಲಿ ! ದೇವಾ ! ಕರ್ಮಯೋಗ ಜ್ಞಾನಯೋಗಗಳ ಬಲದಿಂದ ತಮ್ಮ ಮನಸ್ಸನ್ನು ಶುದ್ಧಮಾಡಿಕೊಂಡಿದ್ದ ಮಹಾತ್ಮನಾದ ವೈವಸ್ವತಮನುವೂ,ಬ್ರಹ್ಮರುದ್ರರೇ ಮೊದಲಾದ ಇನ್ನೂ ಅನೇಕಮಹಾತ್ಮರೂ, ನಿನ್ನ ಮಹಿಮೆಯನ್ನು ಪೂರ್ಣವಾಗಿ ತಿಳಿಯಲಾರ ದಿದ್ದರೂ, ತಮ್ಮ ತಮ್ಮ ಶಕ್ತ್ಯನುಸಾರವಾಗಿ ನಿನ್ನನ್ನು ಸ್ತುತಿಸುತಿದ್ದರ ಲ್ಲವೆ? ಅದರಂತೆಯೇ ನಾವೂ ನಮ್ಮ ಶಕ್ತ್ಯನುಸಾರವಾಗಿ ನಿನ್ನನ್ನು ಸ್ತು ತಿಸಿದೆವು. ಓ ವಾಸುದೇವಾ ! ಸರ್ವಸಮನಾಗಿಯೂ, ಶುದ್ಧನಾಗಿಯೂ, ಪರಮಪುರುಷನಾಗಿಯೂ ಇರುವ ಶುದ್ಧಸತ್ವಮೂರ್ತಿಯಾದ ನಿನಗೆ ನಮ ಸ್ಕಾರವು" ಎಂದರು. ವಿದುರಾ ! ಅವರ ಭಕ್ತಿಗೆ ಸಂತುಷ್ಟನಾದ ಭಗವಂ ತನು, ಅವರನ್ನು ಕುರಿತು, "ಎಲೈ ಕುಮಾರರೆ ! ನಿಮ್ಮ ಇಷ್ಟದಂತೆಯೇ ಆಗಲಿ" ಎಂದು ಅವರನ್ನನುಗ್ರಹಿಸಿ, ತನ್ನ ಸೌಂದರ್ಯವನ್ನು ಎಷ್ಟೆಷ್ಟು ನೋಡಿದರೂ ತೃಪ್ತಿಯಿಲ್ಲದೆ, ತನ್ನನ್ನು ಬಿಡಲಾರದೆ ಕೊರಗುತ್ತಿರುವ ಆ ರಾಜಕುಮಾರರು ನೋಡುತಿದ್ದಹಾಗೆಯೇ ಅಂತರ್ಧಾನವನ್ನು ಹೊಂದಿ, ನಿ ಜಲೋಕಕ್ಕೆ ಸೇರಿದನು. ಆಮೇಲೆ ಪ್ರಚೇತಸರು,ತಮ್ಮ ತಪಸ್ಸನ್ನು ನಿಲ್ಲಿಸಿ,

ಸಮುದ್ರಮಧ್ಯದಿಂದ ಮೇಲೆದ್ದು ಬಂದು ನೋಡುವಾಗ, ಆಕಾಶವನ್ನಾ ವರಿಸುವಂತೆ ಮಹೋನ್ನತಗಳಾದ ವೃಕ್ಷಗಳಿಂದ ಭೂಮಿಯೆಲ್ಲವೂ ದಟ್ಟವಾಗಿ ಮುಚ್ಚಿ ಹೋಗಿರುವುದನ್ನು ಕಂಡರು. ತಮ್ಮ ತಂದೆಯಾದ ಪ್ರಾಚೀನಬರ್ಹಿಯು ಮುಕ್ತಿಯನ್ನು ಹೊಂದಿದಮೇಲೆ, ಭೂಮಿಯಲ್ಲಿ ತಕ್ಕ ಕೃಷಿಯಿಲ್ಲದುದರಿಂದ,ಹೀಗೆ ಗಿಡಗಳು ಬೆಳೆದು ಹೋಗಿರುವುವೆಂದು ತಿಳಿದು, ಅವರಿಗೆ ತಡೆಯಲಾರದ ಕೋಪವುಂಟಾಯಿತು. ಆ ಕೋಪದಿಂದ ರಾಜಕುಮಾರರು, ಭೂಮಿಯಲ್ಲಿ ಸಸಿಯೇ ಇಲ್ಲದಂತೆ ಮಾಡಬೇಕೆಂದೆಣಿಸಿ, ಪ್ರಳಯಕಾಲದಲ್ಲಿಹೊರಡುವ ಅಗ್ನಿವಾಯುಗಳಂತೆ,ಲೋಕನಾಶಕಗಳಾದ ಅಗ್ನಿವಾಯುಗಳೆರಡನ್ನೂ ತಮ್ಮ ಮುಖದಿಂದ ಹೊರಡಿಸಿದರು. ಈ ಅಗ್ನಿವಾಯುಗಳ ವೇಗದಿಂದ ಭೂಮಿಯ ಮೇಲಿನ ಗಿಡಗಳೆಲ್ಲವೂ ಭಸ್ಮವಾಗುತ್ತಿರುವುದನ್ನು ನೋಡಿ ಚತುರ್ಮುಖಬ್ರಹ್ಮನು,ಅವರಬಳಿಗೆ ಬಂದು, ನಯವಾಕ್ಯಗಳಿಂದ ಅವರಿಗೆ ಕೋಪಸಮಾಧಾನವನ್ನು ಮಾಡಿದನು. ಇವರ ಕೋಪಾಗ್ನಿಗೆ ಸಿಕ್ಕದೆ ಅಲ್ಲಲ್ಲಿ ಉಳಿದಿದ್ದ ಯಾವ ವೃಕ್ಷಗಳುಂಟೋ, ಅವುಗಳ ಅಭಿಮಾನಿದೇವತೆಗಳೆಲ್ಲರೂ ಬಂದು ತಾವು ಅಭಿಮಾನಿಸಿ ಬೆಳೆಸುತಿದ್ದ ಮಾರಿಷೆಯೆಂಬ ಕನ್ಯೆಯನ್ನು ಆ ರಾಜಕುಮಾರರಿಗೆ ಕೊಟ್ಟು ವಿವಾಹಮಾಡಬೇಕೆಂದು ಯತ್ನಿಸಿದರು. ಈ ರಾಜಕುಮಾರರೂ ಬ್ರಹ್ಮಾಜ್ಞೆಯಿಂದ ಅವಳನ್ನು ಪರಿಗ್ರಹಿಸಿ, ಅವಳಲ್ಲಿ ಒಬ್ಬ ಪುತ್ರನನ್ನು ಪಡೆದರು- ವಿದುರಾ ! ಈ ಪುತ್ರನಾರೆಂಬುದನ್ನು ತಿಳಿಸುವೆನು ಕೇಳು! ಹಿಂದೆ ಚಾಕ್ಷುಷಮನ್ವಂತರವು ಆರಂಭಿಸಿದಾಗ, ಅದರ ಹಿಂದಿನ ಮನ್ವಂತರಕಾಲದ ಸೃಷ್ಟಿಯೆಲ್ಲವೂ ನಷ್ಟವಾಗಿದ್ದ ಸಂದರ್ಭದಲ್ಲಿ,ದೈವಪ್ರೇರಿತನಾಗಿ, ಪ್ರಜಾಸೃಷ್ಟಿಗೆ ಮೊದಲುಮಾಡಿದ ಆ ದಕ್ಷನೇ ಈಗ ಮಾರಿಷೆಯ ಗರ್ಭದಲ್ಲಿ ಜನಿಸಿದವನು. ಆತನು ಬ್ರಹ್ಮಪುತ್ರನಾಗಿದ್ದರೂ, ಹಿಂದೆ ಸತ್ರಯಾಗದಲ್ಲಿ, ರುದ್ರನನ್ನು ತಿರಸ್ಕರಿಸಿದ ದೋಷಕ್ಕಾಗಿ,ಅವನಿಗೆ ತಿರುಗಿ ಈ ಜನ್ಮವುಂಟಾಯಿತು. ಅವನು ಹುಟ್ಟುವಾಗಲೇ ತನ್ನ ಕಾಂತಿಯಿಂದ,ಇತರ ತೇಜಸ್ಸುಗಳೆಲ್ಲವನ್ನೂ ಅಡಗಿಸುವಂತಿದ್ದನು.ಅವನಲ್ಲಿ ಈ ವಿಧವಾದ ಅಸಾಧಾರಣ ಸಾಮರ್ಥ್ಯವಿದ್ದುದನ್ನು ನೋಡಿ, ಜನರೆಲ್ಲರೂ ಅವನನ್ನು ದಕ್ಷನೆಂದುಕರೆದರು.

ಮತ್ತು ಅವನು ಕರ್ಮಸಮರ್ಥನಾದುದರಿಂದಲೂ ಅವನಿಗೆ ದಕ್ಷನೆಂಬ ಪ್ರಸಿದ್ಧಿಯುಂಟಾಯಿತು. ಬ್ರಹ್ಮನು ,ಪ್ರಜೆಗಳನ್ನು ಸೃಷ್ಟಿಸುವುದಕ್ಕಾಗಿಯೂ, ಅವರನ್ನು ರಕ್ಷಿಸುವುದಕ್ಕಾಗಿಯೂ ಈತನನ್ನು ನಿಯಮಿಸಿದ್ದನು. ಅವರಂತೆಯೇ ದಕ್ಷನೂ, ಮರೀಚಿ ಮೊದಲಾದ ಪ್ರಜಾಧಿಪತಿಗಳನ್ನು ಅದೇ ವ್ಯಾಪಾರಕ್ಕಾಗಿ ನಿಯಮಿಸಿದ್ದನು!" ಇಲ್ಲಿಗೆ ಇಪ್ಪತ್ತೊಂಬತ್ತನೆಯ ಅಧ್ಯಾಯವು.

---

{ನಾರದನಿಂದ ಪ್ರಚೇತಸರು ಆತ್ಮತತ್ವವನ್ನುಪದೇಶ ಹೊಂದಿ,ತಪೋವನಕ್ಕೆ ಹೋದುದು.}

ವಿದುರಾ ? ಕೇಳು ! ಪ್ರಚೇತಸರು ಸಹಸ್ರದಿವ್ಯವರ್ಷಗಳವರೆಗೆ ರಾಜ್ಯದಲ್ಲಿದ್ದು, ಇಹಲೋಕದ ಭೋಗಗಳನ್ನನುಭವಿಸುತಿದ್ದರು ಕೊನೆಗೆ ಅವರಿಗೆ ವಿರಕ್ತಿಮಾರ್ಗವನ್ನು ಹಿಡಿಯಬೇಕೆಂಬ ವಿವೇಕಬುದ್ಧಿಯು ಹುಟ್ಟಿತು. ಹಿಂದೆ ಭಗವಂತನು ನಿಯಮಿಸಿದ್ದ ವಾಕ್ಯವೂ ಅವರ ನೆನಪಿಗೆ ಬಂದಿತು. ಒಡನೆಯೇ ಅವರು ತಮ್ಮ ಪತ್ನಿಯನ್ನು ಮಕ್ಕಳ ಪೋಷಣೆಯಲ್ಲಿಟ್ಟು, ಗೃಹಸ್ಥಾಶ್ರಮವನ್ನು ತ್ಯಜಿಸಿ ಅರಮನೆಯಿಂದ ಹೊರಟರು. ಸಮಸ್ತವೂ ಬ್ರಹ್ಮಾತ್ಮಕವೆಂದು ಉಪಾಸನೆಮಾಡತಕ್ಕ ಬ್ರಹ್ಮಸತ್ರವೆಂಬ ಜ್ಞಾನಯಜ್ಞದಲ್ಲಿ ದೀಕ್ಷೆಯನ್ನು ವಹಿಸಿ, ಮೊದಲು ಜಾಜಲಿಯೆಂಬ ಮಹರ್ಷಿಯು ಸಿದ್ಧಿಹೊಂದಿದ ಪಶ್ಚಿಮಸಮುದ್ರತೀರಕ್ಕೆ ಹೋಗಿ, ಅಲ್ಲಿ ಬ್ರಹ್ಮೋಪಾಸನವನ್ನು ಮಾಡತೊಡಗಿದರು. ಮೊದಲು ಕ್ರಮವಾಗಿ ಪ್ರಾಣಗಳನ್ನೂ, ಮನಸ್ಸನ್ನೂ,ಮಾತನ್ನೂ ತಡೆದು,ಬಹುಕಾಲದವರೆಗೆ ಕುಳ್ಳಿರತಕ್ಕ ಆಸನಶಕ್ತಿಯನ್ನು ಸಾಧಿಸಿದರು. ದೇಹವ್ಯಾಪಾರವೆಲ್ಲವನ್ನೂ ಅಡಗಿಸಿ,ಸ್ತಬ್ಧರಾಗಿ ಕುಳಿತರು. ಪರಬ್ರಹ್ಮದಲ್ಲಿ ಮನಸ್ಸನ್ನು ನೆಲೆಗೊಳಿಸಿ ತಪಸ್ಸನ್ನಾರಂಭಿಸುವಷ್ಟರಲ್ಲಿ, ಪೂಜ್ಯನಾದ ನಾರದನು ಆ ಸ್ಥಳಕ್ಕೆ ಬಂದನು. ಈ ಮಹರ್ಷಿಯನ್ನು ಕಂಡೊಡನೆ ಅವರೆಲ್ಲರೂ ಥಿಗ್ಗನೆ ಮೇಲೆದ್ದು ನಮಸ್ಕರಿಸಿ, ವಿಧ್ಯುಕ್ತವಾಗಿ ಅವನನ್ನು ಪೂಜಿಸಿ ಆಸನವನ್ನು ಕೊಟ್ಟು ಕುಳ್ಳಿರಿಸಿವಿಜ್ಞಾಪಿಸುವರು.' ಓ ನಾರದಾ! ನಿನಗೆ ಸುಖಾಗಮನವೆ ? ದೈವವಶದಿಂದ ನ

ಮಗೆ ನಿನ್ನ ದರ್ಶನವು ಲಭಿಸಿತು! ಲೋಕರಕ್ಷಣಾರ್ಥವಾಗಿ ಅನವರತವೂ ಸುತ್ತುತ್ತಿರುವ ಸೂರ್ಯನಂತೆ ನೀನೂ ಲೋಕರಕ್ಷಣಕ್ಕಾಗಿಯೇ ಅಲ್ಲಲ್ಲಿ ಸಂಚರಿಸುತ್ತಿರುವೆ! ಓ ಮಹಾತ್ಮಾ! ನಾವು ಇದುವರೆಗೂ, ಗೃಹಸ್ಥಧರ್ಮ ದಲ್ಲಿದ್ದುದರಿಂದ, ಪೂರ್ವದಲ್ಲಿ ರುದ್ರನೂ, ಶ್ರೀಮಹಾವಿಷ್ಣುವೂ ನಮಗೆ ಉಪದೇಶಿಸಿದ ತತ್ವವನ್ನು ಮರೆತೆವು. ಇಷ್ಟುಕಾಲವನ್ನೂ ವ್ಯರ್ಥವಾಗಿ ಕಳೆ ದುಬಿಟ್ಟೆವು.ಆದುದರಿಂದ ನಮ್ಮನ್ನು ಸಂಸಾರಸಮುದ್ರದಿಂದ ದಾಟಿಸತಕ್ಕ ಬ್ರಹ್ಮಜ್ಞಾನವನ್ನು ಈಗ ನೀನು ಮತ್ತೊಮ್ಮೆ ಉಪದೇಶಿಸಬೇಕು" ಎಂದ ರು. ಇದನ್ನು ಕೇಳಿ ಭಗವದ್ಭಕ್ತನಾದ ನಾರದನು ಅವರನ್ನು ಕುರಿತು "ಎಲೈ ರಾಜಕುಮಾರರೆ ! ಮನುಷ್ಯಜನ್ಮವೂ, ಆಯಾಜನ್ಮದಲ್ಲಿ ನಡೆಸತ ಕ್ಕ ಕರ್ಮಗಳೂ, ಆಗಿನ ಆಯುಃಪ್ರಮಾಣವೂ,ಮನಸ್ಸು, ವಾಕ್ಕು ಮುಂ ತಾದುವೂ ಈಶ್ವರಾರಾಧನಕ್ಕಾಗಿ ಉಪಯೋಗಿಸಲ್ಪಟ್ಟಾಗಲೇ ಸಾರ್ಥ ಕವೆನಿಸುವುವು. ಆ ಭಗವಂತನನ್ನು ಸಂತೋಷಗೊಳಿಸದಿದ್ದರೆ, ಯೋ ನಿಸಂಬಂಧವಾದ ಉತ್ಪತ್ತಿಯಾಗಲಿ, ಉಪನಯನದಿಂದ ಪಡೆದ ಜನ್ಮ ವಾಗಲಿ, ಯಜ್ಞದೀಕ್ಷೆಯಿಂದ ಪಡೆದ ಜನ್ಮವಾಗಲಿ, ಈ ಮೂರು ಬಗೆಯ ಜನ್ಮಗಳೂ ನಿರರ್ಥಕಗಳಾಗುವುವು. ಭಗವಂತನನ್ನು ಸಂತೋಷಪಡಿಸದೆ ಹೋದಮೇಲೆ,ಮನುಷ್ಯನಿಗೆ ಎಷ್ಟೇ ದೀರ್ಘಾಯುಸ್ಸಿದ್ದರೂ,ಅವನು ಎ ಷ್ಟೇಕರ್ಮಗಳನ್ನು ನಡೆಸಿದರೂ ಅವೊಂದೂ ಕೆಲಸಕ್ಕೆ ಬಾರವು.ಆಭಗವಂ ತನನ್ನು ಸಂತೋಷಪಡಿಸದಿದ್ದಮೇಲೆ,ಕುಲದಿಂದಾಗಲಿ,ತಪಸ್ಸಿನಿಂದಾಗಲಿ, ವಾಕ್ಚಾತುರ್ಯದಿಂದಾಗಲಿ, ಮನಶ್ಶಕ್ತಿಯಿಂದಾಗಲಿ, ಬುದ್ಧಿನೈಪುಣ್ಯದಿಂ ದಾಗಲಿ, ಬಲದಿಂದಾಗಲಿ, ಇಂದ್ರಿಯಶಕ್ತಿಯಿಂದಾಗಲಿ, ವ್ರತಾನುಷ್ಠಾನ ದಿಂದಾಗಲಿ ಫಲವೇನು?!ಮತ್ತು ಭಗವಂತನನ್ನು ಪ್ರೀತಿಗೊಳಿಸದಮೇಲೆ ಪ್ರಾಣಾಯಾಮಾದಿಯೋಗಗಳಿಂದಲೂ, ಆತ್ಮಜ್ಞಾನರೂಪವಾದ ಸಾಂ ಖ್ಯದಿಂದಲೂ, ಸನ್ಯಾಸದಿಂದಲೂ, ಅಧ್ಯಯನದಿಂದಲೂ ಯಾವ ಪ್ರ ಯೋಜನವೂ ಸಿದ್ಧಿಸದು ! ಆ ಶ್ರೀಹರಿಯೊಬ್ಬನೇ ಎಲ್ಲರಿಗೂ ನಿರತಿಶಯ ವಾದ ಪ್ರೀತಿಗೆ ವಿಷಯನಾಗಿರುವನು ! ಆತನೇ ಸಕಲಪುರುಷಾರ್ಥಪ್ರದ ನು ! ಆದುದರಿಂದ ಸಮಸ್ತಶ್ರೇಯಸ್ಸುಗಳಿಗೂ ಆತನೇ ಎಲ್ಲೆಯಾಗಿರು

ವನು. ಸಮಸ್ತಭೂತಗಳಿಗೂ ಅವನೇ ಆತ್ಮದಂತಿರುವನು. ಮರದ ಬು ಡಕ್ಕೆ ನೀರೆರೆದಷ್ಟು, ಅದರ ಶಾಖೋಪಶಾಖೆಗಳೆಲ್ಲವೂ ಪುಷ್ಟಿಹೊಂದು ವುವು. ಪ್ರಾಣಕ್ಕೆ ತೃಪ್ತಿಕರವಾದ ಆಹಾರವನ್ನು ಕೊಟ್ಟಷ್ಟು ಇಂದ್ರಿಯ ಗಳಿಗೆ ತೃಪ್ತಿಯುಂಟಾಗುವುದು. ಆದರಂತೆಯೇ ನಾವು ಸಮಸ್ತದೇವತೆಗಳಿ ಗೂ ಮೂಲಭೂತನಾದ ಆ ಶ್ರೀಮನ್ನಾರಾಯಣನನ್ನು ತೃಪ್ತಿಹೊಂದಿಸಿದ ರೆ,ಸಮಸ್ತದೇವತೆಗಳೂ ತಾವಾಗಿಯೇ ತೃಪ್ತಿಹೊಂದುವರು. ಮಳೆಗಾಲ ದಲ್ಲಿ ಸೂರ್ಯನಿಂದ ಹೊರಟ ನೀರು, ಬೇಸಗೆಯಲ್ಲಿ ತಿರುಗಿ ಆ ಸೂರ್ಯನಲ್ಲಿಯೇ ಹೋಗಿ ಸೇರುವಂತೆಯೂ, ಚರಾಚರಾತ್ಮಕವಾದ ವಸ್ತುಗಳೆಲ್ಲವೂ ಈ ಭೂಮಿಯಲ್ಲಿಯೇ ಹುಟ್ಟಿ ಭೂಮಿಯಲ್ಲಿಯೇ ಲಯಹೊಂದುವಂತೆಯೂ, ಸತ್ವಾದಿಗುಣಗಳ ಪರಿಣಾಮದಿಂದುಂಟಾದ ಈ ಪ್ರಪಂಚವೆಲ್ಲವೂ, ಆ ಹರಿಯೊಬ್ಬನಿಂದಲೇ ಹುಟ್ಟಿ, ಕೊನೆಗೆ ಅವನಲ್ಲಿಯೇ ಲಯಹೊಂದುವು ದು- ಸೂರ್ಯನಿಗೆ ಕಾಂತಿಯು ಹೇಗೋಹಾಗೆ ಈ ಜಗತ್ತೂ ಕೂಡ ಪ ರಮಾತ್ಮನಿಗೆ ವಾಸಸ್ಥಾನವಾಗಿ, ಆತನಿಗೆ ಶರೀರವಾಗಿಯೇ ಇರುವುದು. ಸೂರ್ಯನಿಗೂ, ಅವನ ಕಾಂತಿಗೂ ಪರಸ್ಪರಸಂಬಂಧವು ಯಾವವಿಧವಾಗಿರು ವುದೋ, ಪರಮಾತ್ಮನಿಗೂ ಜಗತ್ತಿಗೂ ಇರುವ ಸಂಬಂಧವೂ ಅದೇವಿಧ ವಾದುದು. ಆ ಭಗವಂತನ ಶರೀರವೇ ಸೃಷ್ಟಿದಶೆಯಲ್ಲಿ ದೊಡ್ಡದಾಗಿ ಜಗ ದ್ರೂಪವಾಗಿ ಕಾಣಿಸಿಕೊಳ್ಳುವುದು. ಸಂಹಾರದಶೆಯಲ್ಲಿ ಕಣ್ಣಿಗೆ ಕಾಣದೆ ಸೂಕ್ಷ್ಮರೂಪಕ್ಕೆ ಉಡುಗಿಕೊಳ್ಳುವುದು.ದ್ರವ್ಯವೆಂಬುದು ನಿತ್ಯವಾದುದು. ಅದಕ್ಕೆ ಯಾವಾಗಲೂ ನಾಶವೇ ಇಲ್ಲವೆಂದು ತಿಳಿಯಿರಿ! ಇದಕ್ಕೆ ಮತ್ತೊಂ ದು ದೃಷ್ಟಾಂತವನ್ನು ಹೇಳುವೆನು ಕೇಳಿರಿ! ಮನುಷ್ಯನು ಎಚ್ಚರಗೊಂ ಡಾಗ ಇಂದ್ರಿಯಗಳೆಲ್ಲವೂ ಕೆಲಸಮಾಡುತ್ತಿರುವುವು. ಎಚ್ಚರಗೊಂಡ ವನ ಮನಸ್ಸಿಗೆ ದೇವಮನುಷ್ಯಾದಿಗಳಾದ ಆಕಾರಭೇದಗಳೆಲ್ಲವೂ ತೋರು ವುವು. ನಿದ್ರಾವಸ್ಥೆಯಲ್ಲಿ ಅದೇ ಮನುಷ್ಯನಿಗೆ ಆ ಭೇದಗಳೊಂದೂ ಕಾ ಣದೆ, ಇಂದ್ರಿಯವ್ಯಾಪಾರಗಳೆಲ್ಲವೂ ಅಡಗಿ ಹೋಗುವುವು. ಆದರಂತೆ ಯೇ ಈ ಜಗತ್ತೂ ಕೂಡ ಒಮ್ಮೊಮ್ಮೆ, ಎಂದರೆ ಸೃಷ್ಟಿದಶೆಯಲ್ಲಿ ಕೆಲಸ ಮಾಡುತ್ತಿದ್ದು, ಮತ್ತೊಮ್ಮೆ ಎಂದರೆ,ಪ್ರಳಯದಶೆಯಲ್ಲಿ ನಿಶ್ಚೇಷ್ಟವಾಗಿ

ಶಾಂತವಾಗುವುದು. ಎಲೈ ರಾಜಕುಮಾರರೆ! ಆಕಾಶದಲ್ಲಿ ಒಮ್ಮೆ ಬೆಳಕೂ ಮತ್ತೊಮ್ಮೆ ಕತ್ತಲೆಯೂ, ಇನ್ನೊಮ್ಮೆ ಮೋಡಗಳೂ ಕಾಣುತಿದ್ದು, ಆಗಾಗ ಅವು ತಮಗೆತಾವೇ ಮರೆಸಿಹೋಗುವಂತೆ, ಪರಬ್ರಹ್ಮದಲ್ಲಿಯೂ ಕೂಡ,ಪ್ರವಾಹರೂಪವಾಗಿ ಹೊರಡುತ್ತಿರುವಸತ್ವರಜಸ್ತಮೋಗುಣಗಳೆಂಬ ಶಕ್ತಿಗಳು,ಒಮ್ಮೊಮ್ಮೆ ಕೆಲಸಮಾಡುವಂತೆ ಕಾಣುತ್ತಿದ್ದು,ಮತ್ತೊಮ್ಮೆ ಶಾಂತವಾಗಿರುವುವು. ಪ್ರಪಂಚವೆಂಬುದು ಆಗಾಗ ಸ್ಥೂಲರೂಪದಿಂದಲೂ ಸೂಕ್ಷ್ಮರೂಪದಿಂದಲೂ ತೋರಿದರೂ.ಪರಮಾತ್ಮನಿಗೆ ಶರೀರವಾದ ಕಾಲ ಪ್ರಕೃತಿಪುರುಷರೆಂಬ ಆ ಮೂರುದ್ರವ್ಯಗಳೂ ನಿತ್ಯವಾಗಿ, ಆತನಿಗೆ ಶರೀರಭೂತವಾಗಿಯೂ ಇದ್ದು,ಅವನ ಇಚ್ಛಾನುಸಾರವಾಗಿ. ಈ ರೂಪಭೇದವನ್ನು ಹೊಂದುವುವು. ಆದುದರಿಂದ ಈ ಲೋಕವೆಲ್ಲವೂ ಅವನೊಬ್ಬನೇ!ಸಮಸ್ತಭೂತಗಳಿಗೂ ಅವನು ಜೀವಸ್ಥಾನದಲ್ಲಿರುವನು. ಅವನೇ ಕಾಲಶರೀರಕನು! ಪ್ರಕೃತಿ ಪುರುಷರಿಬ್ಬರನ್ನೂ ಶರೀರವಾಗಿಹೊಂದಿದವನೂಅವನೇ!ಬ್ರಹ್ಮಾದಿಗಳಿಗೂ ಅತನೇ ನಿಯಾಮಕನು. ಅವನು ತ್ರಿಗುಣಾತ್ಮಕವಾದ ಪ್ರಕೃತಿಯನ್ನು ಶರೀರವಾಗಿ ಹೊಂದಿದ್ದರೂ, ತನ್ನ ತೇಜಸ್ಸಿನಿಂದ ಅದರ ಚೇಷ್ಟೆಯನ್ನು ಅಡಗಿಸಬಲ್ಲನೇಹೊರತು, ಜೀವನಂತೆ ಆ ಪ್ರಕೃತಿದೋಷದಿಂದುಂಟಾಗುವ ಸಂಸಾರಕ್ಕೆ ತಾನು ಕಟ್ಟು ಬೀಳತಕ್ಕವನಲ್ಲ. ಆದುದರಿಂದ ಎಲೈ ರಾಜಕುಮಾರರೇ! ನೀವು ಒಂದೇ ಮನಸ್ಸಿನಿಂದ ಆತನನ್ನೇ ಭಜಿಸಬೇಕು. ಮತ್ತು ಆತನು ಸುಖದುಃಖಾದಿವಿಕಲ್ಪಗಳಿಲ್ಲದವನು. ಅತನಿಗೆ ಸಮಾನವಾದ ವಸ್ತುವು ಬೇರೊಂದಿಲ್ಲ! ದೇವಮನುಷ್ಯಾದಿಭೇದಬುದ್ಧಿಯು ಬಿಟ್ಟು ಹೋದಕೂಡಲೆ ಪ್ರತ್ಯಕ್ಷನಾಗತಕ್ಕವನು. ಆತನಿಗೆ ಜಡತ್ವವೆಂಬುದು ಯಾವಾಗಲೂ ಉಂಟಾಗದು. ಅವನು ಯಾವಾಗಲೂ ಆನಂದಮಯಮೂರ್ತಿಯಾಗಿರುವನು. ಕೊನೆಮೊದಲಿಲ್ಲದವನು. ಆದುದರಿಂದ ನೀವು ಅಭೇದಬುದ್ಧಿಯಿಂದ ಅವನನ್ನು ಭಜಿಸಬೇಕು.ಭೂತದಯೆ,ಇದ್ದುದರಲ್ಲಿತೃಪ್ತಿ, ಇಂದ್ರಿಯಜಯ, ಈ ಮೂರುಕಾರ್ಯಗಳಿಂದ ಆ ಭಗವಂತನನ್ನು ಸುಲಭವಾಗಿ ಸಂತೋಷಪಡಿಸಬಹುದು. ಸಮಸ್ತಕಾಮಗಳನ್ನೂ ಬಿಟ್ಟು ಶುದ್ಧಮನಸ್ಸುಳ್ಳವರು, ತಮ್ಮ ಮನಸ್ಸಿನಲ್ಲಿ ವೃದ್ಧಿಗೊಳಿಸಿದ ಭಕ್ತಿಬಲದಿಂದ ಒಂ

ದಾವರ್ತಿ ಆಭಗವಂತನನ್ನು ತಮ್ಮ ಸಮೀಪಕ್ಕೆ ಬರಮಾಡಿಕೊಂಡರೆ,ಅವ ನು ಅಂತಹ ಭಕ್ತರಹೃದಯವನ್ನು ಕ್ಷಣಮಾತ್ರವೂ ಅಗಲಿರದೆ,ತಾನೇ ಅವ ರಿಗೆ ಅಧೀನನಾಗಿ ನಿಲ್ಲುವನು.ದರಿದ್ರರಿಗೂ,ತನ್ನನ್ನೇ ಧನವಾಗಿ ನಂಬಿದವರಿ ಗೂ,ಬಹಳ ಪ್ರಿಯನಾದ ಆ ಶ್ರೀಹರಿಯು,ವಿದ್ಯಾಮದದಿಂದಲಾಗಲಿ,ಧನಮ ದದಿಂದಲಾಗಲಿ,ಕುಲಮದದಿಂದಲಾಗಲಿ,ಕರ್ಮಮದದಿಂದಲಾಗಲಿ,ಬುದ್ಧಿ ಗೆಟ್ಟು ತನ್ನ ಭಕ್ತರನ್ನು ತಿರಸ್ಕರಿಸತಕ್ಕ ಕುತ್ಸಿತಜನರ ಪೂಜೆಯನ್ನು ಕಣ್ಣೆ ತ್ತಿಯೂ ನೋಡಲಾರನು. ಮತ್ತು ಆ ಭಗವಂತನು ತನಗೆ ನಿತ್ಯಾನಪಾಯಿ ನಿಯಾದ ಲಕ್ಷ್ಮೀದೇವಿಯನ್ನಾಗಲಿ, ಆ ಲಕ್ಷ್ಮೀಕಟಾಕ್ಷಕ್ಕಾಗಿ ಇದಿರುನೋ ಡುತ್ತಿರುವ ಇಂದ್ರಾದಿದೇವತೆಗಳನ್ನಾಗಲಿ ಲಕ್ಷ್ಯಮಾಡದೆ,ತನ್ನ ಭಕ್ತರಲ್ಲಿ ಪ್ರೇಮವಿಟ್ಟು ಅವರನ್ನುದ್ಧರಿಸುವನು, ಇಂತಹ ಭಕ್ತವತ್ಸಲನಾದಭಗವಂ ತನನ್ನು ಭಜಿಸುವವಿಷಯದಲ್ಲಿ, ರಸಜ್ಞನಾದ ಯಾವ ಪುರುಷನು ತಾನೇ ಹಿಂದೆಗೆಯುವನು” ಎಂದನು. “ವಿದುರಾ! ಹೀಗೆ ನಾರದನು ಆ ಪ್ರಚೇತ ಸರಿಗೆ ಪರಮಾತ್ಮತತ್ವವನ್ನೂ ಇನ್ನೂ ಕೆಲವು ಭಗವತ್ಕಥೆಗಳನ್ನೂ ತಿಳಿಸಿ, ಬ್ರಹ್ಮಲೋಕಕ್ಕೆ ತೆರಳಿದನು. ಆಮೇಲೆ ಇತ್ತಲಾಗಿ ಪ್ರಚೇತಸರು, ನಾರ ದನಮುಖದಿಂದ ಹೊರಟ ಲೋಕಪಾವನವಾದ ಆ ಭಗವತ್ಕಥೆಗಳನ್ನೇಮ ನನಮಾಡುತ್ತಾ, ಆ ಭಗವಂತನ ಪಾದವನ್ನೇಧ್ಯಾನಿಸುತಿದ್ದು, ವಿಷ್ಣುಸಾನ್ನಿ ಧ್ಯವನ್ನು ಹೊಂದಿದರು. ವಿದುರಾ! ನೀನು ಕೇಳಿದುದಕ್ಕಾಗಿ ನಾರದನಿಗೂ ಪ್ರಚೇತಸರಿಗೂ ನಡೆದ ಈ ಸಂವಾದವನ್ನು ನಿನಗೆ ತಿಳಿಸಿದೆನು” ಎಂದನು.

ಈ ವಿದುರಮೈತ್ರೇಯಸಂವಾದವನ್ನು ಶುಕಮುನಿಯು ಪರೀಕ್ಷಿದ್ರಾ ಜನಿಗೆ ತಿಳಿಸುತ್ತ, ಅವನನ್ನು ಕುರಿತು, “ಪರೀಕ್ಷಿದ್ರಾಜನೆ! ನೀನು ಕೇಳಿದಂತೆ ಉತ್ತಾನಪಾದನ ವಂಶಕ್ರಮವನ್ನೂ ತಿಳಿಸಿದೆನು. ಇನ್ನು ಪ್ರಿಯವ್ರತನ ವೃತ್ತಾಂತವನ್ನು ಕೇಳು! ಉತ್ತಾನಪಾದನ ತಮ್ಮನಾದ ಆ ಪ್ರಿಯವ್ರತ ನು,ಮೊದಲು ವಿರಕ್ತನಾಗಿ ವನಕ್ಕೆ ಹೋಗಿ,ನಾರದನಿಂದ ಆತ್ಮತತ್ವವನ್ನು ಉಪದೇಶಹೊಂದಿದಮೇಲೆಯೂ,ತಿರುಗಿ ರಾಜ್ಯವನ್ನು ನಡೆಸುತಿದ್ದು,ಕೊನೆಗೆ ಆ ರಾಜ್ಯವನ್ನು ತನ್ನಮಕ್ಕಳಿಗೆಹಂಚಿಕೊಟ್ಟುವಿಷ್ಣುಸಾನ್ನಿಧ್ಯವನ್ನುಹೊಂದಿ ದನು. ಈ ವಿಚಾರಗಳೆಲ್ಲವನ್ನೂ ಮೈತ್ರೇಯನು ವಿದುರನಿಗೆ ತಿಳಿಸುತ್ತಿರುವಲ್ಲಿ

ಈ ಭಗವತ್ಕಥೆಗಳನ್ನು ಕೇಳುತಿದ್ದ ವಿದುರನು,ಭಗವಂತನಲ್ಲಿ ತನಗಿದ್ದ ನಿರತಿಶಯವಾದ ಭಕ್ತಿಯಿಂದಮೈಮರೆತವನಾಗಿ,ಕಣ್ಣುಗಳಲ್ಲಿ ಧಾರೆಧಾರೆಯಾಗಿ ಆನಂದಬಾಷ್ಪವನ್ನು ಸುರಿಸುತ್ತ, ಮನಸ್ಸಿನಿಂದಲೇ ಭಗವಂತನನ್ನು ನಮಸ್ಕರಿಸಿ, ಮೈತ್ರೇಯನ ಪಾದಗಳನ್ನು ಹಿಡಿದು ವಿಜ್ಞಾಪಿಸುವನು. “ಎಲೈ ಮಹಾತ್ಮನೆ! ದಯಾಳುವಾದ ನಿನ್ನಿಂದ ನಾನು ನಾರಾಯಣನನ್ನು ನನ್ನ ಹೃದಯದಲ್ಲಿಯೇ ಸಾಕ್ಷಾತ್ಕರಿಸುವಂತಾಯಿತು ! ಆಹಾ ! ಇದಲ್ಲವೇ ಮಹಾತ್ಮರ ಸಹವಾಸದ ಫಲವು” ಎಂದು ಹೇಳಿ ಆ ಮೈತ್ರೇಯನಿಂದ ಅನುಮತಿಯನ್ನು ಪಡೆದು, ತನ್ನ ಜ್ಞಾತಿಗಳನ್ನು ನೋಡಬೇಕೆಂಬ ಉದ್ದೇಶದಿಂದ ಹಸ್ತಿನಾಪುರಕ್ಕೆ ಹೊರಟು ಹೋದನು.ಎಲೈ ಪರೀಕ್ಷಿದ್ರಾಜನೆ! ಭಗವಂತನಲ್ಲಿ ನಟ್ಟ ಮನಸ್ಸುಳ್ಳ ಈ ವಿದುರಮೈತ್ರೇಯರ ಸಂವಾದಗಳಲ್ಲಿರುವ ಚರಿತ್ರೆಗಳೆಲ್ಲವನ್ನೂ, ಯಾರು ಕೇಳುವರೋ ಅವರು. ಆಯುಸ್ಸು, ಧನ, ಕೀರ್ತಿ, ಮುಂತಾದ ಇಹಲೋಕದ ಭಾಗ್ಯಗಳೆಲ್ಲವನ್ನೂ ಪಡೆದು ದೇಹಾವಸಾನದಲ್ಲಿ ತಪ್ಪದೆ ಮುಕ್ತಿಯನ್ನೂ ಹೊಂದುವರು. ಇದು ಮೂವತ್ತನೆಯ ಅಧ್ಯಾಯವು.

ಚತುರ್ಥಸ್ಕಂಧವು ಸಮಾಪ್ತವು.

ಶು ಭ ಮ ಸ್ತು.

ಶ್ರೀ ಕೃಷ್ಣಾರ್ಪಣಮಸ್ತು.

